ಕನ್ನಡ ಹಸ್ತಪ್ರತಿಗಳ

# ವರ್ಣನಾತ್ಮಕ ಸೂಚೀ

ಐದನೆಯ ಸಂಪುಟ



ಕನ್ನಡ ಅಧ್ಯಯನ ಸಂಸ್ಥೆ : ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ–೩೮೦

ಪ್ರಾಚ್ಯಕಾವ್ಯಮಾಲೆ–೬೮

ಪ್ರಧಾನ ಸಂಪಾದಕ

**ಡಾ. ಹಾ. ಮಾ. ನಾಯಕ**

ವಿಭಾಗ ಸಂಪಾದಕ

**ಎನ್. ಬಸವಾರಾಧ್ಯ**

# ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ

## ಐದನೆಯ ಸಂಪುಟ (ಅ-ಷ)

ಈ ಯೋಜನೆಯಲ್ಲಿ ಭಾಗವಹಿಸಿದ ಸಂಶೋಧನ ಸಹಾಯಕರು

ಡಾ|| ಶ್ರೀ ಎಸ್. ಬಸಪ್ಪ
ಶ್ರೀ ಎಸ್. ಎನ್. ಕೃಷ್ಣಜೋಯಿಸ್
ಶ್ರೀಮತಿ ಎಂ. ಎನ್. ಲೀಲಾವತಿ
ಶ್ರೀ ನಂ. ತಪಸ್ವೀಕುಮಾರ್
ಶ್ರೀ ಎಂ. ಸಿ. ಪದ್ಮನಾಭ ಶರ್ಮ
ಶ್ರೀ ಕೆ. ಆರ್. ಶೇಷಗಿರಿ
ಶ್ರೀ ಜಿ. ಜಿ. ಮಂಜುನಾಥನ್
ಶ್ರೀ ಹ. ಕ. ರಾಜೇಗೌಡ
ಶ್ರೀಮತಿ ವೈ. ಸಿ. ಭಾನುಮತಿ
ಶ್ರೀ ಎಂ. ಪಿ. ಮಂಜಪ್ಪ ಶೆಟ್ಟಿ

# ಕನ್ನಡ ಹಸ್ತಪ್ರತಿಗಳ
# ವರ್ಣನಾತ್ಮಕ ಸೂಚೀ

## ಐದನೆಯ ಸಂಪುಟ (ಅ–ಘ)

ಸಂಯೋಜಕ ಸಂಪಾದಕ

**ಬಿ. ಎಸ್. ಸಣ್ಣಯ್ಯ**



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1980

KANNADA HASTAPRATIGALA VARNANATMAKA SUCHI-SAMPUTA 5 (Descriptive Catalogue of Kannada Manuscripts-Volume V)—Co-ordinating editor: B. S. Sannaiah; published by the Institute of Kannada Studies, University of Mysore, Manasagangotri, Mysore-570 006. First edition: 1980. Pp. xii + 585.



ಬೆಲೆ: ರೂ. 24-00

ಪ್ರಕಾಶಕರು: ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-570 012.

ಮುದ್ರಕರು: ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು-570 008.

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೮ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ. ಶ. ೧೩೪೨ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ ರನ್ನನ 'ಗದಾಯುದ್ಧ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಲಿಖಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ–ಶಾಸ್ತ್ರ–ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ–ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ

ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು ಪೂಜಾರ್ಹವಾಗಿ, ಹಾಲುಂಡು ಮತ್ತೆ ಕತ್ತಲೆ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ, ಈ ಸಂಸ್ಥೆಯ ಸಂಪಾದನ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರ ನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿಯಿಂದ ಬೆಳಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟನಿರೋಧಕ ತೈಲಲೇಪನ ಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂಮನ ಉಪಚಾರ ನೀಡುವುದು (Fumigation Treatment), ತೀರ ತ್ರುಟಿತವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯವಾದ

ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನ್ನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾಸಮರ್ಥರೂ ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥ ವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು; (ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲ ವನ್ನು ತೀರಿಸಿಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತ ಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣ ಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು ಅರ್ಥ ಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯವಿದ್ಯಾಸಂಶೋಧನಾಲಯದ ಅಂಗವಾಗಿ

ದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯ ಕಾವ್ಯಮಾಲೆ'ಯ ಹೆಸರಿನಲ್ಲಿ ಈಗಾಗಲೇ ೬೭ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕುಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನೂ ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೂ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ಭಂಡಾರದಲ್ಲಿ ಸಂಗ್ರಹಗೊಂಡಿರುವ ಹಾಗೂ ಸಂಪಾದನ ವಿಭಾಗದ ಸಹೋದ್ಯೋಗಿಗಳು ಆಗಿಂದಾಗ್ಗೆ ನಡೆಸಿದ ಪರಿವೀಕ್ಷಣ ಕಾರ್ಯಗಳ ಅಂಗವಾಗಿ ಈವರೆಗೆ ದೊರೆತಿರುವ ಹೊಸ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ವ್ಯವಸ್ಥಿತ ರೂಪದಲ್ಲಿ ಹೊರತರುವ ಯೋಜನೆಯ ಅಂಗವಾಗಿ ಈಗ 'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ'ಯ ಐದನೆಯ ಸಂಪುಟ ಪ್ರಕಟವಾಗುತ್ತಿದೆ. ಈ ವರ್ಷಾಂತ್ಯದ ಒಳಗಾಗಿ ಈ ಬಗೆಯ ಇನ್ನೂ ನಾಲ್ಕು ಸಂಪುಟಗಳು ಹೊರಬರಲಿವೆ. ಈ ಎಲ್ಲ ಸಂಪುಟಗಳೂ ಪ್ರಕಟವಾದಾಗ ಕನ್ನಡ ಸಾಹಿತ್ಯದ ಸಮೃದ್ಧಿ ನಿಚ್ಚಳವಾಗಿ ಗೋಚರಿಸುತ್ತದೆ. ವಿದ್ವಾಂಸರಿಗೆ, ಸಂಶೋಧಕರಿಗೆ, ಸಾಹಿತ್ಯಾಸಕ್ತರಿಗೆ ಉಪಯುಕ್ತವಾಗುವಂತಹ ಈ ಸಂಪುಟಗಳ ಸಿದ್ಧತೆಯಲ್ಲಿ ನೆರವಾಗಿರುವ ವಿಭಾಗ ಸಂಪಾದಕರಾದ ಶ್ರೀ ಎಸ್. ಬಸವಾರಾಧ್ಯ ಅವರಿಗೂ, ಸಂಶೋಧನ ಸಹಾಯಕರು ಸಿದ್ಧಪಡಿಸಿದ ಮಾಹಿತಿಯನ್ನು ಸಂಯೋಜಿಸಿದ ಶ್ರೀ ಬಿ. ಎಸ್. ಸಣ್ಣಯ್ಯನವರಿಗೂ, ಮಾಹಿತಿಯನ್ನು ಸಂಗ್ರಹಿಸಿದ ಸಂಶೋಧನ ಸಹಾಯಕರುಗಳಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

ಮಾನವನ ಜ್ಞಾನವಿಕಾಸಕ್ಕೆ ಗ್ರಂಥಭಂಡಾರಗಳು ಬಹುಮುಖ್ಯವಾದ ಸಾಧನಗಳಾಗಿವೆ. ಈ ಗ್ರಂಥಭಂಡಾರಗಳು ಮುದ್ರಿತ ಗ್ರಂಥಗಳನ್ನೂ ಅಮುದ್ರಿತ ಗ್ರಂಥಗಳನ್ನೂ ಒಳಗೊಂಡಿರುತ್ತವೆ. ಮುದ್ರಿತ ಗ್ರಂಥಗಳು ವಾಚಕರಿಗೆ ಸುಲಭಗಮ್ಯವಾದುವು. ಅಮುದ್ರಿತ ಗ್ರಂಥಗಳು ಪರಿಶೀಲನೆಗೆ ದುರ್ಲಭವೂ ದುಸ್ತರವೂ ಆದುವು. ಈ ಹಸ್ತಪ್ರತಿಗಳು ಸುಲಭಸಾಧ್ಯವಾಗಬೇಕಾದರೆ ಇವುಗಳ ವರ್ಣನಾತ್ಮಕ ಸೂಚಿ ಅತ್ಯಂತ ಅವಶ್ಯವಾಗುತ್ತದೆ. ಇಂಗ್ಲಿಷಿನ (Catalogue) ಸೂಚಿ ಮತ್ತು (Descriptive Catalogue) ವರ್ಣನಾತ್ಮಕ ಸೂಚಿ ಇವು ಒಂದಕ್ಕಿಂತ ಮತ್ತೊಂದು ವ್ಯಾಪಕಾರ್ಥವುಳ್ಳ ಶಬ್ದಗಳು. ಕೇವಲ (Catalogue) ಸೂಚಿಗಿಂತ (Descriptive Catalogue) ವರ್ಣನಾತ್ಮಕ ಸೂಚಿ ಬಹುಉಪಯುಕ್ತವಾದುದು ಎಂಬುದು ಸರ್ವವಿದಿತ. ಯಾವುದೇ ಗ್ರಂಥಭಂಡಾರದಲ್ಲಿನ ಎಲ್ಲ ಕೃತಿಗಳನ್ನೂ ಸಮಗ್ರವಾಗಿ ಪರಿಶೀಲಿಸುವುದು ಸಾಧ್ಯವಾಗದ ಕೆಲಸ. ಆದರೆ ಈ ವರ್ಣನಾತ್ಮಕ ಸೂಚಿ(Descriptive Catalogue)ಯಿಂದ ಎಲ್ಲ ಕೃತಿಗಳ ಒಂದು ಸಂಕ್ಷಿಪ್ತ ಮಾಹಿತಿ ಪಡೆದುಕೊಳ್ಳುವುದು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಗ್ರಂಥಭಂಡಾರಗಳಲ್ಲಿನ ಹಸ್ತಪ್ರತಿಗಳ ಕೃತಿಗಳ ವರ್ಣನಾತ್ಮಕ ಸೂಚಿ ಅವಶ್ಯವಷ್ಟೇ ಅಲ್ಲ ಅನಿವಾರ್ಯವೂ ಹೌದು. ಈ ವರ್ಣನಾತ್ಮಕ ಸೂಚಿಯಿಂದ ಯಾವುದೇ ಒಂದು ಕೃತಿಯ ಸಂಕ್ಷಿಪ್ತ ಸಮಗ್ರ ಮಾಹಿತಿ ದೊರಕಿದಂತಾಗುತ್ತದೆ. ವಿದ್ವಾಂಸರಿಗೂ ಸಂಶೋಧಕರಿಗೂ ಈ ಸೂಚಿಗಳು ಕೈಪಿಡಿಗಳಂತಿರುತ್ತವೆ. ಇವುಗಳಿಂದ ಯಾವ ಯಾವ ಗ್ರಂಥಭಂಡಾರದಲ್ಲಿ ಯಾವ ಯಾವ ಕೃತಿಗಳು ಉಪಲಬ್ಧವಿವೆ, ಅವುಗಳ ಸ್ವರೂಪ ಸ್ಥಿತಿಗತಿ ಎಂತಹುದು ಎಂಬುದನ್ನು ಅರಿತುಕೊಳ್ಳಬಹುದಾಗಿದೆ. ಒಟ್ಟಿನಲ್ಲಿ ಈ ವರ್ಣನಾತ್ಮಕ ಸೂಚಿಗಳು ಮೂಲಕೃತಿಗಳ ಒಂದು ಸಂಕ್ಷಿಪ್ತ ಸಮಗ್ರ ನೋಟವನ್ನು ನೀಡಬಲ್ಲವು. ಈ ಸೂಚಿಗಳ ಅವಲೋಕನದಿಂದ ಮೂಲಕೃತಿಗಳ ಅವಲೋಕನವನ್ನೇ ಮಾಡಿದಂತಾಗುತ್ತದೆ. ಈ ದೃಷ್ಟಿಯಿಂದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ಪ್ರಕಟಣೆ ಅತ್ಯಂತ ಮಹತ್ವಪೂರಿತವಾದುದು. ಗ್ರಂಥಭಂಡಾರವನ್ನು ಸೂರೆಗೊಡೆದು ತೋರುವಂತಹ ಕಾರ್ಯ ಇದು. ಇಂತಹ ಕಾರ್ಯವನ್ನು ಕನ್ನಡ ಅಧ್ಯಯನ ಸಂಸ್ಥೆ ಕೈಕೊಂಡಿದೆ.

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ನಾಲ್ಕು ಸಂಪುಟಗಳನ್ನು ಪ್ರಾಚ್ಯವಿದ್ಯಾಸಂಶೋಧನಾಲಯದಿಂದ ಈಗಾಗಲೇ ಪ್ರಕಟಿಸಲಾಗಿದೆ. ಉಳಿದ ಐದು ಸಂಪುಟಗಳನ್ನು ಈಗ ಹೊರತರಲಾಗುತ್ತಿದೆ. ಈ ಸಂಪುಟಗಳಲ್ಲಿ ಅನುಸರಿಸಿರುವ ವಿಧಿವಿಧಾನಗಳನ್ನು ಸಂಯೋಜಕ ಸಂಪಾದಕರ ಅರಿಕೆಯಲ್ಲಿ ವಿವರಿಸಲಾಗಿದೆ.

ಈಗ ಪ್ರಕಟವಾಗುತ್ತಿರುವುದು ಐದನೆಯ ಸಂಪುಟ. ಇದರಲ್ಲಿ ಅಕಾರದಿಂದ ಘಕಾರದ ವರೆಗೆ ಪೂರ್ತಿ ಒಟ್ಟು 735 ಕೃತಿಗಳ ವಿವರಣೆಯನ್ನು ಕೊಟ್ಟಿದೆ. ವಿದ್ವಾಂಸರಿಗೂ ಸಂಶೋಧಕರಿಗೂ ಅತ್ಯಂತ ಉಪಯುಕ್ತವಾದ ಈ ಆಕರಗ್ರಂಥವನ್ನು ಕನ್ನಡಜನತೆ ಆದರದಿಂದ ಸ್ವಾಗತಿಸುವರೆಂದು ನಂಬಲಾಗಿದೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

ಎಸ್. ಬಸವಾರಾಧ್ಯ
ವಿಭಾಗ ಸಂಪಾದಕ

# ಅರಿಕೆ

ಮುದ್ರಣ ಸೌಕರ್ಯವಿಲ್ಲದಿದ್ದ ಕಾಲದಲ್ಲಿ ಪ್ರಾಚೀನ ಗ್ರಂಥಗಳು ಓಲೆಗರಿಗಳಲ್ಲಿ, ಕ್ರಮೇಣ ಕಡತ, ಕಾಗದಗಳಲ್ಲಿ ಕೈಬರಹದ ಮೂಲಕ ಒದಗಿಬಂದಿವೆ. ಇಂತಹ ಹಸ್ತಪ್ರತಿಗಳು ನಾಡಿನ ಮೂಲೆ ಮೂಲೆಗಳಲ್ಲಿ ಹರಡಿವೆ. ಈ ಹಸ್ತಪ್ರತಿಗಳಲ್ಲಿ ಕನ್ನಡ ಕೃತಿಗಳನ್ನು ಕರ್ಣಾಟಕ ಹಾಗೂ ಇತರೆಡೆಗಳಿಂದ ಸಂಗ್ರಹಿಸಿ ಸಂಸ್ಥೆಯ ಹಸ್ತಪ್ರತಿ ಭಂಡಾರಕ್ಕೆ ಸೇರಿಸಲಾಗಿದೆ ಕೆಲವು ಗ್ರಂಥಗಳನ್ನು ಮೈಕ್ರೊಫಿಲಂ ರೂಪದಲ್ಲಿಯೂ ಸಂಗ್ರಹಿಸಲಾಗಿದೆ. ಆದರೆ ಮೈಕ್ರೊಫಿಲಂಗಳ ಸೂಚಿಯನ್ನೇ ಪ್ರತ್ಯೇಕವಾಗಿ ಹೊರತರಬೇಕೆಂಬ ಉದ್ದೇಶವಿರುವುದರಿಂದ ಅವುಗಳನ್ನು ಇಲ್ಲಿ ಸೇರಿಸಿಲ್ಲ.

೧೯೫೪ರವರೆಗೆ ಸಂಗ್ರಹಿಸಿದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯು ನಾಲ್ಕು ಸಂಪುಟಗಳು ೧೯೬೨-೬೫ರಲ್ಲಿ ಪ್ರಾಚ್ಯವಿದ್ಯಾಸಂಶೋಧನಾಲಯ ಮಾಲೆಯಲ್ಲಿ ಹೊರಬಂದಿವೆ. ಅಲ್ಲಿಂದೀಚೆಗೆ ಮಾರ್ಚ್ ೧೯೭೮ರವರೆಗೆ ಸಂಗ್ರಹಿತವಾದ ಹಸ್ತಪ್ರತಿಗಳ ಸೂಚಿಗಳು ಈಗ ಐದು ಸಂಪುಟಗಳಲ್ಲಿ ಹೊರಬರುತ್ತಿವೆ.

ಈ ಸೂಚೀಪಟ್ಟಿಕೆಯಲ್ಲಿ ಮೊದಲು ಕ್ರಮಾಂಕವನ್ನು ಆಂಗ್ಲ ಸಂಖ್ಯೆಯಲ್ಲಿ ಕೊಟ್ಟು ಅನಂತರ ಗ್ರಂಥದ ಸಂಖ್ಯೆಯನ್ನು ಕನ್ನಡ ಅಂಕಿಗಳಲ್ಲಿ ಕೊಡಲಾಗಿದೆ. ಈ ಅಂಕಿಗಳ ಹಿಂದೆ 'ಕೆ' ಎಂದಿದ್ದರೆ ಓಲೆಯ ಪ್ರತಿಯೆಂದೂ, 'ಕೆ.ಎ.' ಎಂದಿದ್ದರೆ ದೊಡ್ಡ ಅಳತೆಯ ಕಾಗದದ ಪ್ರತಿ, 'ಕೆ.ಬಿ.' ಎಂದಿದ್ದರೆ ಚಿಕ್ಕ ಅಳತೆಯ ಕಾಗದದ ಪ್ರತಿಯೆಂದೂ ತಿಳಿಯಬೇಕು. ಒಂದೇ ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಗ್ರಂಥಗಳಿದ್ದಾಗ ಆ ಗ್ರಂಥವು ಆ ಕಟ್ಟಿನಲ್ಲಿ ಎಷ್ಟನೆಯದೆಂಬುದನ್ನು ಸೂಚಿಸಲು ಹಸ್ತಪ್ರತಿಸಂಖ್ಯೆಯ ಮುಂದೆ ಒಂದು ಓರೆಗೀಟನ್ನು ಹಾಕಿ ಅದರ ಮುಂದೆ ಗ್ರಂಥದ ಸಂಖ್ಯೆಯನ್ನು ಕೊಡಲಾಗಿದೆ. ಅನಂತರ ಗ್ರಂಥದ ಹೆಸರು, ಪ್ರಭೇದಗಳನ್ನು ಕೊಟ್ಟಿದೆ. ಎರಡನೆಯ ಸಾಲಿನಲ್ಲಿ ಹಸ್ತಪ್ರತಿಯ ಅಳತೆ, ಗ್ರಂಥದ ಕರ್ತೃ, ಆತನ ಕಾಲಗಳನ್ನು ಕೊಡಲಾಗಿದೆ. ಇವು ತಿಳಿಯದಿದ್ದಾಗ ಪ್ರಶ್ನಾರ್ಥಕ ಚಿಹ್ನೆಗಳನ್ನು ಸೂಚಿಸಲಾಗಿದೆ. ಕವಿ ಮತ್ತು ಕಾಲವಿಚಾರಗಳಿಗೆ ಬಹುಮಟ್ಟಿಗೆ ಕರ್ಣಾಟಕ ಕವಿಚರಿತೆಯನ್ನು ಅವಲಂಬಿಸಿದೆ. ಮೂರನೆಯ ಸಾಲಿನಲ್ಲಿ ಪತ್ರಸಂಖ್ಯೆಗಳನ್ನೂ, ಪ್ರತಿ ಪತ್ರದ ಒಮ್ಮುಖದಲ್ಲಿ ಎಷ್ಟು ಪಂಕ್ತಿಗಳಿವೆಯೆಂಬುದನ್ನೂ, ಪ್ರತಿ ಪಂಕ್ತಿಯಲ್ಲಿ ಎಷ್ಟು ಅಕ್ಷರಗಳಿವೆಯೆಂಬುದನ್ನೂ ಕೊಟ್ಟಿದೆ. ಪತ್ರ ಎಂದಿದ್ದಾಗ ಎರಡು ಕಡೆಯೂ ಸೇರಿ ಒಂದು ಪತ್ರವೆಂತಲೂ, ಪುಟ ಎಂದಿದ್ದರೆ ಪ್ರತಿ ಪಕ್ಕಕ್ಕೂ ಪುಟಸಂಖ್ಯೆ ಇದೆಯೆಂದೂ ತಿಳಿಯಬೇಕು. ಪತ್ರದ ಒಂದೇ ಕಡೆ ಬರವಣಿಗೆಯಿದ್ದರೆ ಅದನ್ನು ವಿಶೇಷದಲ್ಲಿ ಸೂಚಿಸಲಾಗಿದೆ.

ಗ್ರಂಥದ 'ಆದಿ' ಮತ್ತು 'ಅಂತ್ಯ' ಭಾಗಗಳಿಂದ ಉದ್ಧರಿಸುವಾಗ ಹಸ್ತಪ್ರತಿಗಳಲ್ಲಿ ಇದ್ದಂತೆಯೇ ಯಾವ ತಿದ್ದುಪಡಿಯೂ ಇಲ್ಲದೆ ಕೊಡಲಾಗಿದೆ. ಆದರೆ ಕೆಲವೆಡೆ ಪದ್ಯಗಳನ್ನು ಕೊಡುವಾಗ ಛಂದಸ್ಸಿಗನುಸಾರವಾಗಿ ವಿಭಾಗಿಸಲಾಗಿದೆ. ಮೂಲಪ್ರತಿಯಲ್ಲಿ ಇದ್ದಂತೆಯೇ ಕೊಡುವುದರಿಂದ ಹಸ್ತಪ್ರತಿಗಳ ಸ್ವರೂಪ ವ್ಯಕ್ತವಾಗುತ್ತದೆ. ಈ ಉದ್ಧೃತ ಭಾಗಗಳಲ್ಲಿ ಕೆಲವು ಕಡೆ (............) ಈ ಚಿಹ್ನೆಯನ್ನು ಹಾಕಿರುವಲ್ಲಿ ಗ್ರಂಥಲೋಪವೆಂದೂ (xxx) ಈ ಗುರುತಿರುವೆಡೆಯಲ್ಲಿ ಗ್ರಂಥಭಾಗವಿದ್ದರೂ ಬಿಟ್ಟು ಮುಂದಿನ ಭಾಗ ಕೊಟ್ಟಿದೆಯೆಂದೂ ತಿಳಿಯಬೇಕು. 'ವಿಷಯ' ವಿಭಾಗದಲ್ಲಿ ಗ್ರಂಥದ ಪ್ರತಿಪಾದ್ಯ ವಿಷಯವನ್ನು ಒಂದೊಂದು ವಾಕ್ಯದಲ್ಲಿ ಸೂಚಿಸಲಾಗಿದೆ. 'ವಿಶೇಷ' ವಿಭಾಗದಲ್ಲಿ ಗ್ರಂಥದ ಲಿಪಿ, ಸ್ಥಿತಿ, ಶಕಟರೇಫದ ಬಳಕೆ, ಅಸಮಗ್ರ, ಲುಪ್ತಪತ್ರಗಳ ವಿವರಣೆ, ಅದೇ ಕಟ್ಟಿನಲ್ಲಿರುವ ಇತರ ಗ್ರಂಥಗಳ ವಿವರಗಳನ್ನು ಸಂಗ್ರಹವಾಗಿ ಸೂಚಿಸಿದೆ. ಸಂಸ್ಕೃತ ಮತ್ತು ಇತರ ಭಾಷೆಯ ಗ್ರಂಥಗಳನ್ನು ಪ್ರತ್ಯೇಕವಾಗಿ ಪಟ್ಟಿಮಾಡಿ ಕೊನೆಯ ಸಂಪುಟದ ಅನುಬಂಧದಲ್ಲಿ ಕೊಡಲಾಗಿದೆ.

ಈ ಐದು ಸಂಪುಟಗಳಲ್ಲಿಯೂ ಹಿಂದಿನ ನಾಲ್ಕು ಸಂಪುಟಗಳ ಕ್ರಮವನ್ನೇ ಅನುಸರಿಸಿದೆ. ಆದರೆ ಹಸ್ತಪ್ರತಿಗಳ ವಿವರಣೆಗಳನ್ನು ಬರೆದವರ ಹೆಸರಿನ ಆದ್ಯಕ್ಷರಗಳನ್ನು ಆಯಾ ನಮೂದಿನ ಕೆಳಗೆ ಕೊಡಲಾಗಿದೆ. ಅವುಗಳ ವಿವರ ಹೀಗಿದೆ :

ಎನ್‌ಬಿಎ—ಎನ್. ಬಸವಾರಾಧ್ಯ
ಬಿಎಸ್‌ಎಸ್—ಬಿ. ಎಸ್. ಸಣ್ಣಯ್ಯ
ಎಸ್‌ಬಿ—ಎಸ್. ಬಸಪ್ಪ
ಎಸ್‌ಎನ್‌ಕೆ—ಎಸ್. ಎನ್. ಕೃಷ್ಣಜೋಯಿಸ್
ಎಂಎಸ್‌ಎಲ್—ಎಂ. ಎಸ್. ಲೀಲಾವತಿ
ಶ್ರೀಸಂತ—ಸಂ. ತಪಸ್ವೀಕುಮಾರ್
ಎಂಸಿಪಿ—ಎಂ. ಸಿ. ಪದ್ಮನಾಭ ಶರ್ಮ
ಕೆಆರ್‌ಎಸ್—ಕೆ. ಆರ್. ಶೇಷಗಿರಿ
ಜಿಜಿಎಂ—ಜಿ. ಜಿ. ಮಂಜುನಾಥನ್
ಹಕರಾ—ಹ. ಕ. ರಾಜೇಗೌಡ
ವೈಸಿಬಿ—ವೈ. ಸಿ. ಭಾನುಮತಿ
ಎಂಪಿಎಂ—ಎಂ. ಪಿ. ಮಂಜಪ್ಪಶೆಟ್ಟಿ

ಈಗಾಗಲೆ ಪ್ರಕಟವಾಗಿರುವ ನಾಲ್ಕು ಸಂಪುಟಗಳ ಮತ್ತು ಈಗ ಪ್ರಕಟವಾಗುತ್ತಿರುವ ಐದು ಸಂಪುಟಗಳ ಕೃತಿಗಳ ಮತ್ತು ಕರ್ತೃಗಳ ಅಕಾರಾದಿ ಪಟ್ಟಿಯನ್ನು ಕೊನೆಯ ಸಂಪುಟದಲ್ಲಿ ಕೊಡಲಾಗುವುದು.

ಈ ಕಾರ್ಯದಲ್ಲಿ ಸಹಕರಿಸಿದ ವಿಭಾಗದ ಎಲ್ಲ ಸಹೋದ್ಯೋಗಿಗಳಿಗೆ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

**ಬಿ. ಎಸ್. ಸಣ್ಣಯ್ಯ**
ಸಹಾಯಕ ನಿರ್ದೇಶಕ

1

| ಕೆ. ೮೫೪ | **ಅಂಜನಾಚರಿತೆ** | ಸಾಂಗತ್ಯ |
|---|---|---|
| ೧೩.೭″ × ೧.೮″ | ಶಿಶುಮಾಯಣ | ಸು. ೧೭೪೦ |
| ೧-೧೪೬ ಪತ್ರ | ೯ ಪಂಕ್ತಿ | ೬೦ ಅಕ್ಷರ |

**ಆದಿ :** ಯಿದು ಅಂಜನಾ ಚರಿತೆ.
ಶ್ರೀಮದಮರ ವಂದ್ಯನಾದಿ ಜಿನನ ಪಾದ
ತಾ.................ದ್ವಯಮೆಂನಾ
ರಾಮಣೀಯಕ ಹೃತ್ಸರಸಿಯೊಳೊಗೆಯಲೆಂ
ದಾ ಮುದದಿಂದ ವಂದಿಪೆನೂ ೧

**ಅಂತ್ಯ :** ಪಂಚಾಣುವ್ರತಗಳ ಕೈಕೊಂಡು ತಪದಿಂದ
ಪಂಚೇಂದ್ರಿಯಗಳನೆಲ್ಲಾ
ವಂಚಿಸಿ ಹನುಮಾಂನ್ಯ ಮುಕ್ತಿಯ ಪಡೆದಲ್ಲಿ
ಪಂಚಾದಶ ಸಂಧಿಯಾಯ್ತು ೧೦೮

ಅಂತು ಸಂಧಿ ೧೫ಕ್ಕಂ ಪದನು ೩೧೦೦ಕ್ಕಂ ಗ್ರಂಥ ಲೆಕ್ಕದಲ್ಲಿ ೬೦೦೦ ಮಂಗಲ ಮಹಾಶ್ರೀ

ದುಮ್ಮುಕ್ತಿ ಸಂವತ್ಸರದ ಕಾರ್ತಿಕ ಬ. ೩ ಗುರುವಾರ ದಿನ ಸೂರ್ಯ ಉದೆಯವಾ ೪ ಘಳಿಗ್ಗೆ ಸಲ್ಲೂರ ದೇವಪ್ಪರ ಮಗ ಬೊಂಮಪ್ಪನು ಅರೆಯ ಪಾತೆಯ ಸಾತು ತರಗರಿಗೆ ಬರೆದ ಅಂಜನಾ ಚರಿತೆ ಸಮಾಪ್ತ ಶುಭಮಸ್ತು

X X X

ದುಮ್ಮುತಿ ಸಂವತ್ಸರದ ಆಶ್ವಯುಜ ಶು. ೨ ರವಿವಾರ ದಿನ ಸೂರ್ಯೋದಯವಾ ೨ ಘಳಿಗೆ ಅಂಜನಾ ಚರಿತೆಯ ತೊಡಗಿ ಬರದು ಕಾರ್ತಿಕ ಬ ೩ ಗುರುವಾರ ದಿನ ಸೂರ್ಯ್ಯ ಉದೆಯವಾದ ನಾಲ್ಕು ಘಳಿಗ್ಗೆ ಸಂಪೂರ್ನ್ನ ವಾಯ್ತು ಭದ್ರಂ ಭೂಮಾತ್ ಜಯಜಯಾ॥

**ವಿಷಯ :** ಸುಲಕ್ಷಣಯುತೆ ಸತಿಯಾದ ಅಂಜನಾದೇವಿಯ ಕಥೆ.

**ವಿಶೇಷ :** ಸಮಗ್ರ. ಶಕಟರೇಫವನ್ನು ಬಳಸಿದೆ. ಅಲ್ಲಲ್ಲಿ ಗರಿಗಳಿಗೆ ಹುಳು ಹೊಡೆದಿದೆ. ಕೆಲವು ಗರಿಗಳ ಅಂಚುಗಳು ಮುರಿದು ಲುಪ್ತವಾಗಿವೆ.

—ಕೆಆರ್‌ಎಸ್

2

| ಕೆ. ೧೪೨೫ | **ಅಂಜನಾ ಚರಿತೆ** | ಸಾಂಗತ್ಯ |
|---|---|---|
| ೧೧.೪" × ೨" | ಶಿಶುಮಾಯಣ | ಸು. ೧೨೪೦ |
| ೧-೧೫೦ ಪತ್ರ | ೯ ಪಂಕ್ತಿ | ೬೦ ಅಕ್ಷರ |

**ಆದಿ:** ಅಂಜನೆಯ ಚರಿತೆ
ಶ್ರೀವೀತರಾಗಾಯನಮಃ। ನಿರ್ವಿಘ್ನಮಸ್ತು
ಶ್ರೀಮದಮರವಂದ್ಯನಾದಿ ಜಿನನ ಪದ
.............................
...........................ದಯಿಸಲೆಂದು
ಪ್ರೇಮವೆರಸಿ ನತನಹೆನು॥ ೧

X X X

ತರಳ ಮಾಯಂಣನೀ ತರಳಮತಿಯನೊಂದು
ಪರಿಯೊಳು ನೋಡಬೇಕೆಂದು
ವರಬೆಳುಕದೆಯ ಪುರದೆಱೆಯ ಗುಂಮಟರಾಜ
ಕರೆದಿಂತೆಂದನೊಂದಿವಸಾ॥ ೧೦೦
ಅಂಜನಾದೇವಿಯ ಚರಿತವನಿಳೆಯೊಳು
ರಂಜಿಸುವೊಲು ಪೇಳೆನಲು
ಕಂಜಾಕ್ಷನ ಸುತಭಂಜನ ಜಿನಪದ
ಕಂಜಕೆಱಗಿ ಕೈಕೊಂಡೆಂ॥ ೧೦೧

**ಅಂತ್ಯ:** ಮಳೆಯಿನಿಸುಳಿಯದೆ ಕೊಳಲಿ ಸಕಲವಸ್ತು
ಬೆಳೆಯಲಿಳಾತಳದೊಳಗೆ
ಸುಳಿವ ಮಹಾಮೃತ್ಯು ಮೊದಲಾದ ಕಂಟಕ
ವಳಿದಖಿಲವು ಸುಖಮಿಂರಲಿ॥ ೯೦
ಅಂತು ಸಂಧಿ ೧೫ಕ್ಕಂ ಪದ ೪೧೨ಲಕ್ಕಂ ಮಂಗಲ ಮಃಹಾ ಶ್ರೀ

**ವಿಷಯ:** ಅಂಜನಾದೇವಿಯ ಚರಿತ್ರೆ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

3

| ಕೆ. ಎ. ೫೯೦ | **ಅಂಜನಾಚರಿತೆ** | ಸಾಂಗತ್ಯ |
|---|---|---|
| ೧೨.೮" × ೮.೧" | ಶಿಶುಮಾಯಣ | ಸು. ೧೨೪೦ |
| ೧-೬೨೪ ಪತ್ರ | ೨೦ ಪಂಕ್ತಿ | ೧೨ ಅಕ್ಷರ |

ಆದಿ: ಅಂಜನಾ ಚರಿತ್ರೆ॥ (ಜೈನಗ್ರಂಥಾ)

ಸಾಂಗತ್ಯ : ಶ್ರೀಮದಮರವಂದ್ಯನಾದಿಜಿನನ ಪಾದ
ತಾಮರ ಸದ್ವಯವೆನ್ನ
ರಾಮಣೀಯಕ ಹೃತ್ಸರಸಿಯೊಳಿಗೆಯಲೆಂ
ದಾ ಮುದದಿಂದ ಮಂದಿಪೆನು ೧

ಜಾತಿ ಜರಾಮರಣಗಳೆಂಬ ತ್ರಿಪುರವ
ಭೂತಳವೆಲ್ಲರಿವಂತು
ವ್ರೋತುಸುಟ್ಟ ಜಿತಜಿನೇಶನ ಪದವನ
ಜಾತಗಳಿಗೆ ನಮಿಸುವೆನು ೨

ಅಂತ್ಯ : ಪಂಚಾಣುವ್ರತಗಳ ಕೈಕೊಂಡು ತಪದಿಂದ
ಪಂಚೇಂದ್ರಿಯಂಗಳನೆಲ್ಲ
ವಂಚಿಸಿ ಹನುಮಾಂನ್ಯ ಮುಕ್ತಿಯ ಪಡೆದಲ್ಲಿ
ಪಂಚಾದಶ ಸಂಧಿಯಾಯ್ತು ೧೦೪

ಅಂತು ಸಂಧಿ ೧೫ಕ್ಕಂ ಪದನು....... ....ಮಂಗಳ ಮಹಾ ಶ್ರೀ

ವಿಷಯ : ಜಾತಿ, ಜರಾಮರಣಗಳೆಂಬ ತ್ರಿಪುರವನ್ನು ಸುಟ್ಟ ಕಥೆ.

ವಿಶೇಷ : ಸಮಗ್ರವಾಗಿದೆ. ಪ್ರತಿಕಾರರು ಶ್ರೀ. ಕೆ. ಆರ್. ಶೇಷಗಿರಿ. ಪತ್ರದ ಒಂದು ಕಡೆ ಮಾತ್ರ ಬರವಣಿಗೆಯಿದೆ.

—ವೈಸಿಬಿ

## 4

| ಕೆ. ಬಿ. ೬೦೬ | ಅಂಬಾಸ್ತುತಿ | ಹಾಡುಗಳು |
|---|---|---|
| ೧೮″×೬″ | ? | ? |
| ೧-೪ ಪತ್ರ | ೨೪ ಪಂಕ್ತಿ | ೨೩ ಅಕ್ಷರ |

ಆದಿ : ಶ್ರೀಗುರುಭ್ಯೋನಮಃ ಶ್ರೀವಿನಾಯಕಾಯ ನಮಃ ಶ್ರೀ ಶಾರದಾಂಬಾಯೈ ನಮಃ ಅಂಬಾಸ್ತುತಿ ಬರುವುದಕ್ಕೆ ನಿರ್ವಿಘ್ನಮಸ್ತು ರಾಗ। ತೋಡಿ। ಆದಿತಾಳ
ದೇವಿ ದಯವು ಬಾರದೆ ಎನ್ನಾಯ ಮೇಲೆ
ಅಂಬಾ ದಯವು ಬಾರದೆ ದೇವಿ ಶರಣು
ಹೊಕ್ಕರೆ ಕಾಯ್ವುತೆ ವಸುಧೆಯ ಭಾಸ
ದೀನರಿಗೆ ಶಿರಿಯಿವಿಯಿದು ನಿನಾಗೆ ಸೋಲಿ
ಅಂಬಾ ದಯವು ॥ಪಲ್ಲ॥

ಎಲ್ಲಾ ಬಗೆಯಲಿ ಭಜಿಸಿದೆ ನಿನ್ನಾನು ನಾನು ಸೊಲ್ಲು ಸೊಲ್ಲಿಗೆನೆ ನಾವೆ । ಅಲ್ಲಾ ನಿನ್ನಯ ನಡತೆಲ್ಲಾ ಸಾಧುಗಳು ಮೆಚ್ಚುವರಲ್ಲಾ ಬಹದಿವಾಸ ವಾಯಿತಲ್ಲಾ ವಲಿಯಬೇಕಲ್ಲಾ ಅಂಬಾ ॥೧॥ ನಾನೇ ನಿತ್ಯಾಕಾಲದಲಿ ಮಾಡಿದೆ ಧ್ಯಾನಾ ಸೋನೇ ಸುರಿದಂದಾದಿ ಏನೇ ಸುಮ್ಮನೆ ಇದ್ದೀಯೇನೇ ಗಯ್ಯಾಳಿತನವೇನೇ ಸಾಲಗಾಳು ಬೇಕೇನೇ ಕೊಡೂಬೇಕು ನೀನೇ ಅಂಬಾ ದಯ ॥೨॥

ಪೊರವೆಪೇ ಚಿದಾನಂದನಾ । ಕೂಟುಂಬಿಣಿಯುಂದೂ
ಮೆರವೇ ನಿತ್ಯಾಲನುದಿನಾ ಧರವೆ ಒಗಳಾಮುಖಿಯುಂಬೋ
ಗರುವೇ ಅಹಮ್ಮದ ಮದವೇ ನಾನಿನ್ನ ತರುವೇ
ಬೇಡಿದ ವರವೇ ಅಂಬಾ ದಯವು ಬಾರದೆ ೩

**ಅಂತ್ಯ**: ಶ್ರೀರಾಮ ಜಯಜಯಾ ಸೀತೆ ಮನೋಹಾರಾ
ಕಾರುಣ್ಯಸಾಗರಾ ಕರುಣಾವಾರಿಧಿಯೇ ೩೨

ಇಂತು ನಾಲ್ವರು ತಮ್ಮ ಕಾಂತೆಯರಿಂದೊಪಿರಲೂ
ಕಾಂತ್ರಾಮಣಿಯರು ಶೋಭಿಸಲಾರತಿ ನಿಂತು ಯೆತ್ತಿದರೂ ೩೩

ಶ್ರೀ ಶ್ರೀ ಶ್ರೀ ಮಂಗಳಾರ್ತಿ

**ವಿಷಯ :** ಆರತಿ, ಶೋಭಾನೆ, ಉರಟಣೆ ಪದಗಳು.

**ವಿಶೇಷ**: ಅಸಮಗ್ರ.

—ಎಂ ಎನ್ ಎಲ್

## 5

ಕೆ. ಬಿ. ೬೫೯/೨ — **ಅಂಬಾಸ್ತುತಿ** — ಸ್ತುತಿಪದ್ಯ

೯.೫″ × ೭″ — ? — ?

೩೫-೩೮ ಪುಟ — ೧೬ ಪಂಕ್ತಿ — ೧೬ ಅಕ್ಷರ

**ಆದಿ**: ಶ್ರೀ ಗಣೇಶಾಯ ನಮಃ ಶ್ರೀ ಶಾರದಾ ಗುರುಬ್ಯೋ ನಮಃ ಅಂಬಾಸ್ತುತಿ ಬರೆವುದಕೆ ಶುಭಮಸ್ತು

ಶ್ರೀಮದಖಿಳಾಂಡಕೋಟಿ ಬ್ರಹ್ಮಾಂಡನಾಯಕೆ
ಅನೇಕ ಕಲ್ಯಾಣಗುಣನಿಲಯೆ। ಅದ್ವೈತ ದ್ವೈತ ನ್ಯಾತ್ಮಕೆ।
ಅಪ್ರತರ್ಕ ನಿಜಪ್ರಭವೆ। ಆದಿಮದ್ಯಾಂತ ಅವತಾರಹಿತೆ।
ನಾದ ಬಿಂದು ಕಳಾತೀತೆ। ವೇದಾಂತವೇದ್ಯೆ । ಕದಂಬವನ
ಲೋಚನೆ। ಕನಕಮಾಲಾಲಂಕೃತಿಕೆ–

**ಅಂತ್ಯ :** ಕೊಲ್ಲಾಪುರಿ ಮಹಾಲಕ್ಷ್ಮಿ। ಮಹಾಕಾಳಿ ಪಾರ್ವತಿ ನಮಸ್ತೆ ನಮಸ್ತೆ ನಮಃ। ಸರ್ವಮಂಗಳ ಮಾಂಗಲ್ಯೆ ಶಿವೆ ಸರ್ವಾರ್ಥಸಾಧಿತೆ। ಶರಣ್ಯೆತ್ರ್ಯಂಬಕೆ ದೇವಿ ನಾರಾಯಣಿ ನಮೋಸ್ತುತೆ.

**ವಿಷಯ :** ಅಂಬಾಭವಾನಿ ಸ್ತುತಿ.

**ವಿಶೇಷ :** ಶಿಥಿಲ.

—ಹಕರಾ

## 6

ಕೆ. ೯೨೩ **ಅಂಬಿಕಾ ವಿಜಯ** ಭಾಮಿನೀ ಷಟ್ಪದಿ

೧೩″ × ೨″ ಬೊಬ್ಬೂರು ರಂಗ ಸು. ೧೭೫೦

೭-೨೪೪ ಪತ್ರ ೧೦ ಪಂಕ್ತಿ ೩೫ ಅಕ್ಷರ

**ಆದಿ :** ..............................
....................ಳಮಂದಿ
ರವಹವಿವು ಗುರುನಿಳಯ ಕವಿಸಾಮಂದ ಗೇಹವಿವು।
ವಿವಿಧ ನೃತ್ಯದ ಸರ್ಪವೇಣೀ
ಯುವತಿಯರ ಝಷಕೇತು ಕೇಳೀ
ಭವನವಿವು ನೋಡಿವೆ ನವಗ್ರಹವಲಸೆದೆಗಡಂತೆ ೩೭

**ಅಂತ್ಯ :** ಪರಮಮೂರ್ತಿ ಸುಕೀರ್ತಿದಾನವ
ಹರತ್ರಿಯಂಬಕ ಕಮಲಜಾಸನ
ಸುರನಿಕರ ಸಂಸ್ತುತ್ಯ ಶೋಭನಮಹಿತ ಜಗದುದರಾ।
ಕರುಣಿನಿಂದಕ ಕುಲವಿಮೋಚನ
ಶರಧಿಶಯನ ಮುಕುಂದ ಬೊಬ್ಬುರ
ಪುರದೆರೆಯ ಶ್ರೀರಂಗಧಾಮಾರ್ಪಿತ ಕಥಾಮೃತವು ೯೭
ಸುಕವಿಗರ ಕರಮುಕುರದೂಷಣೆ
ಕುಕವಿಗಳಿಗೆದೆಗಿಚ್ಚು ಸಜ್ಜನ
ನಿಕರ ಮನದಾನಂದ ನಂದನ ಚೈತ್ರನೆಂದೆಂಬ
ರುಕುಮಿಣಿಜನಗ್ಗಳಿಕೆ ಘನಪುರಿ
ಸಕಲ ಸುಸ್ಥಲ ಕರಣಿಕಾಗ್ರಣಿ
ಮುಕುಟರಂಗನಪುತ್ರ ಬೊಬ್ಬುರ ರಂಗನಗ್ಗಳಿಕೆ ೯೭
ಅಂತೂ ಅಧ್ಯಾಯ ೪೭ಕ್ಕಂ ಪದನೂ ೩೦೦೫ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶುಕ್ಲ ಸಂವತ್ಸರದ ಅಧಿಕ ಭಾದ್ರಪದ ಶು ೧೨ಲ್ಲೂ ಸುಭೇದಾರ್‍ರು

ವೀರಂಣನವರು ರಾಯಸ್ತ ವೆಂಕಟರಮಣೈಯ್ಯನ ಕೈಲಿ ಬರಶಿದ ಅಂಬ್ಬಿಕಾ ವಿಜಯಕ್ಕೆ ನಿತ್ಯಜಯಮಂಗಳ ಮಹಾ ಶ್ರೀ

**ವಿಷಯ :** ಆದಿಶಕ್ತಿಯಾದ ಅಂಬಿಕೆಯು ರಕ್ತಬೀಜಾಸುರನನ್ನು ಸಂಹರಿಸಿದ ಕಥೆಯನ್ನೂ ಮಾರ್ಕಂಡೇಯ ಮಧುಕೈಟಭ ಚಂಡಚಾಮುಂಡ ಶುಂಭಕಾಸುರ ಧೂಮ್ರಲೋಚನ ಮಹಿಷಾಸುರ ಇವರೇ ಮೊದಲಾದವರ ವೃತ್ತಾಂತಗಳನ್ನು ಹೇಳಿದೆ.

**ವಿಶೇಷ :** ಲಿಪಿ ಸುಂದರವಾಗಿದೆ. ಮೊದಲ ಆರು ಓಲೆಗಳಿಲ್ಲ. ಕೆಲವು ಓಲೆಗಳ ಅಂಚುಗಳು ಮುರಿದಿವೆ. ಓಲೆಗಳಿಗೆ ಅಲ್ಲಲ್ಲೆ ಹುಳು ಹೊಡೆದಿವೆ. ೨೬, ೫೯, ೧೪೮, ೧೪೯, ೧೫೭ನೆಯ ಓಲೆಗಳಿಗೆ ವಿಶೇಷವಾಗಿ ಹುಳು ಹಿಡಿದಿದೆ. ಶಕಟರೇಫವನ್ನು ಬಳಸಿಲ್ಲ. ೩೭, ೩೮ನೆಯ ಓಲೆಗಳು ಹಿಂದುಮುಂದಾಗಿವೆ. ೯, ೧೦, ೩೯, ೪೧, ೪೨, ೫೫, ೫೬, ೫೯, ೬೦, ೬೩, ೬೪, ೭೨, ೭೮, ೮೨, ೯೩, ೯೯, ೧೦೦, ೧೧೨, ೧೧೯, ೧೨೦, ೧೨೬, ೧೩೧, ೧೩೩, ೧೩೫, ೧೩೬, ೧೪೦, ೧೪೧, ೧೪೨, ೧೪೩, ೧೬೦, ೧೬೮, ೧೭೨, ೧೯೦, ೨೦೭, ೨೧ , ೨೨೦, ೨೩೩ರಿಂದ ೨೪೧ ಓಲೆಗಳಿಲ್ಲ.

[ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ಪ್ರಥಮ ಸಂಪುಟ ಪುಟ ೮೫, ಸಂ. 79- ನೋಡಿ]

—ಎನ್ ಬಿಎ

## 7

| ಕೆ. ಬಿ. ೬೫೧/೮ | **ಅಂಬಿಗರ ಚೌಡಯ್ಯನ ವಚನ** | ವಚನ |
|---|---|---|
| ೬.೦" × ೮" | ಅಂಬಿಗರ ಚೌಡಯ್ಯ | ಸು. ೧೧೬೦ |
| ೧೬೧-೧೬೬ ಪತ್ರ | ೧೩ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಅಂಬಿಗರ ಚೌಡಯ್ಯನವರ ವಚನಾ|| ಮಕ್ಕಳು ಸತ್ತು ಮಡಿಗಳು ಹೋಗಿ | ಕಷ್ಟವೈದಿಗೊಂಡಿತೆಂದು | ತಂನ ಯಿಷ್ಟಲಿಂಗದ ಪೂಜೆಗಲಸಿ ಬಿಟ್ಟರಬಹುದೆ | ಅಯ್ಯಾ | ದ್ರುಷ್ಟವಾಗಿ ಜಂಗಮ ಬಂದು ಹಸಿದೆನೆಂದರೆ | ಮಂನ ವ್ರತನೇಮಕ್ಕೆ ಬೇಡಿದರೆ| ಹೋಗು ಮಡೆಯರೆ | ನಂಮ ದುಃಖದಲ್ಲಿ ನಾವು ಬೇಯಿವಾಗ ನಿಮಗೊಂದು ಗೊಡವಿಯೆಂದು ಭಕ್ತಿಯ ಮಾಡದಿರಬಹುದೆ | × × × × | ನಿಜಭಕ್ತ ಅಂಬಿಗರ ಚವುಡೈಯ್ಯನೂ ೧

**ಅಂತ್ಯ :** ಕಟ್ಟಿದ ಲಿಂಗವ ಬಿಟ್ಟು| ಬ್ಯಟ್ಟದ ಲಿಂಗಕ್ಕೆ ಹೋಗಿ| ಹೊಟ್ಟೆ ಅಡಿಮಾಡಿ ಬೀಳುವ| ಲೊಟ್ಟೆನಾಯಿಗಳ ಕಂಡರೆ| ಫಟ್ಟವುಳ್ಳ ಪಾದರಕ್ಷೆಯ ತಕ್ಕೊಂಡು|

ಲೊಟ್ಟಲೊಟ್ಟನೆ ಹೆಟ್ಟಿ। ಅಟ್ಟಿ ಅಟ್ಟ್ಯಾಡಿ ಹೊಡಿಯಂದಾತ। ನಂಮ
ದಿಟ್ಟ ವೀರಾಧಿವೀರ ನಿಜಭಕ್ತ ಅಂಬಿಗರ ಚವುಡೈಯ್ಯನೂ ||೧೯|| ಶ್ರೀ

**ವಿಷಯ:** ವೀರಶೈವ ಧರ್ಮಬೋಧೆ.

**ವಿಶೇಷ:** ಸಮಗ್ರ. ಮೋಡಿ ಅಕ್ಷರ. ಇದರೊಂದಿಗೆ ಕೈವಲ್ಯ ಪದ್ಧತಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 8

| | | |
|---|---|---|
| ಕೆ. ೨೫೦/೩ | **ಅಕ್ಕಗಳ ವಚನ** | ವಚನ |
| ೭.೮″ × ೨″ | ಅಕ್ಕಮಹಾದೇವಿ | ಸು. ೧೧೬೦ |
| ೧ ಪತ್ರ | ೧೧ ಪಂಕ್ತಿ | ೩೮ ಅಕ್ಷರ |

**ಆದಿ:** ||ಶ್ರೀ|| ಅಕ್ಕಗಳ ವಚನ||

ಪಲ್ಲ|| ನಿಲ್ಲು ಬಾ ನಿಲ್ಲು ನಿಲ್ಲೆನುತ
ಕಿಂನರಯ್ಯನೆ ಕಂಡು ಮೆಲ್ಲಮೆಲ್ಲನೆ ಬಂದು
ಮಾತಾಡಿದವೊ||

ಪದ|| ಅಟ್ಟಡವಿಯಲ್ಲಿ ಮಟ್ಟದಂತೊರದು
ನೆಟ್ಟನೆ ಬರುವವಳಿವಳಾರೆ
ದೃಷ್ಟರು ಕಂಡರೆ ಮುಟ್ಟಲಂಮರು ನಿಂನ
ದಿಟ್ಟತನ ನಿನಗೇತಕೆ ಹೆಂಣೆ ೧

**ಅಂತ್ಯ:** ಎಂನ ನುಡಿಸುವರೆ ನಿಂನಳವೆಹೋ
ನಿಂನೊಳಗೆ ತರಮಾತ ಮಲೆಮಾ
ಚೆಂನಮಲ್ಲಿಕಾರ್ಜುನ್ನೈಯ್ಯನೆ ಮನಸೋತೆ
ಯಂನ ಹಂಬಲ ಬೇಡಹೊಗೆಲಮಾಹೊ ||೫|| ಶ್ರೀ||

**ವಿಷಯ:** ಚೆನ್ನಮಲ್ಲಿಕಾರ್ಜುನನ ಸ್ತುತಿ.

**ವಿಶೇಷ:** ಈ ಪತ್ರದಲ್ಲಿ ಕೇವಲ ೫ ವಚನಗಳಿವೆ. ಅಕ್ಷರಗಳು ದುಂಡಾಗಿವೆ. ಪ್ರತಿ ಚೆನ್ನಾಗಿದೆ. ಇದರ ಜತೆಯಲ್ಲಿ ಸೋಬನ ತ್ರಿವಿಧಿ ಮೊದಲಾದ ಇತರೆ ೮ ಕೃತಿಗಳಿವೆ.

—ಎಂಪಿಎಂ

## 9

| | | |
|---|---|---|
| ಕೆ. ಎ. ೪೨೩/೧೮ | **ಅಕ್ಕಗಳ ವಚನ** | ವಚನ |
| ೮.೪″ × ೧೨.೮″ | ಅಕ್ಕಮಹಾದೇವಿ | ಸು. ೧೧೬೦ |
| ೯೩-೧೩೧ ಪತ್ರ | ೨೬ ಪಂಕ್ತಿ | ೧೫ ಅಕ್ಷರ |

**ಆದಿ :** ಅಕ್ಕಗಳ ವಚನ||
ಹೊದೆಸೂರಿಗೆ ಇದ್ದೆನು ನಾನಿಲ್ಲ
ಹೋದರೆ ಮರಳಿ ತಾ ಬಾರೆ ಕಣೌವ್ವ ತಾಯೆ ||ಪಲ್ಲ||
ಅತ್ತೆಮಾವನು ಮೈದನು ನೆಗೆವೆಣ್ಣು ಚಿತನನರೆದು ನೋಡುವಾ ಗಂಡನೂ
ಕತ್ತಲೆಯಾದರೆ ಕರದು ಅನ್ನವವಿಡಿ
ಅತ್ತಿಗೆ ಹತ್ತೆಂಟ ನುಡಿದಳವ್ವಾ ತಾಯೆ

**ಅಂತ್ಯ :** ........ಪುತನಾಗಿ ಪಿರಿದಾದ ಬಾಧೆಯಿಂ
ದೊದಲಿಸಿಕೊಳುತಿಹದೊಂದು ಲಿಂಗಾ
ನೊರೆಯಲ್ಲ ಯೋಗಿಗಳ ಯಾತನವಾದ
ಸ್ತಿರವಾದ ಗಂಗಾಧರನೊಂದು ಲಿಂಗಾ ೩

**ವಿಷಯ :** ವೀರಶೈವಧರ್ಮ.

**ವಿಶೇಷ :** ಇದೇ ಪುಸ್ತಕದಲ್ಲಿ ಕಿನ್ನರಿದೇವರು ನಿರೂಪಿಸಿದ ವಚನ, ಸಿದ್ದೇಶ್ವರ ಪವಾಡದ ವಚನ, ಹರಗಣಮಾಲೆ, ಗಣಸಹಸ್ರನಾಮ, ಮಲ್ಲಿಕಾಮಾಲೆ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 10

| ಕೆ. ಬಿ. ೬೯೯/೩೨ | **ಅಕ್ಕಗಳ ವಚನ** | ಹಾಡು, ವಚನ |
|---|---|---|
| ೬" × ೮.೫" | ಅಕ್ಕಮಹಾದೇವಿ | ಸು. ೧೧೬೦ |
| ೩೭-೩೮ ಪತ್ರ | ೩೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀ ಗುರು ಪಾತಾಳಗಂಗೆ ಜ್ಯೋತಿಲಿಂಗೇಶ್ವರನ ಪಾದವೆ ಗತಿ || ಅಕ್ಕಗಳ ವಚನ||
ಹೆಂಮ್ಮಳು ನಾನಿಂಮ್ಮನೆಂಬಿ ನೆಂಬಿರುವೆನು
ಗಂಮನೇ ಯಂನವರಾ ಕರೆಯ ಬಂನ್ನಿ ||ಪಲ್ಲ||
ಸುಂವಿ ಚಂನಂಣನಿಗೆ ಸುಂವಿ ಮಡಿವಾಳನಿಗೆ
ಸುಂವಿ ನಂಮೊಪ್ಪ ಬಸವೈಯ್ಯನಡಿಗೆ
ಸುಂವಿ ಹಜಗಂಣನಿಗೆ ಸುಂವಿ ಸತ್ಯೆಂಣನಿಗೆ
ಸುಂವಿ ನಂಮೈಯ್ಯ ಪ್ರಭುರಾಯನಡಿಗೆ ೧

**ಅಂತ್ಯ :** ಶರಣರೊಳು ಸುಖದುಃಖ
ದಿರುವ ಹೇಳುವೆ ನಾನು
ಪರಶೈಂನ ಚಿಂತಿಯನು ಅರಿಯರಾಗಿ

ಅರಸು ಷಡಕ್ಷರೀಯ
ಪರ್ಯಂನ ಕಾಡಿದರೆ
ಶರಣರಿಗೆ ನಾ ಹೇಳಿ ಕಳುಹೆನ್ನೈಯ್ಯ ೧೧

**ವಿಷಯ :** ಶಿವಶರಣರ ಸ್ತುತಿ ಮತ್ತು ಶಿವಸ್ತುತಿ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರವಣಿಗೆ. ಮೋಡಿ ಅಕ್ಷರ. ಇದ ರೊಂದಿಗೆ ಕಾಲಜ್ಞಾನ ಮುಂತಾದ ಕೃತಿಗಳಿವೆ.

—ಎಂಪಿಎಂ

## 11

ಕೆ. ಬಿ. ೬೯೯/೩೮ | **ಅಕ್ಕಗಳ ವಚನ** | ವಚನ
೬"×೮.೩" | ಅಕ್ಕಮಹಾದೇವಿ | ಸು. ೧೧೬೦
೩೫-೪೬ ಪತ್ರ | ೩೦ ಪಾಕ್ತಿ | ೨೦ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಅಕ್ಕಗಳ ವಚನ||
ವೊಂದಲ್ಲಿ! ಯರಡಲ್ಲ| ಮುರಲ್ಲ| ನಲ್ಕು| ಯಂಬತ್ತು ನಲ್ಕು ಲಕ್ಷ ಜೀವರಶಿ ಯೊಳು ಬಂದೆ ಬಂದೆ| ಭಾರದ ಭವಂಗಳನೆಲ್ಲ ಉಂಡೆ| ಶುಬಹಿಂ....ದಳ ಜಲ್ಕಂಗಳು| ಯೇನದರು ಅಗಲಿ| ಯಿಂನು ನಿಂಮಂತೆ ಕರುಣಿಸಾ ಚೆಂನ ಮಲ್ಲಿಕಜ್ಜುರ್ನ ೧

**ಅಂತ್ಯ :** ರತ್ನದ ಸಂಕೋಲೆಯದರೆ| ತೊಡರಲ್ಲವೆ| ಮುತ್ತಿನ ಬಲೆಯಾದರೆ| ಬಂದಾನ ವಲ್ಲವೆ| ಚಿಂನದ ಕತ್ತಿಯಲ್ಲಿ ತೆಲಿಯ ಹೊಯಿದರೆ ಸಮದಿಪ್ಪರೆ| ಲೋಕದ ಭಜನ ಭಕ್ತಿಯಲ್ಲಿ ಶಿಕ್ಕಿದರೆ| ಜನನ ಮರಣ ಬಿಡುವದೆ| ಚಂನಮಲ್ಲಿ ಕಾರ್ಜುನ ||೧೫|| ಶ್ರೀ ಶ್ರೀ||

**ವಿಷಯ :** ವೀರಶೈವ ತತ್ತ್ವಬೋಧೆ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರೆವಣಿಗೆ. ಮೋಡಿ ಅಕ್ಷರ. ಇದ ರೊಂದಿಗೆ ಕೊಟ್ಟೂರು ಬಸವೇಶ್ವರನ ಅಷ್ಟಕ ಮುಂತಾದ ಕೃತಿಗಳಿವೆ.

—ಎಂಪಿಎಂ

## 12

ಕೆ. ೯೯೯/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ
೮"×೨.೨" | ಅಕ್ಕಮಹಾದೇವಿ | ಸು. ೧೧೬೦
೧೫-೧೬ ಪತ್ರ | ೧೩ ಪಂಕ್ತಿ | ೪೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯನಮಃ || ಅಕ್ಕಗಳ ಶ್ರುಷ್ಟಿಯ ವಚನ ||
ಆದಿ ಅನಾದಿಯ ನಿತ್ಯಾನಿತ್ಯವ ತಿಳಿಯಲಜುಯದೆ ವಾಯಕ್ಕೆ ಪರಬ್ರಂಹ್ಮವ

ನುಡಿವ ವಾಯುಪ್ರಾಣಿಗಳವರೆತ್ತ ಬಲ್ಲರೊ ಆ ಪರಬ್ರಹ್ಮದ ನಿಜದನಿಲವದೆಂತೆಂದರೆ ಆದಿಯೆ ದೇಹ ಅನಾದಿಯೆ ನಿರ್ದೇಹ ಆದಿಯೆ ಸಕಲ ಅನಾದಿಯೆ ನಿಃಕಲ

**ಅಂತ್ಯ :** ತ್ರಿವಿಧ ಪ್ರಸಾದಯೇಕಾರ್ಥವಾಗಿ ಮಹಾಘನ ಪರಿಪೂರ್ಣ ಪ್ರಸಾದ ವಳವಟ್ಟ ಶರಣ ಜ್ಞಾನಿಯಲ್ಲ ಅಜ್ಞಾನಿ ಮುನ್ನವೆ ಅಲ್ಲ ಶೂನ್ಯನಲ್ಲ ನಿಃಶೂನ್ಯನಲ್ಲ ದ್ವೈತಿಯಲ್ಲ ಅದ್ವೈತಿ ಮುಂನವೆ ಅಲ್ಲ ಯಿಂತಿ ಉಭಯಾತ್ಮಕ ತಾನೆಯಾಗಿ ಯಿದು ಕಾರಣ ಯಿದರಾಗು ಹೋಗು ಸಕೇಲ ಸಂಬಂಧವ ಚೆಂನಮಲ್ಲಿಕಾರ್ಜುನಯ್ಯ ನಿಂಮ ಶರಣರೆ ಬಲ್ಲರೂ॥ ಅಕ್ಕಗಳ ಶ್ರುಷ್ಟಿಯ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತದ ಪ್ರಕಾರ ಜಗತ್ತಿನ ಸೃಷ್ಟಿಯ ವಿಚಾರ.

**ವಿಶೇಷ :** ಇದೇ ಕಟ್ಟಿನಲ್ಲಿ ಕರಣಹಸಿಗೆಯೇ ಮೊದಲಾದ ಇತರ ೮ ಕೃತಿಗಳಿವೆ. ಅನ್ಯವಾದ ಕೋಲಾಹಲವೆಂಬ ಕೃತಿ ತೆಲುಗು ಭಾಷೆಯದು.

—ಜಿಜಿಎಂ

## 13

| ಕೆ. ೧೧೨೫/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ |
|---|---|---|
| ೫.೫″ × ೨.೧″ | ಮಹಾದೇವಿಯಕ್ಕ | ಸು. ೧೧೬೦ |
| ೨೦-೨೧ ಪತ್ರ | ೧೪ ಪಂಕ್ತಿ | ೩೮ ಅಕ್ಷರ |

**ಆದಿ :** ಆದಿ ಅನಾದಿ ನಿತ್ಯಾನಿತ್ಯದ ತಿಳಿಯಲಜಿಯದೆ ವಾಯಕ್ಕೆ ಪರಬ್ರಹ್ಮವ ನುಡಿವ ವಾಯು ಪ್ರಾಣಿಗಳವರೆತ್ತ ಬಲ್ಲರೆತ್ತಬಲ್ಲರೆ. ಆ ಪರಬ್ರಹ್ಮದ ನಿಜದ ನಿಲವದೆಂತೆಂದೊಡೆ ಆದಿಯೆ ದೇಹ ಅನಾದಿಯೆ ನಿರ್ದೇಹ ಆದಿಯೆ ಸಕಲ ಅನಾದಿಯೆ ನಿಃಕಲ ಆದಿಯೆ ಜಡ ಅನಾದಿಯೆ ಅಜಡ ಆದಿಯೆ ಕಾಯ ಅನಾದಿಯೆ ಪ್ರಾಣ

**ಅಂತ್ಯ :** ............ಶೂನ್ಯನಲ್ಲ ನಿಃಶೂನ್ಯ ಮುಂನವೆಯಲ್ಲ ದ್ವೈತಿಯ ಅದ್ವೈತಿ ಮುಂನವೆಯಲ್ಲ ಯಿಂತೀ ವುಭಯಾತ್ಮಕ ತಾನೆಯಾಗಿ ಯಿದು ಕಾರಣ ಯಿದರಾಗು ಹೋಗು ಸಂಕೆಲಸಂಬಂಧ ಚೆಂನಮಲ್ಲಿಕಾರ್ಜುನಯ್ಯ ನಿಂಮ ಶರಣರೆ ಬಲ್ಲರೂ ಅಕ್ಕಗಳ ಸೃಷ್ಟಿಯ ವಚನ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ವೀರಶೈವ ಸಿದ್ಧಾಂತದ ಪ್ರಕಾರ ಜಗತ್ಸೃಷ್ಟಿಯ ಕ್ರಮ.

**ವಿಶೇಷ :** ಇದೇ ಕಟ್ಟಿನಲ್ಲಿ ಕರಣಹಸಿಗೆ, ಮಿಶ್ರಾರ್ಪಣ, ಪಂಚೀಕರಣ, ಏಕೋತ್ತರ ಶತಸ್ಥಲ ಇತ್ಯಾದಿ ಒಂಬತ್ತು ಕೃತಿಗಳಿವೆ. ಈ ಕಟ್ಟಿನಲ್ಲಿ ಮೂರು ಓಲೆಗರಿ

ಕಟ್ಟುಗಳ ಪತ್ರಗಳು ಸೇರಿಕೊಂಡಿವೆ. ಅವುಗಳ ಕ್ರಮಸಂಖ್ಯೆ ೧-೨೨ ಪತ್ರಗಳು, ೧-೪೩ ಪತ್ರಗಳು ಮತ್ತು ೧೦೮-೧೨೪ ಪತ್ರಗಳಾಗಿವೆ.

—ಜಿಜಿಎಂ

## 14

ಕೆ. ೧೧೬೧/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ

೧೫.೪" × ೨.೨" | ಅಕ್ಕಮಹಾದೇವಿ | ಸು. ೧೧೬೦

೧೧-೧೨ ಪತ್ರ | ೧೧ ಪಂಕ್ತಿ | ೬೬ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಅಕ್ಕಗಳು ನಿರೂಪಿಸಿದ ಸೃಷ್ಟಿವಚನ। ಆದಿ ಅನಾದಿಯಾ ನಿತ್ಯಾನಿತ್ಯವ ತಿಳಿಯಲರಿಯದೆ। ವಾಯಕ್ಕೆ ಪರಬ್ರಂಹ್ಮವ ನುಡಿವ ವಾಯುಃಪ್ರಾಣಿಗಳೆತ್ತ ಬಲ್ಲರೊ। ಆ ಪರಬ್ರಂಹ್ಮದ ನಿಜದ। ನಿಲವದೆಂತೆಂದಡೆ। ಆದಿಯೆ ದೇಹ। ಅನಾದಿಯೆ ನಿರ್ದೇಹ ಆದಿಯೆ ಸಕಲ। ಅನಾದಿಯೆ ನಿಃಕಲ।

**ಅಂತ್ಯ :** ಆ ದ್ರವ್ಯ ಪದಾರ್ಥಂಗಳುಂ। ಆಯಾಯ ಮುಖದ ಲಿಂಗಂಗಳಿಗೆ। ನಿರಂತರ ಸಾವಧಾನದಿಂದರ್ಪಿತವಾಗಿ। ಬೀಗಲೊಡನೆ। ಅಂಗಸ್ಥಲಂಗಳಡಗಿ। ತ್ರಿವಿಧಲಿಂಗಾಂಗ ಸ್ಥಲಗಳಃಳಿದು। ಕಾಯಗುರು ಪ್ರಾಣಲಿಂಗ ಜ್ಞಾನ ಜಂಗಮ। ಗುರುವಿನಲ್ಲಿ ಶುದ್ಧಪ್ರಸಾದ। ಲಿಂಗದಲ್ಲಿ ಸಿದ್ಧಪ್ರಸಾದ। × × × ಚೆಂನಮಲ್ಲಿಕಾರ್ಜುನಯ್ಯ ನಿಂಮ್ಮ ಶರಣರು ಬಲ್ಲರು। ಅಕ್ಕಗಳು ನಿರೂಪಿಸಿದ ಸೃಷ್ಟಿವಚನ ಸಮಾಪ್ತಿ। ಮಂಗಳ ಮಹಾ ಶ್ರೀ।

**ವಿಷಯ :** ಜಗತ್ ಸೃಷ್ಟಿಕ್ರಮದ ವಿವರ.

**ವಿಶೇಷ :** ಅಕ್ಷರಗಳು ಸುಂದರವಾಗಿವೆ. ಗರಿಗಳು ಶುದ್ಧವಾಗಿವೆ. ಈ ಕಟ್ಟಿನಲ್ಲಿ ಕರಣಹಸಿಗೆ ಮೊದಲಾದ ಇನ್ನೂ ನಾಲ್ಕು ಕೃತಿಗಳಿವೆ.

—ಎಂಪಿಎಂ

## 15

ಕೆ. ೧೨೨೯/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ

೫.೭" × ೨" | ಅಕ್ಕಮಹಾದೇವಿ | ಸು. ೧೧೬೦

೧೯-೨೦ ಪತ್ರ | ೧೩ ಪಂಕ್ತಿ | ೩೨ ಅಕ್ಷರ

**ಆದಿ :** ಅಕ್ಕಮಹಾದೇವಿಯರು ನಿರೂಪಿಸಿದ ಶೃಷ್ಟಿಯ ವಚನ॥ ಆದಿಯನಾದಿ ನಿತ್ಯಾನಿತ್ಯವ ತಿಳಿಯಲಱಯದೆ ವಾಯಕ್ಕೆ ಪರಬ್ರಹ್ಮವ ನುಡಿವ ವಾಯು ಪ್ರಾಣಿಗಳವರೆತ್ತ ಬಲ್ಲರೊ। ಆ ಪರಬ್ರಹ್ಮದ ನಿಜದ ನಿಲವೆಂತೆಂದಡೆ। ಆದಿಯೆ ದೇಹ। ಅನಾದಿಯೆ ನಿರ್ದೇಹ। ಆದಿಯೆ ಸಕಲ। ಅನಾದಿಯೆ

ನಿಃಕಲ| ಆದಿಯೆ ಜಡ| ಅನಾದಿಯೆ ಅಜಡ| ಆದಿಯೆ ಕಾಯ| ಅನಾದಿಯೆ ಪ್ರಾಣ

**ಅಂತ್ಯ :** ಮುಂನವೆ ಅಲ್ಲ| ದ್ವೈತಿಯಲ್ಲ| ಅದ್ವೈತಿ ಮುಂನವೆ ಅಲ್ಲ| ಯಿಂತೀ ವುಭಯಾತ್ಮಕ ತಾನೆಯಾಗಿ ಯಿಃದು ಕಾರಣ ಯಿದಱಾಗುಹೋಗು| ಸಕಿಲ ಸಂಬಂಧನ ಚೆಂನಮಲ್ಲಿಕಾರ್ಜುನಯ್ಯ ನಿಂಮ ಶರಣರೆ ಬಲ್ಲರೂ|| ಮಹಾದೇವಿಯಕ್ಕಗಳು ನಿರೂಪಿಸಿದ ಶೃಷ್ಟಿಯ ವಚನ ಸಮಾಪ್ತ ಮಂಗಳ ಮಹಾ ಶ್ರೀ

**ವಿಷಯ :** ಜಗತ್ಸೃಷ್ಟಿಕ್ರಮದ ವಿವರ.

**ವಿಶೇಷ :** ಸಮಗ್ರ. ಶಕಟರೇಫವಿದೆ. ಬರಹ ಸುಂದರ. ಇದೇ ಕಟ್ಟಿನಲ್ಲಿ ಕರಣಹಸಿಗೆ, ವಿಶ್ರಾಪರ್ಣ, ಪಂಚೀಕರಣದ ಪದ ಇತ್ಯಾದಿ ಒಟ್ಟು ಆರು ಕೃತಿಗಳಿವೆ

—ಕೆಆರ್‌ಎಸ್

## 16

| ಕೆ. ೧೩೭೩/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ |
|---|---|---|
| ೪″ × ೧.೮″ | ಅಕ್ಕಮಹಾದೇವಿ | ಸು. ೧೧೬೦ |
| ೬೩-೬೪ ಪತ್ರ | ೧೬ ಪಂಕ್ತಿ | ೨೦ ಅಕ್ಷರ |

**ಆದಿ :** ಅಕ್ಕಗಳು ನಿರೂಪಿಸಿದ ಸೃಷ್ಟಿಯ ವಚನಂ ||
ಆಧಿ ಅನಾಧಿ ನಿತ್ಯ ನಿತ್ಯವದ ತಿಳಿಯಲರಿಯದೆ ವಾಯಕ್ಕೆ| ಪರಬ್ರಂಹ್ಮವ ನುಡಿವ| ವಾಯುಪ್ರಾಣಿಗಳಿವರೆತ್ತ ಬಲ್ಲರೊ|

**ಅಂತ್ಯ :** ಯಿಂತೀ ತ್ರಿವಿಧ ಪ್ರಸಾಧನು ಯೇಕಾರ್ತವಾಗಿ ಮಹಾಘನ ಪರಿಪೂರ್ನ ಪ್ರಸಾಧವಳವಜ್ಜ ಶರಣ ಜ್ಞಾನಿಯಲ್ಲ| ಅಜ್ಞಾನಿ ಮುಂನವೆ ಅಲ್ಲ| ಶೂನ್ಯ ನಲ್ಲ| ನಿಃಶೂನ್ಯ ಮುಂನವೆಯಲ್ಲ| ದ್ವೈತಿಯಲ್ಲ| ಅದ್ವೈತಿ ಮುಂನವೆಯಲ್ಲ| ಯಿಂತುಭಯಾತ್ಮಕ ತಾನೆಯಾಗಿದು ಕಾರಣಿದಱಾಗುಹೋಗು ಸಕಿಲ ಸಂಬಂಧವ ಚೆಂನ್ನಮಲ್ಲಿಕಾರ್ಜುನಯ್ಯಾ ನಿಂಮ ಶರಣರೆ ಬಲ್ಲರೂ ||೧|| ಅಕ್ಕಗಳ ಸೃಷ್ಟಿಯ ವಚನಂ ಸಮಾಪ್ತ ಮಂಗಳ ಮಹಾ ಶ್ರೀ|

**ವಿಷಯ :** ಜಗತ್ ಸೃಷ್ಟಿಯ ಕ್ರಮದ ವಿವರ.

**ವಿಶೇಷ :** ಪತ್ರಗಳು ಚೆನ್ನಾಗಿವೆ. ಶಕಟರೇಫದ ಬಳಕೆ ಇದೆ. ಈ ಕಟ್ಟಿನಲ್ಲಿ ಪಂಚೀಕರಣ ಮುಂತಾದ ಇತರ ೪ ಕೃತಿಗಳಿವೆ.

—ಎಂಪಿಎಂ

## 17

ಕೆ. ಬಿ. ೬೩೬/೪ | **ಅಕ್ಕಗಳ ಸೃಷ್ಟಿಯ ವಚನ** | ವಚನ
೧೩" × ೪" | ಅಕ್ಕಮಹಾದೇವಿ | ಸು. ೧೧೬೦
೯೮-೧೦೩ ಪತ್ರ | ೧೧ ಪಂಕ್ತಿ | ೬೨ ಅಕ್ಷರ

**ಆದಿ :** ಶ್ರೀ॥ ಶ್ರೀಗುರು ಬಸವಲಿಂಗಾಯನಮಃ ।'ಅಕ್ಕಗಳು॥ ಮಹಾದೇವಿ ಅಕ್ಕಗಳೆಂಬ ಶರಣ ಸತಿಯರು ವುಡುತಡಿಯೆಂಬ ಪಟ್ಟಣದಲ್ಲಿ ಸುಮನ ನಿರ್ಮಲಿರೆಂಬ ಸದ್ಭಕ್ತರಲ್ಲಿ। ಕಂಥೆಯೊಂಸು। ಧರಿಸಿ। ಭವಿಯಾದಕಂಸೀಕರಾಜನಂನು ತಿರಸ್ಕಾರವಂ ಮಾಡಿಬಿಟ್ಟು। ದಿಗಾಂಬರ ಸಂಪಂನಿಯಾಗಿ। ಸರ್ವಾಂಗವೆಲ್ಲಕೇಶಾಂಬರಂಗಳಂನು ಆಚ್ಛಾಧಿಸಿಕೊಂಡು। ವಾಮಭಾಗದ ಕರಸ್ಥಲದಲ್ಲಿ ಯಿಷ್ಟ ಮಹಾಲಿಂಗವಂನು ಪಿಡಿದುಕೊಂಡು। ಬಲಹಸ್ತದಲ್ಲಿ ಜಪಮಾಲಿಕೆಯಂನು ಪಿಡಿದುಕೊಂಡು ಅಲಿಂದ ಕಲ್ಯಾಣ ಪಟ್ಟಣಕ್ಕೆ ಬಂದು। ಪ್ರಥಮದತ ಕಿಂನ್ನರ ಬ್ರಂಮ್ಹಯಗಳ ದರ್ಶನವಾಗಿ ಆವ್ಮೇಲೆ ನಡುಪಟ್ಟಣ ಮಧ್ಯಪ್ರದೇಶದಲ್ಲಿಗೆ ಹೋದಲ್ಲಿ ಅಲ್ಲಿ ಬಸವಂಣ ಚಂನಬಸವಂಣ ಮೋಳಿಗಯ್ಯ ಕಕ್ಕಯ್ಯ ಚಿಕ್ಕಯ್ಯ। ಅಡಪದಪ್ಪಂಣ ಮಡಿವಾಳ ಮಾಚಿತಂದೆಗಳು ಮೊದಲಾದ ಪ್ರಮಥಗಣಂಗಳ ದರ್ಶನವಾಗಿ XXXX ಮಹಾದೇವಿಯರೆಂಬ ಶರಣಸತಿಯರು ನಿರೂಪಿಸಿದ। ಸಮಸ್ತ ಸದ್ಭಕ್ತ ಸಿವಶರಣಗಣಂಗಳು ಅರಿದು ಅಚರಿಸಿ ನಿತ್ಯಾನಂದ ಸಿವಸುಖಿಗಳಾಗಬೇಕೆಂದು ಹಾಲುಕ್ಕಿ ಮೇಲುವರಿದೋಪಾದಿಯಲ್ಲಿ ತಂಮ್ಮಾನ್ಯಾನಭಾವ ಪ್ರಸಂನಮಾತ್ಕ್ರುಷ್ಟವಾದ ವಚನಂಗಳ ದಸಿಮಿಂದೆ ನಿರೂಪಿಸಿದ ಶ್ರುಷ್ಟಿಯ ವಚನಾ.

**ಅಂತ್ಯ :** ಮಲ್ಲಿಕಾ। ಮಲ್ಲಿಗೆಯ ಹುವ್ವಿನ ಪ್ರಕಾಶದೋಪಾದಿಯಲ್ಲಿ। ಅರ್ಜುನಪಳಿಯಲು ಪಟ್ಟ ಚಂನಮಾದಾರ ಚಂನಯ್ಯನ। ಮಲ್ಲಿಕಾದೇವಿಯು। ಅರ್ಜುನ। ಕಿರೀಟಿಯು। ಮೂವರ ಮೂವರಿಂದೆ ಹೆಸರು ಹಿಡಿದು। ಕರಿಸಿಕೊಳಲು ಪಟ್ಟಂಥ ಯತಿ ಪರಸಿವಲಿಂಗವೆ। ನಿಂಮ ಶರಣರೆ ಬಲ್ಲರು। ನಿಂಮ ಚಿತ್ತಿನ ಚಿದಾಂಸಿಕರಾದ। ಸತ್ಪಣಮಗ್ನ್ಯಾನ ಸ್ವರೂಪವಾದ ಶಿವಶರಣಂಗಳೆ ಅರಿದು। ಬಲ್ಲರಲ್ಲದೆವುಳಿದ ಮಾಯಾವಾದ ಕಾಲವಾದ ಬರ್ಮವಾದ ಸಾಂಖ್ಯವಾದ। ಪಾಷಂಡಿಕವಾದ ಜಗಜೀವ ಪ್ರಾಕೃತ ಜೀವರುಗಳು ಯತ್ತ ಬಲ್ಲರು। ಅವರು ಯಾವಕಡಿಯಿಂದ ಅರಿದುಬಲ್ಲರು। ಆ ಮಹಾದೇವಿ ಅಕ್ಕಗಳು ನಿರೂಪಿಸಿದ ಶ್ರುಷ್ಟಿಯ ವಚನ ಸಮಾಪ್ತ ॥ಶ್ರೀ॥

**ವಿಷಯ :** ವೀರಶೈವತತ್ತ್ವ

**ವಿಶೇಷ :** ಸಮಗ್ರ, ಸ್ಫುಟಾಕ್ಷರ. ಇದರೊಡನೆ ಕರಣಹಸಿಗೆ, ಪಂಚೀಕರಣ ಪದ,

ಮಿಶ್ರಾರ್ಪಣ, ಪ್ರಭುದೇವರ ಸೃಷ್ಟಿಯವಚನ,ಹಿರಿಯ ಮಂತ್ರಗೋಪ್ಯ ಶೈವಾಗಮ ಪೂಜಾವಿಧಾನ, ರುದ್ರಜಪ–ಈ ಕೃತಿಗಳಿವೆ.

—ಎಸ್ ಎನ್ ಕೆ

## 18

| ಕೆ. ಎ. ೫೧೮ | **ಅಕ್ಷರ ಮಾಲಿಕಾ** | ಸಾಂಗತ್ಯ |
|---|---|---|
| ೧೦.೫″ × ೯″ | ಚಿಕ್ಕುಪಾಧ್ಯಾಯ | ಸು. ೧೬೫೦ |
| ೧-೨೨ ಪತ್ರ | ೨೦ ಪಂಕ್ತಿ | ೧೩ ಅಕ್ಷರ |

**ಆದಿ :** ಶ್ರೀಮತೆ ರಾಮಾನುಜಾಯ ನಮಃ ಪಶ್ಚಿಮ ರಂಗನಾಥಸ್ವಾಮಿಯಮೇಲೆ ಅಕಾರಾದಿಯಾಗಿ ಕ್ಷ ಕಾರ ಪರಿಯಂತ ಅಕ್ಷರದ ಮೊದಲ್ಗೊಂಡು ಉದಿಯಾಗಿ ಪೋಣಿಸಿದ ರೀತಿಗೆ ಸ್ತುತಿಯಾಗಿ ಹೇಳಿದ ಸಾಂಗತ್ಯ :—

ಶ್ರೀಶನ ಶಿವವಿಧಿ ವಿನುತನ ದಿವ್ಯ ಪ್ರ
ಕಾಶನ ಕಾಮಿತಾರ್ಥದಸ
ಕಾಶಿಕ್ಷೇತ್ರವ ಕಾಯ್ದ ಪಶ್ಚಿಮರಂ
ಗೇಶನ ಪದಕೆರಗುವೆನು

**ಅಂತ್ಯ :** ನಾರಾಯಣಾಯ ನಮೋಯೆಂದುಸುರುವ
ವಾರಾದಡಾಗಲವರಿಗೆ
ಕಾರುಣ್ಯದಿಂ ಮೋಕ್ಷವನಿತ್ತು ಕಾಯ್ವ ಮು
ರಾರಿಗೆ ಮುದದಿಂದ ವಂದಿಪೆನು
ಮಂಗಳ ಮಹಾ

**ವಿಷಯ :** ವಿಷ್ಣು ಸ್ತುತಿ.

**ವಿಶೇಷ :** ಪ್ರತಿ ಉತ್ತಮವಾಗಿದೆ.

—ಹಕರಾ

## 19

| ಕೆ. ೧೭೫೦/೧೭ | **ಅಕ್ಷರಮಾಲಿಕಾ ಗದ್ಯ** | ಗದ್ಯ, ಪದ್ಯ |
|---|---|---|
| ೧೦.೨″ × ೧.೯″ | ಪಾಲ್ಕುರಿಕೆ ಸೋಮ | ಸು. ೧೧೯೫ |
| ೬೭-೭೯ ಪತ್ರ | ೧೦ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಅಕ್ಷರ ಮಾಲಿಕಾ ಗದ್ಯ॥ ಮಾಲಿನೀ ವೃತ್ತ॥

ಓಂ ಜಯಜಯ ಬಸವಾಖ್ಯಃ ಸ್ವಾನುಭೂತ್ಯೈಕ್ಯ ಪ್ರಮಥಗಣ ಪವಿತ್ರ ಸ್ಫುರದ। ಬಸವಾಧೀಶಾಯ ತಸ್ಮೈ ನಮಃ ॥೧॥

**ಅಂತ್ಯ :** ಲಕ್ಷಣ ಪದಯತಿ ಸಂಧಿ ವಿ
ಲಕ್ಷಣ ಪೂರ್ವಸ್ವರಾಕ್ಷರಾದ್ಯಕ್ಷರ....
ದಿಕ್ಷಾಂತಾಕ್ಷರಮಾಲಾ
ದ್ಯಕ್ಷರಸ್ಥಲ ರಕ್ಷಿಸೆಂಮವಂ ಬಸವೇಶಾ ೩೮

ಶಿವಮಸ್ತು ಭಕ್ತಿವಿಭವೋ
ದ್ಭವಮಸ್ತುವಕ್ಷರಾಂಕ ಪಠಣ ಶ್ರವಣಾ
ಸ್ತವನಾಶಕ್ತರಿಗೆ ಮಹೋ
ತ್ಸವಮಸ್ತು ವಾಕ್ಸಿದ್ಧಿರಸ್ತು ಶಿವ ಬಸವೇಶಾ ೩೯
ಅಕ್ಷರಾಂಕಗದ್ಯ ಸಮಾಪ್ತ ಮಂಗಳಮಹಾಶ್ರೀ

**ವಿಷಯ :** ಬಸವ ಸ್ತುತಿ.

**ವಿಶೇಷ :** ಈ ೧೨ ಪತ್ರಗಳಲ್ಲಿ ನಮಸ್ಕಾರ ಗದ್ಯ, ಪಂಚಪ್ರಕಾರದ ಗದ್ಯ, ಷಟ್ಸ್ಥಲ ಗದ್ಯ, ಅಷ್ಟೋತ್ತರನಾಮ ಗದ್ಯ, ಉದಾಹರಣ ಗದ್ಯ, ಅಕ್ಷರಾಂಕ ಗದ್ಯಗಳಿವೆ. ಇವಲ್ಲದೆ, ಈ ಕಟ್ಟನಲ್ಲಿ ಶಿವಾಧನ ಶತಕ, ಪುಷ್ಪಾಷ್ಟಕ, ಶಂಕರದೇವರ ಕಂದ ಇವೇ ಮೊದಲಾದ ೨೮ ಕೃತಿಗಳಿವೆ.

—ವೈಸಿಬಿ

## 20

| ಕೆ. ಬಿ. ೫೩೫ | **ಅಕ್ಷರಮಾಲಿಕೆ** | ಕಂದ |
|---|---|---|
| ೬.೫″ × ೮.೫″ | ? | ? |
| ೭-೯ ಪುಟ | ೧೬ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀ ಶುಭಮಸ್ತು॥ ಅಕ್ಷರಮಾಲಿಕೆ ಗ್ರಂಥ–
ಕಮಲಲೋಚನ ಮುಖವಿಕಸಿತ
ಕಮಲ ಗೃಹಗೃಹನಿವಾಕ್ಯ ಕಮಲವಿಹಾರ
ಕಮಲೋಚನ ತ್ರೈಲೋಚನ
ಕಮಲಾರ್ಚಿತ ಪಾದಯುಗಳ ಕಮಲ ಪ್ರಮುಖಾ॥

**ಅಂತ್ಯ :** ಕ್ಷಮುಕ್ಷಮುಹುಮುಮುವರನಾಯಕ
ಕ್ಷಮ ಚಂದ್ರಿಕಲಾಬ್ಧಿ ಚಂದ್ರಿ ಕ್ಷತ್ರಿಯ
ಕ್ಷಪಲಾಕ್ಷಕ್ಷಸ್ತಿ ಪರ್ವತ ಶಿವವಿವವವಕವಿ ವರಣಾಂಕಾ॥
ಅಕ್ಷರ ಮಾಲಿಕೆಗ್ರಂಥ ಸಂಪೂರ್ಣಂ

**ವಿಷಯ :** ಶಿವಕೀರ್ತನೆ.

**ವಿಶೇಷ:** ಲಿಪಿಕಾರ ದೋಷದ ಫಲವಾಗಿ ಬಹುಪಾಲು ಕಂದಗಳಲ್ಲಿ ಕ್ಲೇಶ ಕಾಣ ಬರುತ್ತದೆ. ಭಾಷೆ ಲಲಿತವಾಗಿದ್ದು ಪದ್ಯಗಳು ಚೆನ್ನಾಗಿವೆ.

—ಶ್ರೀನಂತ

## 21

| ಕೆ. ೧೭೭೯ | **ಅಕ್ಷರಮಾಲೆ ಮತ್ತು ಮಗ್ಗಿಗಳು** | ಗದ್ಯ |
|---|---|---|
| ೯" × ೧.೩" | ? | ? |
| ೧-೨೬ ಪತ್ರ | ೪ ಪಂಕ್ತಿ | ೨೬ ಅಕ್ಷರ |

**ಆದಿ:** ಶ್ರೀ ಓ ನಮಃ ಶಿವಾಯಃ ಸಿಧಂ ನಾಮ
ಅಆ ಇಈ ಉಊ ಋರೂ ಲುಲೂ
ಎ ಐ ಓ ಔ ಅಂ ಅಃ

**ಅಂತ್ಯ:** ೬೦ ೧ ೬೦
೬೦ ೨ ೧೨೦
೬೦ ೩ ೧೮೦
X X X
೬೦ ೯ ೫೪೦
೬೦ ೧೦ ೬೦೦
೧೦ ಸೆಲುಗೆ ಮಾ ೨ ಸೆ
೧೦೦ ಸೆಲುಗೆ ಖ ೭೮೮೨
X X X
೧೮೦೦೦ ಸೆಲುಗೆ ಲಾ ೧ ಮಾ

**ವಿಷಯ:** ಅಕ್ಷರಮಾಲೆ, ಮಗ್ಗಿ, ಕಾಗುಣಿತ ವಿಚಾರ.

**ವಿಶೇಷ:** ಪ್ರತಿ ಚೆನ್ನಾಗಿದೆ.

—ಎಂಪಿಎಂ

## 22

| ಕೆ. ೬೬೪/೧೫ | **ಅಕ್ಷರಾಂಕ ಗದ್ಯ** | ಗದ್ಯ, ಪದ್ಯ |
|---|---|---|
| ೯.೫" × ೨.೪" | ಪಾಲ್ಕುರಿಕೆ ಸೋಮ | ಸು. ೧೧೯೫ |
| ೩೫-೩೭ ಪತ್ರ | ೧೧ ಪಂಕ್ತಿ | ೭೫ ಅಕ್ಷರ |

**ಆದಿ:** ಗುರು ಬಸವಲಿಂಗಾಯ ನಮಃ॥ ಅಕ್ಷರಾಂಕ ಗದ್ಯ॥ ಕಂದ॥
ಶ್ರೀಯುುತ ನಮಃ ಶಿವಾ ಎ
ತ್ಯಾಯತ ಪಂಚಾಕ್ಷರಿ ಪ್ರಣವ ಸಂಭೂತ

ಸ್ವಾಯತ ಬಾವನ್ನಕ್ಷರ
ಕಾಯಸ್ತನೆ ನಿಂಮ ಪೊಗಳೆನಾಂ ಬಸವೇಶ॥

**ಅಂತ್ಯ :** ಶಿವಮಸ್ತು ಭಕ್ತಿವಿಭವೋ
ದ್ಭವೋಸ್ತು ಭವದಕ್ಷರಾಂಕ ಪಠಣ ಶ್ರವಣಾ
ಸ್ತವಾಸಕ್ತರಿಗೆ ಮಹೋ
ತ್ಸವೋಸ್ತು ವಾಕ್ಸಿದ್ಧಿರಸ್ತು ಶಿವ ಬಸವೇಶ॥ ೪೧
ಪಾಲ್ಕುರಿಕೆ ಸೋಮಾರಾಧ್ಯರು ನಿರೂಪಿಸಿದ ಅಕ್ಷರಾಂಕ ಗದ್ಯ ಸಮಾಪ್ತ
ಮಂಗಳಮಹಾ ಶ್ರೀ ಶ್ರೀ ಶ್ರೀ

**ವಿಷಯ :** ಬಸವಸ್ತುತಿ.

**ವಿಶೇಷ :** ೩೫, ೩೬ ನೆಯ ಪತ್ರಗಳ ಅಂಚು ತ್ರುಟಿತ. ಈ ಕಟ್ಟನಲ್ಲಿ ಈ ಗ್ರಂಥವಲ್ಲದೆ ಒಂದು ತೆಲುಗು ಕೃತಿಯೂ ಬಸವಸ್ತೋತ್ರ ತ್ರಿವಿಧಿ ಮೊದಲಾದ ೧೭ ಕನ್ನಡ ಗ್ರಂಥಗಳೂ ಶಿವಭುಜಂಗ ಸ್ತೋತ್ರಾದಿ ೧೬ ಸಂಸ್ಕೃತ ಗ್ರಂಥಗಳೂ ಇವೆ.

—ಎಸ್‌ಬಿ

## 23

| ಕೆ. ೯೯೪/೧೨ | **ಅಕ್ಷರಾಂಕ ಗದ್ಯ** | ಗದ್ಯ, ಪದ್ಯ |
|---|---|---|
| ೮" × ೨.೨" | ಪಾಲ್ಕುರಿಕೆ ಸೋಮನಾಥ | ಸು. ೧೭೯೫ |
| ೫೧-೫೫ ಪತ್ರ | ೯ ಪಂಕ್ತಿ | ೩೫ ಅಕ್ಷರ |

**ಆದಿ :** ಶ್ರಿ ಗುರು ಬಸವಲಿಂಗಾಯ ನಮಃ॥ ಅಕ್ಷರಾಂಕ ಗದ್ಯ
ಶ್ರೀಯುಇತ ನಮಃಶಿವಾಯೆ
ತ್ಯಾಯತ ಪಂಚಾಕ್ಷರಿ ಪ್ರಣಮ ಶಂಭೂತ
ಸ್ವಾಯತ ಬಾವನ್ನಕ್ಷರ
ಕಾಯಸ್ಥನೆ ನಿಂಮ ಪೊಗಳ್ವೆನಾಂ ಬಸವೇಶಾ॥ ೧

ಶ್ರೀ ತುಹಿನಾದ್ರಿಜಾಧಿಪ ಆಕಾರ ವುಕಾರ ಮಕಾರ ಬಿಂದುನಾಂದಾತ್ಮ ಶಯಾತ್ಮಕ ಪ್ರಣವ ಪೂರ್ವಸಮಾಕಲಿತೋಂ ನಮಶಿವಾಯೇತಿ ಭವೋಂ ನತೇದ್ಭವ ಷಡಕ್ಷರ ಸಂಬತದ್ವಿಪಿನ ವಿಖ್ಯಾತಿ ವರಸ್ವರಾದ್ಯಖಿಲವರ್ನ್ನನು ತಾಂ ಬಸವೇಶ ಪಾಹಿಮಾಂ........

**ಅಂತ್ಯ :** ಶಿವಮಸ್ತು ಭಕ್ತಿವಿಭವೋ
ದ್ಭವಮಸ್ತುಂ ವಕ್ಷರಾಂಕ ಪಠಣ ಶ್ರವಣ

ಸ್ತವನಾಶಕ್ತರಿಗೆ ಮಹೋ
ತ್ಸವಮಸ್ತು ವಾಕ್ಸಿದ್ಧಿರಸ್ತು ಶಿವಬಸವೇಶಾ॥ ೪೧
ಅಕ್ಷರಾಂಕಗದ್ಯ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ಬಸವಸ್ತುತಿ.

**ವಿಶೇಷ :** ಇದೇ ಕಟ್ಟನಲ್ಲಿ ಬಸವ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ. ೮೪–೧೧೦ ಪತ್ರಗಳಿಲ್ಲ.

— ಜಿಜಿಎಂ

## 24

| | | |
|---|---|---|
| ಕೆ. ೧೧೩೯/೨೩ | **ಅಕ್ಷರಾಂಕ ಗದ್ಯ** | ಗದ್ಯ, ಪದ್ಯ |
| ೭" × ೨" | ಪಾಲ್ಕುರಿಕೆ ಸೋಮನಾಥ | ಸು. ೧೧೯೫ |
| ೯೨–೯೮ ಪತ್ರ | ೯ ಪಂಕ್ತಿ | ೨೮ ಅಕ್ಷರ |

**ಆದಿ :** ಗುರುಬಸವಲಿಂಗಾಯ ನಮಃ। ಅಕ್ಷರಾಂಕ ಗದ್ಯ

ಕಂದ॥ ಶ್ರೀಯುತ ನಮಃಶಿವಾಯೆ
ತ್ಯಾಯುತ ಪಂಚಾಕ್ಷರಿ ಪ್ರಣವ ಸಂಭೂತ
ಸ್ವಾಯುತ ಬಾವನ್ನಕ್ಷರ
ಕಾಯಸ್ಥನೆ·ನಿಂಮ ಪೊಗಳೆನಾಂ ಬಸವೇಶಾ

**ಅಂತ್ಯ :** ಶಿವಮಸ್ತು ಭಕ್ತಿವಿಭವೋ
ದ್ಭವಮಸ್ತು ವಕ್ಷರಾಂಕ ಪಠಣ ಶ್ರವಣಾ
ಸ್ತವನಾ ಶಕ್ತರಿಗೆ ಮಹೋ
ತ್ಸವವೋಸ್ತು ವಾಕ್ಸಿದ್ಧಿರಸ್ತು ಶಿವಬಸವೇಶಾ॥ ೪೦
ಅಕ್ಷರಾಂಕ ಗದ್ಯ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ಬಸವಸ್ತೋತ್ರ.

**ವಿಶೇಷ :** ಗ್ರಂಥ ಸಮಗ್ರವಾಗಿದೆ. ಇದರೊಂದಿಗೆ ಷಡಕ್ಷರ ಕಂದ ಮೊದಲಾದ ೩೬ ಗ್ರಂಥಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

—ಎಸ್‌ಬಿ

## 25

| | | |
|---|---|---|
| ಕೆ. ೧೧೯೪/೮ | **ಅಕ್ಷರಾಂಕ ಗದ್ಯ** | ಗದ್ಯ, ಪದ್ಯ |
| ೭.೨" × ೧.೭" | ಪ್ರಭುದೇವರು | ಸು. ೧೧೬೦ |
| ೭೭–೮೧ ಪತ್ರ | ೯ ಪಂಕ್ತಿ | ೩೨ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ॥ ಅಕ್ಷರಾಂಕ।
ಶ್ರೀಮನ್ನ್ಮಃ ಶಿವಾಯ ಮ
ಹಾ ಮನುರೂಪಾಯತೇ ನಮೋಸ್ತಿತಿ ವರ್ನ
ಸ್ತೋಮಾಂಗಮಲ್ಲಮ ಪ್ರಭು
ನಾಮನಹತ್ಸಾಮಹಸ್ತುವೆ ಪ್ರಭುಲಿಂಗ ೧

ಅಂತ್ಯ : ಶುಭಮಸ್ತು ವಿವಿಧ ವಿದ್ಯಾ
ವಿಭವೋಸ್ತು ಯಶೋಸ್ತು ಸಂಪದಸ್ತುವ ಜೋದು
ರ್ಲಭ ಗದ್ಯವಿಾಹ ಪಠದ್ಭಃ
ಸುಭಕ್ತಿರಸ್ತ್ವಹ್ವಂತ ಯೀ ಪ್ರಭ-ಲಿಂಗ॥
ಪ್ರಭುದೇವರಕ್ಷರಾಂಕ ಗದ್ಯ ಸಮಾಪ್ತ ಮಂಗಳ ಮಹಾಶ್ರೀ॥

ವಿಷಯ : ವೀರಶೈವ ಸಿದ್ಧಾಂತ ಪ್ರತಿಪಾದನೆ.

ವಿಶೇಷ : ಇದೇ ಕಟ್ಟಿನಲ್ಲಿ ಶಿವಾಧವ ಶತಕ, ಶಿವಾವಲ್ಲಭ ಶತಕ, ಅಕ್ಷರ ಮಾಲಿಕಾ ಗದ್ಯ, ಮರುಳದೇವರ ಕಂದ, ಷಡಕ್ಷರಿಯ ಕಂದ ಮೊದಲಾದ ಕೃತಿಗಳಿವೆ.

—ವೈಸಿಬಿ

## 26

ಕೆ. ೧೧೦೨/೬ | **ಅಕ್ಷರಾಂಕನ ಗದ್ಯ (ಸಟೀಕು)** | ಗದ್ಯ, ಪದ್ಯ
೧೨.೬" × ೨.೪" | ಪಾಲ್ಕುರಿಕೆ ಸೋಮನಾಥ | ಸು. ೧೧೯೫
೮೧-೯೬ ಪತ್ರ | ೯ ಪಂಕ್ತಿ | ೫೮ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ। ಅಕ್ಷರಾಂಕನ ಗದ್ಯ ಬರವುದಕ್ಕೆ ಶುಭಮಸ್ತು॥ ಕಂದ॥

ಶ್ರೀಯುತ ನಮಶ್ಶಿವಾಯೇ
ತ್ಯಾಯತ ಪಂಚಾಕ್ಷರೀಪ್ರಣವಸಂಭೂತ
ಸ್ವಾಯತ ಬಾವನ್ನಕ್ಷರ
ಕಾಯಸ್ಥನೇ ನಿಮ್ಮ ಪೊಗಳ್ವೆನಾಂ ಬಸವೇಶಾ॥

ಟೀಕು॥ ಶ್ರೀಯುತ। ನಿರತಿಶಯೈಶ್ವರ್ಯೋಪಲಕ್ಷಿತವಾದ ನಮಃಶ್ಶಿವಾಯೇತಿ। ನಮಃಶ್ಶಿವಾಯೆಂಬ। ಆಯತ। ದೀರ್ಘವಾದಂಥಾ। ಪಂಚಾಕ್ಷರಿ। ಶ್ರೀಶೈವಪಂಚಾಕ್ಷರಿಯೆಂಬ ಪ್ರಣವ। ಓಂಕಾರದಲ್ಲಿ ಸಂಭೂತ। ಯ್ಯೆದಲ್ಪಟ್ಟ

ಅಂತ್ಯ : ಶಿವಮಸ್ತು ಭಕ್ತಿವಿಭವೋ
ದ್ಭವಮಸ್ತುವಕ್ಷರಾಂಕ ಪಠಣ

ಶ್ರವಣ ಸ್ತವನಾಸಕ್ತರಿಗೆ ಮಹೋ
ತ್ಸವಮಸ್ತು ವಾಕ್ಸಿದ್ಧಿರಸ್ತು ಶಿವಬಸವೇಶ॥
ಟೀಕು॥ ಅಸ್ತು। ಆಗಲಿ। ವಾಕ್ಸಿದ್ಧಿರಸ್ತು। ವಾಕ್ಯಸಿದ್ಧಿಯು। ಅಸ್ತು। ಆಗಲಿ॥ ೪೧॥ ಅಕ್ಷರಾಂಕನ ಗದ್ಯ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ಬಸವಸ್ತುತಿ.

**ವಿಶೇಷ :** ಇದೇ ಕಟ್ಟಿನಲ್ಲಿ ಮಲುಹಣ ಸ್ತೋತ್ರ, ಮಹಿಮ್ನ ಸ್ತೋತ್ರ, ನಾನಾರ್ಥ ರತ್ನಾಕರ, ಧನಂಜಯ ನಿಘಂಟು, ಸುಭಾಷಿತ ಗ್ರಂಥ ಮತ್ತು ಅಕ್ಷರಾಂಕನ ಗದ್ಯಗಳಿವೆ.

—ಜಿಜಿಎಂ

## 27

ಕೆ. ೧೨೬೦/೧೬ | **ಅಕ್ಷರಾಂಕನ ಗದ್ಯ** | ಗದ್ಯ, ಪದ್ಯ

೧೦" × ೨.೧" | ಪಾಲ್ಕುರಿಕೆ ಸೋಮನಾಥ | ಸು. ೧೧೯೫

೧೨೪-೧೨೭ ಪತ್ರ | ೧೧ ಪಂಕ್ತಿ | ೫೦ ಅಕ್ಷರ

**ಆದಿ :** ಅಕ್ಷರಾಂಕನ ಗದ್ಯ॥
ಕಂದ॥ ಶ್ರೀಯುತ ನಮಃಶಿವಾಯೆ
ತ್ಯಾಯತ ಪಂಚಾಕ್ಷರಿ ಪ್ರಣವ ಶಂಭೂತ
ಸ್ವಾಯತ ಬಾವಂನಕ್ಷರ
ಕಾಯಸ್ತನೆ ನಿಂನು ಪೊಗಳ್ವೆನಾಂ ಬಸವೇಶಾ॥ ೧

**ಅಂತ್ಯ :** ಕಂದ॥ ಯಿತಿ ಭಾವಂನಕ್ಷರ ಸಂ
ಸ್ತುತಿ ಸಂಕಲಿತಾಕ್ಷರಾಂಕಿತ ಸ್ತೋತ್ರವುಮಾ
ಪತಿ ನಿನಗರ್ಪಿಸಿದೇಂ ಸ
ದ್ರ್ರತಿಯಿಂ ಪಾಲ್ಕುರಿಕೆ ಸೋಮಕೃತಿ ಬಸವೇಶಾ॥ ೩೯

ಲವಮಸ್ತು ಭಕ್ತಿವಿಭವೋ
ದ್ಭವಮಸ್ತು ವಕ್ಷರಾಂಕ ಪಠಣ ಶ್ರವಣಾ
ಸ್ತವನಾ ಶಕ್ತರಿಗೆ ಮಹೋ
ತ್ಸವಮಸ್ತು ವಾಕ್ಯಿದ್ಧಿರಸ್ತು ಶಿವಬಸವೇಶಾ॥ ೪೧
ಅಕ್ಷರಾಂಕನ ಗದ್ಯ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ಬಸವಸ್ತುತಿ.

**ವಿಶೇಷ :** ಸಮಗ್ರ, ಬರಹ ಛಿನ್ನಾಗಿದೆ. ಇದೇ ಕಟ್ಟಿನಲ್ಲಿ ಉದ್ಭಟದೇವರೇ ಮೊದಲಾಗಿ

೧೩ ರಗಳೆಗಳೂ, ಬಸವಸ್ತೋತ್ರದ ತ್ರಿವಿಧಿ, ಶಂಕರದೇವರ ಕಂದ ಇತ್ಯಾದಿ ೨೬ ಕೃತಿಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

—ಕೆಆರ್‌ಎಸ್

## 28

| ಕೆ. ೧೧೬೪/೧ | ಅಖಂಡೇಶ್ವರನ ಜೋಗುಳ | ಹಾಡು |
| --- | --- | --- |
| ೧೦" × ೧.೭" | ಅಖಂಡೇಶ್ವರ | ಸು. ೧೭೦೦ |
| ೪೯-೫೧ ಪತ್ರ | ೧೦ ಪಂಕ್ತಿ | ೪೧ ಅಕ್ಷರ |

**ಆದಿ :** ಶ್ರೀ ಗುರು ಅಖುಡೇಶ್ವರನ ಜೋಗುಳು.

ಪದ : ಜೋಜೋ ಎಂನಿ ಅಂಬಿಕ ಪತಿಗೆ। ಜೋಜೋ ಎಂನಿ
ಶಂಭು ಶಂಕರಗೆ। ಜೋಜೋ ಎಂನಿ ಅವಿರಳ ಶಿವಗೆ।
ಪಾಡಿ ಜೋಜೋ ಎಂನ್ನಿ। ಅಖುಡೇಶ್ವರಗೆ ಜೋಜೋ।
ಜೋಜೋ ಆದಿಮಧ್ಯಂತದೂರ ಜೋಜೋ ವೇದ ವೇದಾಂತಸಾರ ಜೋಜೋ॥ ನಾದ ಬಿಂದು ಸಂಪೂರ್ಣ ನಿತ್ಯ ಜೋಜೋ॥ ತತ್ತ್ವಜ್ಞಾನ ಶೃಂಗಾರ ಜೋಜೋ॥ ॥೧॥ ಸಾಸಿರ ಕಂಬದ ಮಂಟಪದ ನಡುವೆ ಯಿಶ್ವರ॥ ಶ್ರೀಗುರುವ ಏಕದಶ ಪ್ರಸಾದಂಗಳ ವಿವರ॥ ಅನಾದಿಕುಳ ಸನ್ತತವಾದ। ಏಕದಸ ಪ್ರಸಾದದ ಭನ ತಿಳಿಪಡೆ। ಪ್ರಥಮದಲ್ಲಿ। ಗುರು ಪ್ರಸಾದ। ದ್ವಿತೀಯದಲ್ಲಿ ಲಿಂಗಪ್ರಸಾದ। ತೃತೀಯದಲ್ಲಿ ಜಂಗಮದಪ್ರಸಾದ। ಚತುರ್ಥಿಯಲ್ಲಿ ಪ್ರಸಾದಿಯದ ಪ್ರಸಾದ। ಪಂಚಮಿಯಲ್ಲಿ ಆನ್ಯಯನ ಪ್ರಸಾದ। ಸಪ್ತಮದಲ್ಲಿ ಸಮಯ ಪ್ರಸಾದ। ದಶಮದಲ್ಲಿ ಸಮತಾ ಪ್ರಸಾದ। ಏಕದಶದಲ್ಲಿ ಜ್ಞಾನ ಪ್ರಸಾದ। ಯಿಂತೀ ಏಕದಸ ಪ್ರಸಾದಂಗಳ ನತಿಗಳದತುಲ ಚೆಂನ ಸಂಗಯ್ಯನಲ್ಲಿ। ಐಕ್ಯವು ಪ್ರಸಾದಿಗೆ ನಮೋ ನಮೋ ಯೆಂಬೆನು॥

**ಅಂತ್ಯ :** ಯಿಂತೀ ಹಿಂದೆ ಪೇಳಿದ ಹತ್ತು ತೆರದ ಪಾದೋದಕವ ತಿಳಿದನುಭವಿಸಿ ತಂನಡಿಗೆರಗಿ ಬಂದ ಭಕ್ತ ಮಹೇಶ್ವರರೀಗನುಭವಿಸುವದಮರುಹಿ ಕಾಡುವವ ಶರಣನಲ್ಲದೆ ಮತ್ತಾರುಯಿಲ್ಲವೆಂಬುದೀಗ। ದಶವಿಧವಾದ ಪಾದೋದಕದ ನಿರ್ನ್ನಯುವನರಿದುಕೊಳಬಲ್ಲ ಕೊಡಬಲ್ಲ ಕೂಡಲ ಚೆನ ಸಂಗಮ ನಿಂಮ್ಮ ಶರಣರವೆಂಬ ಶಬ್ದ ಕಥೆ॥

**ವಿಷಯ :** ಶಿವನ ಏಕಾದಶ ಪ್ರಸಾದಗಳ ವಿವರಣೆ.

**ವಿಶೇಷ :** ಒಂದು ಗರಿ ಮುರಿದುಹೋಗಿದೆ. ಅಕ್ಷರಗಳು ಸುಂದರವಾಗಿವೆ. ಈ ಕಟ್ಟಿನಲ್ಲಿ ಗಣ ಸಹಸ್ರನಾಮ ಮುಂತಾದ ಇತರ ೧೬ ಕೃತಿಗಳಿವೆ.

—ಎಂಪಿಎಂ

## 29

ಕೆ. ೧೭೮೮/೮ **ಅಖಂಡೇಶ್ವರನ ಜೋಗುಳ** ಹಾಡು

೧೪.೫" × ೧.೨" ಷಣ್ಮುಖಸ್ವಾಮಿ ಸು. ೧೭೦೦

೨೫-೩೦ ಪತ್ರ ೬ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀಗಣಾಧಿಪತಯೇ ನಮಃ ಗುರುವೆಗತಿ ಬಸವಲಿಂಗಯೆ ನಮಃ
ಷಣ್ಮುಖದೇವರು ನಿರುಪಿಸಿದ ಅಖಂಡೇಶ್ವರನ ಜೋಗಳಾ
ಜೋಜೋ ಯೆಂನ್ನಿ ಅಂಬಿಕಾಪತಿಗೆ
ಜೋಜೋ ಯೆನ್ನಿ ಶಂಭುಶಂಕರಗೆ
ಜೋಜೋ ಯೆನ್ನಿ ಅವಿರಳ ಶಿವಗೆ
ಪಾಡಿ ಜೋಜೋ ಯೆನ್ನಿ ಅಖಂಡೇಶ್ವರಗೆ ||ಪದನೂ||
ಜೋಜೋ ಆದಿ ಮಧ್ಯಾಂತಹಾರ
ಜೋಜೋ................ ........
ಜೋಜೋ ನಾದು ಬಿಂದು ಸಪೂರ
ನಿತ್ಯ ಜೋಜೋ ತತ್ವಗ್ನ್ಯಾನ ಸ್ರುಂಗಾರ ||೧||

**ಅಂತ್ಯ :** ಅಜಹರಿಸುರ ಮುನಿಕೀರ್ತಿಗಳಿದೆ
ನಿಜಗುರು ಬಸವಾದಿ ಪ್ರಮಥರುಮುಂದೆ
ಗಜಮುಖಗುಂಷ್ಮವಿರ ಉಯಿಶಹಾ ಚ ದೆನಿತ್ಯ
ಮಜಬಾಪು ಪರಬ್ರುಂಹ್ಮಯಂನೊಳು ನಿಂದೇ ||ಜೋಜೋ|| ೬೦
ಷಣ್ಮುಖದೇವರು ನಿರೂಪಿಸಿದ ಅಂಖಡೇಶ್ವರನ ಜೋಗುಳಪದ ಸಮಾಪ್ತಿ
ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಪ್ರತಿ ಚೆನ್ನಾಗಿದೆ. ಸಮಗ್ರ. ಇದರ ಜೊತೆಗೆ ಮನೋಬೋಧ ಮುಂತಾದ ೧೮ ಕೃತಿಗಳಿವೆ. ಇವುಗಳಲ್ಲಿ ೧೧ ತೆಲುಗು ಕೃತಿಗಳು.

—ಜಿಜಿಎಂ

## 30

ಕೆ. ೧೧೬೪/೨ **ಅಖಂಡೇಶ್ವರನ ಜೋಗುಳ** ಹಾಡು

೧೧" × ೧.೭" ಷಣ್ಮುಖಸ್ವಾಮಿ ಸು. ೧೭೦೦

೩ ಪತ್ರ ೯ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀ ಗುರುವೆ ಗತಿ| ಅಖಂಡೇಶ್ವರನ ಜೋಗುಳದ ಪಚನ ಬರವೂದಕ್ಕೆ ಶುಭಮಸ್ತು|| ಶೋಭನಮಸ್ತು|| ಜೋಜೋ ಯಂನಿ ಅಂಬಿಕಪತಿಗೆ||

ಜೋಜೋ ಯಂನಿ ಶಂಭು ಶಂಕರಗೆ॥ ಜೋಜೋ ಯಂನಿ ಅವಿರಳ ಸಿವಗೆ॥
ಪಾಡಿ ಜೋಜೋ ಯಂನಿ ಅಖಂಡೇಶ್ವರಗೆ॥

ಪಲ್ಲ॥ ಜೋಜೋ ಆದಿನುಧ್ಯಂತ ದೂರಾ॥ ಜೋಜೋ ವೇದ ವೇದಾಂತ ಸಾರ॥ ಜೋಜೋ ನಾದ ಬಿಂದು ಸಂಪೂರ್ಣ ನಿತ್ಯ॥ ಜೋಜೋ ತತ್ವ ಜ್ಞಾನಿ ಶೃಂಗರಾ॥ ಜೋಜೋ ॥೧॥
ಸಾಸಿರ ಕಂಬದ ಮಂಟಪದ ನಡುವೆ॥ ಯಿಾಶ್ವರ ನೊಸಲನಿನೆಪ್ಪ ಪೇಳುವೆ॥ ಸುಸದ ವಾದ್ಯದ ಘೋಶ ಕೇಳುವೆ॥ ವಿಮಲಭಾಸ್ಕರ ಕೋಟಿ ಪ್ರಕಾಶದ ಸಿಸುವೆ॥ ಜೋಜೋ॥

ಅಂತ್ಯ : ಇಂತು ಲಿಂಗಾಂಗ ಪರತರ ಪರಶಿವ ಜಯಜಯ ಯೆಂನಿ॥ ಪರಮ ಸುಪರ ಮೇಶ ಜಯಜಯ ಯಂನಿ॥ ಪರಮಾತ್ಮ ಪರಬ್ರಂಹ್ಮ ಜಯಜಯ ಯಂನಿ॥ ಜೋಜೋ॥ ॥೩೭॥ ಯಿಂತು ಲಿಂಗಾಂಗ ಪದಗಳನು॥ ಸಂತತ ವೋದಿ ಕೇಳಿದ ಶರಣರ ಕಂತುಹರನೊಲಿದು॥ ಸಂತೋಷವನ್ಯೈವನು ॥ಮಚ್ಚಿ॥ ಚಿಂತಿತಾರ್ತವನೀವ॥ ಅಖಂಡೇಶ್ವರನೂ ಜೋಜೋ ॥೩೮॥ XXX ಜೋಗುಳದ ಪದ ಸಮಾಪ್ತ ಮಂಗಳ ಮಹಾ ॥ಶ್ರೀ ಶ್ರೀ॥

**ವಿಷಯ :** ಅಖಂಡೇಶ್ವರ ಸ್ತುತಿ.

**ವಿಶೇಷ :** ಪ್ರತಿ ಸಾಮಾನ್ಯವಾಗಿದೆ. ಈ ಕಟ್ಟಿನಲ್ಲಿ 'ಗಣಸಹಸ್ರನಾಮ' ಮುಂತಾದ ಇತರೆ ೧೬ ಕೃತಿಗಳಿವೆ.

—ಎಂಪಿಎಂ

## 31

| ಕೆ. ೬೬೫ ಎ/೧ | **ಅಖಂಡೇಶ್ವರ ವಚನ** | ವಚನ |
|---|---|---|
| ೧೦" × ೨" | ಷಣ್ಮುಖಸ್ವಾಮಿ | ಸು. ೧೭೦೦ |
| ೧೧ ಪತ್ರ | ೧೧ ಪಂಕ್ತಿ | ೪೨ ಅಕ್ಷರ |

**ಆದಿ :** ಲಿಂಗೈಕ್ಯನೂ ಗಮನೀ ನಿರ್ಗ್ಗಮನೀಯಲ್ಲ ನೋಡಾ ಲಿಂಗೈಕ್ಯನೂ
ಸುಮನನ............ ನೋಡಾ ಲಿಂಗೈಕ್ಯನು
ಅಮಲ ಬ್ರಹ್ಮದ ಕೂಡಲಿಕಭೇಧ್ಯನು ನೋಡಾ ಲಿಂಗೈಕನೂ
ಅದ್ವಯಭಾವಾ ಅಗಣಿತ ಮಹಿಮನು ನೋಡಾ
ಖಂಡೇಶ್ವರಾ ನಿಮ್ಮ ನಿಜಲಿಂಗೈಕ್ಯನೂ ೪

**ಅಂತ್ಯ :** ಆದಿಯಿಲ್ಲದ ಬಯಲು ಅನಾದಾ ಬಯಲು
ಶೂನ್ಯವಿಲ್ಲದ ಬಯಲು ನಿಶ್ಶೂನ್ಯವಿಲ್ಲದಾ ಬಯಲು
ಸುರಾಳವಿಲ್ಲದಾ ಬಯಲು ನಿರಾಳವಿಲ್ಲದಾ ಬಯಲು

ಸಾವಯುವವಿಲ್ಲದ ಬಯುಲು ನಿರವಯುವವಿಲ್ಲದಾ ಬಯುಲು
ಅಖಂಡೇಶ್ವರನೆಂಬಾ ಬಯಲಿನ ಬಯುಲು
ಮಹಾಘನ ಬಚ್ಚಬರಿಯ ಬಯಲೊಳಗೆ ನಾನೇ
ಕಾಣದೇನೆಂದರಿಯೇನೂ ೬೪

ಐಕ್ಯಸ್ಥಲ ಸಮಾಪ್ತಃ॥ ಷಣ್ಮುಖಸ್ವಾಮಿಗಳು ನಿರೂಪಿಸಿದ ಷಟ್ಸ್ಥಲ ಸಮಾಪ್ತಃ॥ ಭಕ್ತಿಸ್ಥಲಕ್ಕೆ ಸೇರಿದ ವಚನ ೨೦೬ ಮಹೇಶ್ವರ ಸ್ಥಲಕ್ಕೆ ೧-೧ ಪ್ರಸಾದಿಸ್ಥಲಕ್ಕೆ ೫೧ ಪ್ರಾಣಲಿಂಗೀ ಸ್ಥಲಕ್ಕೆ ೧೧೫ ಶರಣ ಸ್ಥಲಕ್ಕೆ ೧ ೫ ಐಕ್ಯ ಸ್ಥಲಕ್ಕೆ ೬೪ ಅಂತು ಸ್ಥಲ ಆರಕ್ಕೆ ೭೧೬ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

**ವಿಷಯ :** ಷಟ್ಸ್ಥಲ ಸಿದ್ಧಾಂತ ಪ್ರತಿಪಾದನೆ.

**ವಿಶೇಷ :** ಅಸಮಗ್ರ. ಐಕ್ಯಸ್ಥಲಮಾತ್ರವಿದೆ. ಪ್ರಾರಂಭದ ನೂರು ವಚನಗಳಿಲ್ಲ. ೧೨೨ ರಿಂದ ೧೩೨ ಓಲೆಗಳಿವೆ. ಅಕ್ಷರ ಚೆನ್ನಾಗಿದೆ. ೧೨೨ನೇ ಗರಿ ಸ್ವಲ್ಪ ಮುರಿದಿದೆ.

—ಎಂಎನ್ಎಲ್

## 32

ಕೆ. ೬೮೭ **ಅಖಂಡೇಶ್ವರ ವಚನ** ವಚನ

೧೬.೧″ × ೧.೫″ ಷಣ್ಮುಖಸ್ವಾಮಿ ಸು. ೧೭೦೦

೧-೧೪೯ ಪತ್ರ ೭ ಪಂಕ್ತಿ ೫೪ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ಶುಭಮಸ್ತು॥
ಅಖಂಡೇಶ್ವರನ ವಚನವ ಬರವುದಕ್ಕೆ ಶುಭಮಸ್ತು॥ ಷಣ್ಮುಖಸ್ವಾಮಿಗಳು ನಿರೂಪಿಸಿದ ತೂರ್ರ್ಯಾ ನಿರಾಲಂಬ ಶರಣ ಅರುಹಿನ ಷಡುಸ್ಥಲದ ವಚನ॥ ಪಿಂಡಸ್ಥಲ॥ ಆ ಸ್ಥಲದ ವಚನ.

ಆದಿ ಅನಾದಿಯಿಲ್ಲದಂದು ನಾದಬಿಂದು ಖಳೆಗಳಿಲ್ಲದಂದು ಚೌಷಷ್ಠಿ ವಿದ್ಯ ಕಳೆಗಳಿಲ್ಲದಂದು ಭೇದ ಭೇದಂಗಳಿಲ್ಲದೆ ತೋರುವ ತೋರಿಕೆಗಳೇನು ಯಿಲ್ಲ ದಂದು ಅಖಂಡೇಶ್ವರ ನಿಂಮ ನೀವರಿಯದೆ ಅನಾದಿಕಾಲಯಿರ್ದಿರಂದः॥ ೧

**ಅಂತ್ಯ :** ನೋಡಲಿಲ್ಲದ ಬಯುಲು ಸುಡಲಿಲ್ಲದ ಬಯುಲು ಕೂಡಲಿಲ್ಲದ ಬಯುಲು ನಾಮವಿಲ್ಲದ ಬಯುಲು ಸೀಮೆಯಿಲ್ಲದ ಬಯುಲು ಕಾಯುವಿಲ್ಲದ ಬಯುಲು ಅಖಂಡೇಶ್ವರನೆಂಬ ಬಯಲಿನ ಬಯಲೊಳಗೇ ನಾನೆತ್ತ ಹೋದೆನೆಂದರಿ ಯೆನೂ ॥೪೬॥

ಯಿಂತೀ ಐಖ್ಯಸ್ಥಲ ಸಮಾಪ್ತ ಮಂಗಳ ಮಹಾಶ್ರೀ

ಷಣ್ಮುಖಸ್ವಾಮಿಗಳು ನಿರೂಪಿಸಿದ ತೂರ್ಯ ನಿರಾಲಂಬ ಶರಣನ ಅರುಹಿನ ಷಡುಸ್ಥಲಕ್ಕೆ ಸೇರಿದ ವಚನ ಭಕ್ತಿಸ್ಥಲಕೆ ಸೇರಿದ ವಚನಾ ೪೩॥ ಮಹೇಶ್ವರ ಸ್ಥಲಕ್ಕೆ ಸೇರಿದ ವಚನ ೧೨೩॥ ಪ್ರಸಾದಿ ಸ್ಥಲಕ್ಕೆ ಸೇರಿದ ವಚನ ೫॥ ಪ್ರಾಣಲಿಂಗಿ ಸ್ಥಲಕ್ಕೆ ಸೇರಿದ ವಚನ ೧೧೩॥ ಶರಣ ಸ್ಥಲಕ್ಕೆ ಸೇರಿದ ವಚನ ೮॥ ಐಖ್ಯಸ್ಥಲಕ್ಕೆ ಸೇರಿದ ವಚನ ೯೬॥ ಅಂತು ಸ್ಥಲಕ್ಕೆ ಸೇರಿದ ವಚನ ೪೪೫ ಕಂ ಮಂಗಳ ಮಹಾಶ್ರೀ॥ ಅಖಂಡೇಶ್ವರ ಸ್ವಾಮಿಯವರ ವಚನ ರಕ್ತಾಕ್ಷಿ ಸಂವತ್ಸರದ ಜ್ಯೈತ್ರ ಬ ೬ ಲ್ಲು ಸಂಪೂರ್ನ ಮಂಗಳ ಮಹಾ ಶ್ರೀ॥ ನಿಮ್ಮ ವಚನವನ್ನು ಬರದವರು ವೋದಿದವರು ನಿಂಮ್ಮ ಬಾಲಕ ಬರದನೆಂದು ತಪ್ಪುಳಡೆ ತಿದ್ದಿ ಸಂಪಾದಿಸುವರು.

**ವಿಷಯ :** ವೀರಶೈವ ಷಟ್ಸ್ಥಲ ಸಿದ್ಧಾಂತ

**ವಿಶೇಷ :** ಸಮಗ್ರವಾಗಿದೆ. ಬರಹವು ದಪ್ಪಗಿದ್ದು ತುಂಬಾ ಚೆನ್ನಾಗಿದೆ.

—ಕೆಆರ್‌ಎಸ್

## 33

| ಕೆ. ೧೩೦೩ | **ಅಖಂಡೇಶ್ವರ ವಚನ** | ವಚನ |
|---|---|---|
| ೧೮.೫" × ೧.೫" | ಷಣ್ಮುಖಸ್ವಾಮಿ | ಸು. ೧೭೦೦ |
| ೧-೧೦೯ ಪತ್ರ | ೬ ಪಂಕ್ತಿ | ೮೨ ಅಕ್ಷರ |

**ಆದಿ :** ಶ್ರೀ ಗುರು ಗಣೇಶಾಯ ನಮಃ॥ ಸಾಧಾರಣ ಸಂವತ್ಸರದ ಕಾರ್ತೀಕ ಬ ೧೩ ಭಾನುವಾರದಲ್ಲು ಕೊರಟಗೆರೆ ಬಳೇಸಾಲೆ ಚಿಕ್ಕನಂಜುಂಡಪ್ಪಗೆ ವುಪಾದ್ಯ ತಂಮ್ಮೈಯ್ಯನವರ ಕುಮಾರ ಭಾಸ್ಕರೈಯನು ಬರದುಕೊಟ್ಟ ಅಂಖಂಡೇಶ್ವರನ ವಚನಕ್ಕೆ ಶುಭಮಸ್ತು॥

ತೂರ್ಯನಿರಾಲಂಬ ಶರಣರರುಹಿನ ಷಡುಸ್ತಲದ ವಚನಾ॥ ವೊದಲು ಪಿಂಡ ಸ್ಥಲಾ॥ ಆ ಸ್ಥಲದ ವಚನ

ಆದಿ ಆಧಾರವಿಲ್ಲದಂದು ವೇದಶಾಸ್ತ್ರಾಗಮತಂತ್ರಂಗಳಿಲ್ಲದಂದು ಚೌಷಷ್ಟಿ ವಿದ್ಯಕಲೆಗಳಿಲ್ಲದಂದು ಭೇದಾಭೇದಂಗಳೆಂದೆ ತೋರುವ ಕೋರಿಕೆಗಳೇನು ಯಿಲ್ಲದಂದು ಅಖಂಡೇಶ್ವರ ನಿಂಮ ನೀವರಿಯದೆ ಅನಂತಕಾಲವಿರ್ದ ರಂದೂ॥ ೧

**ಅಂತ್ಯ :** ಯಿಂತೀ ಐಖ್ಯಸ್ಥಲ ಸಮಾಪ್ತ ಮಂಗಳಾನು ಭವಾಂತೂ ಷಣ್ಮುಖಸ್ವಾಮಿ ಗಳು ನಿರೂಪಿಸಿದ ತೂರ್ಯಾನಿರಾಲಂಬ ಶರಣರು ಅರುಹಿನ ಷಡುಸ್ಥಲಕ್ಕೆ ಸೇರಿದ ವಚ.... ಸೇರಿದ ವಚನ ೧೪೩ ಮಹೇಶ್ವರ ಸ್ಥಲಕ್ಕೆ ಸೇರಿದ ವಚನ ೧೨೫॥ ಪ್ರಸಾದಿ ಸ್ಥಲಕ್ಕೆ ಸೇರಿದ ವಚನ ೫॥ ಪ್ರಾಣಲಿಂಗಸ್ಥಲಕೆ ಸೇರಿದ ವಚನ ೧೧೩ ಶರಣಸ್ಥಲಕ್ಕೆ ಸೇರಿದ ವಚನ ೪೬ ಅಂತೂ ಸ್ಥಲ

ಆರಕೆ ಸೇರಿ....... ಆನಂದನಾಮ ಸಂವತ್ಸರದ ಕಾರ್ತಿಕ ಶು ಬಾನುವಾರ ೧ ತೋಟಮಠದ ಚಿಕ್ಕಯ್ಯನವರು ಬಳೇಸಾಲೆ ಸಂಜುಂಡಪ್ಪಗೆ ಅರಸಿ ಬರದು ಕೊಟ್ಟ ಅಖಂಡೇಶ್ವರನ ವಚನ ಸಮಾಪ್ತ ಮಂಗಳ ಮಹಾಶ್ರೀ ಶ್ರೀ

**ವಿಷಯ:** ಷಟ್ಸ್ಥಲ ಸಿದ್ಧಾಂತ.

**ವಿಶೇಷ:** ಸಮಗ್ರ, ಪ್ರತಿ ಚೆನ್ನಾಗಿದೆ.

—ಜಿಜಿಎಂ

## 34

## ಅಖಂಡೇಶ್ವರ ವಚನ

| | | |
|---|---|---|
| ಕೆ. ೧೪೩೫/೩ | ಷಣ್ಮುಖಸ್ವಾಮಿ | ವಚನ |
| ೯.೨″ × ೨.೨″ | | ಸು. ೧೭೦೦ |
| ೪೧-೫೦ ಪತ್ರ | ೧೫ ಪಂಕ್ತಿ | ೪೩ ಅಕ್ಷರ |

**ಆದಿ:** ಶ್ರೀಗುರು ಬಸವಲಿಂಗಾಯ ನಮಃ॥ ಅಖಂಡೇಶ್ವರ ವಚನಾ ಬರೆಯುವುದಕ್ಕೆ ಶುಭಮಸ್ತು॥

ನಿಶ್ಚಲವೆಂಬ ವಸ್ತ್ರವ ಪೊದಿಶಿ। ನಿರಾವರಣವೆಂಬ ಆಭರಣವ ತೊಡಿಶಿ। ನಿಶ್ಶೂನ್ಯವೆಂಬ ನೈವೇದ್ಯವನರ್ಪಿಸಿ। ನಿರವಯವೆಂಬ ತಾಂಬುಲವನಿತು ಯಿಂತಾ ನಿರಂಜನ ಲಿಂಗವ ಅಷ್ಟವಿಧಾರ್ಚನೆಯಂ ಮಾಡಿ। ತೆಂಹಿಲ್ಲದೆ ಬೆಳಗು ಬೆಳಗ ಮಹಾ ಬೆಳಗನೊಳಕೊಂಡು ಬೆಳಗುವ ನಿರಂಜನ ಲಿಂಗವನು ಕಂಗಳು ತುಂಬಾ ನೋಡಿ ಮನದಲ್ಲಿ ಸಂತೋಷಗೊಂಡು ಆ ನಿರಂಜನ ಲಿಂಗದ ಪೂಜೆಯ ನಿರ್ಮಾಲ್ಯವಂ ಮಾಡದೆ।

**ಅಂತ್ಯ:** ಶರಣಸ್ಥಲದ ಕುರುಹಿನ ಮಾರ್ಗವನರಿಯದೆ ನಾನು ಶರಣನು ಯೆಂದು ನುಡಿವ ಕರ್ಮಿ ಜೀವಿಗಳ ಮುಗವ ನೋಡಲಾಗದೂ................ನಿತ್ಯಾ ನಿತ್ಯಾವನರಿದು ತತ್ವ ತತ್ವಂಗವೇಕೀಕರಿಸಿ। ಮಹಾಸ್ನಾನದ ಮೊತ್ತದಲ್ಲಿ ಸುಳಿಯಬೇಕೂ। ಯಿಂತೀ ಭೇದವನರಿಯದೆ ಮತ್ತು ಸವಿಯಂದುಂಡು ಮರ್ಕ್ಕದ ವಿಷಯ ಪ್ರಪಂಚಿನ ಸುಖದಲ್ಲಿ ವ್ಯವಹರಿಶಿ। ಅಜ್ಞಾನ ಕತ್ತಲೆಯಲ್ಲಿ ತೆರೆಯ ಸಿಲ್ಕಿ ಮುಂದುಗಾಣದೆ,ಮುಕ್ತಿಯ ಹೊಲಬು ತಪ್ಪಿ ಸತ್ತು ಹೋಗುವ ವ್ಯರ್ಥಪ್ರಾಣಿಗಳ ಕಂಡು ನಗುತಿರ್ದೆನು ನೋಡಾ ಅಖಂಡೇಶ್ವರಾ ॥೬೯॥ ಅಖಂಡೇಶ್ವರ ವಚನ ಸಂಪೂರ್ಣ ಮಂಗಳ ಮಹಾ ಶ್ರೀ

**ವಿಷಯ:** ಷಟ್ಸ್ಥಲ ಸಿದ್ಧಾಂತ.

**ವಿಶೇಷ:** ಇದೇ ಕಟ್ಟಿನಲ್ಲಿ ಶಿಖಾರತ್ನ, ಶಿಖಾಚಕ್ರ, ಮಂತ್ರಗೋಪ್ಯ ಮೊದಲಾದ ಇತರ ೧೦ ಕೃತಿಗಳಿವೆ.

—ವೈಸಿಬಿ

35

| | | |
|---|---|---|
| ಕೆ ಬಿ. ೫೩೯ | **ಅಖಂಡೇಶ್ವರ ವಚನ** | ವಚನ |
| ೮.೫" × ೭.೩" | ಷಣ್ಮುಖಸ್ವಾಮಿ | ಸು. ೧೭೦೦ |
| ೩೭ ಪತ್ರ | ೨೭ ಪಂಕ್ತಿ | ೨೧ ಅಕ್ಷರ |

ಆದಿ : ....ಂದುಬಿನಾದ ಪೊಳಗುತಿರ್ಪ್ಪ ಪೊಯಿಂದರೆಂದರಿವೆ... ಯಾ ಅಖಂಡೇಶ್ವರಾ ||೫|| ಸಾಸಿರ ಕಂಬದ ಮಂಡ.... ಯಿಶ್ವರನ ವಾಲಗದ ಸೋಜಿಗವನೆನ ಹೇಳುವೆನಯ್ಯಾ.... ಸಿಶ್ಚಲಾ। ಮೂಜಗದವರೆಲ್ಲರೂ ವ್ವೈಮರೆದಿರ್ಪ್ಪರೂ.... ಕೋಟಿ ಬೆಳಗು ಕಂಗಳು ತುಂಬಿತ್ತು ನೋಡಾ ಅಖಂಡೇಶ್ವರಾ ||೪೧||

ಅಂತ್ಯ : ಯಂನ ತನುವಿನೊಳಗೆ ತನುರೂಪಾಗಿರ್ದಿರ್ರೈಯ್ಯಾ। ನೀವೂ ಯಂನ ಮನದೊಳಗೆ ಮನರೂಪಾಗಿರ್ದಿರ್ರೈಯಾ। ಯಂನ ಪ್ರಾಣದೊಳಗೆ ಪ್ರಾಣರೂಪಾಗಿರ್ದಿರ್ರೈಯ್ಯಾ। ಯಂನ್ನ ಭಾವದೊಳಗೆ ಭಾವರೂಪಾಗಿರ್ದಿರ್ರೈಯ್ಯಾ।ಯಿಂತೂ ಯಂನೊಳಗೆ ನೀವೂ ಯಿಪರಿಯಲ್ಲಿ ಯಿದಿರಾಗಿ ನಾ ನಿಂವೊಳಗೆ ಚಿಂನ ಬಂಣದಂತ್ತೆ ರುಸದ ದೀಪ್ತಿಯಂತೆ। ಜ್ಯೋತಿ ಜ್ಯೋತಿಯಂತ್ತೆ ಯಂತಿದ್ದೆನೈಯ್ಯಾ ಅಖಂಡೇಶ್ವರಾ ||೬೧೧|| ಅಂಗ... ....ಸಕೀಯವಾನಳವಡಿಸಿಕೊಂಡು.... ಪ್ರಾಣಕ್ಕೆ ಪ್ರಾಣಲಿಂಗವ। ಸಂಮ್ಯಗ್ಜ್ಞಾನಾಚಾರವ ಸಂ....

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಆದ್ಯಂತಗಳಿಲ್ಲದ ಅಸಮಗ್ರಪ್ರತಿ. ಪತ್ರಗಳ ಎರಡು ಪಾರ್ಶ್ವಗಳಲ್ಲೂ ಬರವಣಿಗೆ ಇದೆ. ಪತ್ರಗಳ ಮಧ್ಯದಲ್ಲಿ ಹುಳು ಹೊಡೆದ ಸಣ್ಣ ಸಣ್ಣ ರಂಧ್ರಗಳಿವೆ.

—ಎಸ್ ಎನ್ ಕೆ

36

| | | |
|---|---|---|
| ಕೆ. ೧೧೬೪/೧೫ | **ಅಘೋರಶಿವ ಷಡಾಕ್ಷರ ಮಂತ್ರ** | ಮಂತ್ರ |
| ೧೧" × ೧ ೭" | ? | ? |
| ೧ ಪತ್ರ | ೧೦ ಪಂಕ್ತಿ | ೪೮ ಅಕ್ಷರ |

ಆದಿ : ಶ್ರೀಗುರುವೇ ಗತಿ|| ಅಘೋರಶಿವ ಷಡಾಕ್ಷರ ಮಂತ್ರ। ಯೇಕಾಂತದಲ್ಲಿ। ಯೇಕಚಿತ್ತದಲ್ಲಿ। ಅಡವಿಯೊಳಗಾದರೂ। ವನದೊಳಗಾದರೂ। ಪರ್ವತದ ಶಿರದೊಳಗಾದರೂ। ಸ್ನಾನದಲ್ಲಿ ಆದರೂ। ಗವೆ ಗಿಡವಿದ್ದಲ್ಲಿ|| ನದೀತೀರದಲ್ಲಿ ಆದರೂ|| ದುಷ್ಟರು ಯಿಲ್ಲದ ಮನೆಯಲ್ಲಿ|| ಆದರೂ|| ದಿನ ಜಪಿಸುವದು|| ಸಕಲ ಮನವಕಯ್ಯಾ ಸಿದ್ಧಿಯಹುದು||

**ಅಂತ್ಯ :** ಅಘೋರ ಶಿವ ಷಡಾಕ್ಷರ ಮಂತ್ರವನು ||೧೨೦|| ಅಗ್ನಿ ಮುಖದಲ್ಲಿ ಜಪಿಸೆ ಆಕರುಷಣ|| ದಕ್ಷಿಣದಲ್ಲಿ ಜಪಿಸೆ ಅತಿ ವುಗ್ರ|| ನಯಿರುತ್ಯದಲ್ಲಿ ಜಪಿಸೆ ಅಹಂಕಾರ|| ವರುಣದಲ್ಲಿ ಜಪಿಸೆ ಅರ್ಥಲಾಭ|| ವಾಯುವ್ಯದಲ್ಲಿ ಜಪಿಸೆ ಕುಬೇರ.... ಜಪಿಸೆ ಶಾಂತಿ|| ಯಿಶಾನ್ಯದಲ್ಲಿ ಜಪಿಸೆ ಜ್ಞಾನಪ್ರಕಾಶ|| ಯಿಂದ್ರನಲ್ಲಿ ಜಪಿಸೆ ಯಿಸ್ವರಂ||

**ವಿಷಯ :** ಶಿವನನ್ನು ಒಲಿಸುವ ವಿಧಾನದ ವಿವರ

**ವಿಶೇಷ :** ಪ್ರತಿ ಚೆನ್ನಾಗಿದೆ. ಅಕ್ಷರಗಳು ಚೆನ್ನಾಗಿವೆ. ಈ ಕಟ್ಟಿನಲ್ಲಿ 'ದಶಾಸನ' ಮುಂತಾದ ಇತರೆ ೧೬ ಕೃತಿಗಳಿವೆ. ಇದರ ಮುಂದೆ ೨ ಅರ್ಥವಾಗದ ಪತ್ರಗಳಿವೆ.

—ಎಂಪಿಎಂ

## 37

| ಕೆ. ೧೧೮೦/೨ | **ಅದ್ವೈತಖಂಡ** | ಶ್ಲೋಕ, ಟೀಕು |
|---|---|---|
| ೧೩.೮" × ೧.೨" | ಪರಣಾಚಾರ್ಯ | ? |
| ೩೬-೬೯ ಪತ್ರ | ೧೨ ಪಂಕ್ತಿ | ೮೧ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಶುಭಮಸ್ತು|| ಅದ್ವೈತ ಖಂಡನೆ ಪೂರಟೀಕೆ||

**ಗ್ರಂಥ :** ವಂದೆಯಸ್ಯ........ ಶಾಂತ ಚಂನವೀರಾಖ್ಯದೇಶಿಕಃ ||೧||
ನಮಾಮಿಯಃ ಸುಕೃತಿನಾ| ಮಾನಂದನಿಧಿ ದರ್ಶಕಂ||
ನಿರಂಜನೋಪಿಯನಿತ್ಯಂ| ಚಂನವೀರಾಖ್ಯ ಸದ್ಗುರುಂ ||೨||

ಅದ್ವೈತ ಖಂಡನ ವಚನಂಗಳು|| ಯಲೆ ಅದ್ವೈತಿ ಕೇಳು| ಬ್ರಹ್ಮವೇ ಜಗದ್ರೂಪವಾಯಿತೆಂಬೆ| ಆದರೆ| ಬ್ರಹ್ಮವು ಸಾವಯವವಾಯಿತ್ತು| ಸ್ತ್ರೇನು ಮತ್ತೀ ಅವುದು....| ಅದು ಜಡನೆಂಬೆ| ಆವುದು ಜಡನು| ಅದು ಮಿಥ್ಯವೆಂಬೆ| ಆದರೆ ಜಡನೇನದಿರು| ಸರ್ವವು ಚೈತನ್ಯವೆಂನು|

**ಅಂತ್ಯ :** ಜಲದಲ್ಲಿ ತೋರಿದ ಬುದ್ಬುಧಗಳಿಂಗೆ ಜಲದಲ್ಲಿಯೇ ವುತ್ಪತ್ತಿ ಜಲದಲ್ಲಿಯೇ ನಾಶ| ಅಂತು| ಹಾಗಾದರೆ ಯಿಾ ಷಡ್ಬೇದಂ ತೋರಿತಲ್ಲಾ|ತೋರಲಿಲ್ಲಾ|| ಯಾಕೆ| ಸದ್ರೂಪ ಪರಿಜ್ಞಾನಂ ನಿನಗಳವಡಲಿಲ್ಲಾ|| ಅದು ಹ್ಯಾಗೆ| ಯಾವಾವವಯದಲ್ಲಿ ಸದ್ರೂಪವಿಲ್ಲವದಂನು ತೆಗದು ನಮಗೆ ತೋರಿಸಿ ಕೊಡು| ಯಿಂತೆಂದ ಮಾತಂ ಕೇಳಿ ಬಹುಪ್ರಕಾರವಾಗಿ ಚಿಂತಿದರುಸತ್ತಿಂಗೆ ಸಂದ ಕಾಣದೆ ವುತ್ತರಕ್ಕವಕಾಶವಿಲ್ಲದ ಶಿಷ್ಯೋತ್ತಮನು ನೀವಿಂತು ಪ್ರಕಟಕರಿಸಿ ನಂನಂ ಕೃತಾರ್ಥಕಂ ಮಾಡಿದಿರಾಗಿ ನೀವೆ ಗೌರೀಪತಿಯೆಂದು

ತಿಳಿದೆನಲ್ಲದೆ ಜೀವಕೋಟಿಯೊಳೊಬ್ಬರೆಂದು ತಿಳಿದವನಲ್ಲ। ಯಿಂತೆಂದು ಸಾಷ್ಟಾಂಗ ನಮಸ್ಕಾರಂಗೆಯ್ದು ಸ್ವಾಮಿಯೂರ್ತಿಯ್ಯೂತದಲ್ಲಿ ತುಷ್ಟಿಯುಲವೆಂದು ಹರಕೆಯಂ ಕೊಟ್ಟು ಸುಖಾಸಿರ್ದನು।

ಕಂ॥ ಕರ್ಮಜ್ಞಾನ ವಿಚಾರವ
ನಿರ್ಮಲವಾಗುಸುರಿದೀ ವಚನದಾಶಯವಮಂ
ಮರ್ಮವನರಿದವರಿಗೆ ನಿಜ
ಧರ್ಮಂ ನೆಲೆಯಾಗಿ ನಿಲುಪುದೇಶ್ವರ್ಯಂ॥
ಯಿಾ ಅನುಭವ ರಸಾಯಣಭ್ಯಾಧ್ಯಾತ್ಮ ಶಾಸ್ತ್ರವಿವರ ಸಮಾಪ್ತಂ॥

**ವಿಷಯ :** ಅದ್ವೈತ ಸಿದ್ಧಾಂತ ಖಂಡನೆ.

**ವಿಶೇಷ :** ಇದೇ ಕಟ್ಟಿನಲ್ಲಿ ಮನೋವಿಜಯ ವ್ಯಾಖ್ಯಾನ, ಕರಣಹಸಿಗೆ ಗ್ರಂಥಗಳಿವೆ.

—ವೈಸಿಬಿ

## 38

| ಕೆ. ಎ. ೪೯೪/೨ | **ಅನಂತಕುಮಾರಿ ಚರಿತೆ** | ಸಾಂಗತ್ಯ |
|---|---|---|
| ೧೨" × ೯.೫" | ಶಾಂತಣವರ್ಣಿ | ? |
| ೭೩-೧೩೮ ಪುಟ | ೨೪ ಪಂಕ್ತಿ | ೧೨ ಅಕ್ಷರ |

**ಆದಿ :** ಜಿನರನಲ್ಲದೆ ಪಾಡೆ ಜಿನರನಲ್ಲದೆ ಬೇಡೆ
ಜಿನರನಲ್ಲದೆ ಕೊಂಡಾಡೆ
ಜಿನಮುನಿಗಳಿಗಲ್ಲದೆ ಕೈಯ ಮುಗಿಯೇನು
ಜಿನಧರ್ಮವೇ ಶರಣೆನಗೆ ೧

**ಅಂತ್ಯ :** ಅಂತಪ್ಪ ಶ್ರುತಮುನಿ ರಾಜನ ತನುಜನು
ಶಾಂತಣವರ್ಣಿ ರಚಿಸಿದಾ
ಶಾಂತಿಕರವು ಕೇಳುವ ಸಜ್ಜನರಿಗ
ನಂತಕುಮಾರಿಯು ಚರಿತೆ ೩೯೦

ಕಂತುಸ್ವರೂಪನೆ ಭಾರಂಗಿ ಪುರವರ
ಕಾಂತಪಾರ್ಶ್ವನು ಪರಿವೃಢನನು
ಈತನೆ ನಿಃಕಾಂಕ್ಷೆಯ ಕಥೆಯನು ಪೇಳ್ದನ
ನಂತಕುಮಾರಿ ಚರಿತೆಯು ೩೯೨
ಮಂಗಲಮಸ್ತು........ಶ್ರೀ ಶ್ರೀ

**ವಿಷಯ :** ಅನಂತಕುಮಾರಿಯ ಕಥೆ.

**ವಿಶೇಷ:** ಸಮಗ್ರ. ಈ ಗ್ರಂಥಜೊಡನೆ ಧನ್ಯಕುಮಾರ ಚರಿತ್ರೆ, ಶ್ರೀಪಾಲಚರಿತೆ, ತ್ರೈಲೋಕ್ಯ ಭೂಷಣ ಚರಿತ್ರೆ, ಮತ್ತು ಅಹಿಂಸಾ ಚರಿತೆ ಎಂಬ ಕೃತಿಗಳಿವೆ.

—ವೈಸಿಬಿ

39

| ಕೆ. ೧೦೧೫ | **ಅನಂತನಾಥ ಪುರಾಣಂ** | ಚಂಪು |
|---|---|---|
| ೧೩.೫″ × ೧.೬″ | ಜನ್ನ | ೧೨೦೯ |
| ೧ + ೧-೧೭೭ ಪತ್ರ | ೮ ಪಂಕ್ತಿ | ೬೨ ಅಕ್ಷರ |

**ಆದಿ:** ಶ್ರೀಮದನಂತನಾಥಾಯ ನಮಃ
ಶ್ರೀಮದನಂತ ಬೋಧದಿನನಂತ ವಿಲೋಕನದಿಂದನಂತ ಸೌ
ಖ್ಯಾಮೃತದಿಂದನಂತ ಬಲದಿಂ ತನಗಾದುದನಂತನಾಮಮು
ದ್ದಾಮದನಂತ ಕರ್ಮಜಯದಿಂ ದೊರೆವೆತ್ತುದು ಮತ್ತನಂತ ಜಿ
ನ್ನಾಮನೆನಿಪ್ಪನೀಗೆಮಗನಂತ ಜಿನೇಂದ್ರನನಂತ ಸೌಖ್ಯಮಂ

**ಅಂತ್ಯ:** ಶಕಸಂವತ್ಸರಮುಂದು ಸಾಸಿರದ ನೂಱಿಪ್ಪತ್ತೇಕಪ್ಪಲ್ವಿನಂ
ಕೃತಾರ್ದ್ದಂಬರೆ ಚೈತ್ರ ಶುದ್ಧ ದಶಮಿ ದಿವೇಜ್ಯನೊಳ್ ಪುಷ್ಯತಾ
ರಕದೊಳ್ಮಾಡಿಸಿದಂ ಪ್ರತಿಷ್ಠೆಯನನಂತ ಶ್ರೀಪುರಾಣಕ್ಕೆ ಕಂ
ಮೆ ಕುಲಾಂಬೋರುಹ ಭಾನುಜಂ ನಮರಸಂ ಸಾಹಿತ್ಯ ರತ್ನಾಕರಂ||

ನರಸಿಂಹಂ ಮಗದಾದಿರಾಯ ಲಯಕಾಭಾಳ ವಿಸ್ತಾರಕಂ
ಸ್ಥಿರರಾಜ್ಯೋದ್ಭವ ಲಕ್ಷ್ಮಿಯಿಂದೆ ಸುಖಮಿರ್ಕಾಚಂದ್ರತಾರಂ ಜಿನೇ
ಶ್ವರ ಧರ್ಮ್ಮಂ ತ್ರಿಜಗದ್ವಿನೇಯ ಖಳಕರ್ಮಧ್ವಾಂತಮಂ ತೂಳ್ದಿ ಭಾ
ಸ್ವರಬಿಂಬಂ ಶರದಿಂದುಬಿಂಬವೆನಿಸಲ್ಕಾಕಲ್ಪ ಕಲ್ಪಂಬರಂ

ಗದ್ಯ: ಇದು ಪರಮ ಜಿನಸಮಯ ವನವಸಂತ ಸಂತಾನಾರಾಮ ರಾಮಚಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣಕಿರಣ ಪ್ರಸಂನಾಂತಃಕರಣ ಕವಿ ಚಕ್ರವರ್ತಿ ಬಿರುದ ಕವಿಭಾಳಲೋಚನ ಜನಾರ್ದನದೇವ ವಿರಚಿತಮಪ್ಪ ನಂತನಾಥ ಪುರಾಣದೊಳು ಪರಿನಿರ್ವಾಣ ಕಲ್ಯಾಣವರ್ಣನಂ ಚತುರ್ದಶಾ ಸ್ವಾಸಂ || ೧೪ ಶ್ರೀ ಅನಂತನಾಥ ಪುರಾಣಂ ಸಮಾಪ್ತಂ XXX ಶಕಸಂವ ತ್ಸರದ೧೬೩೮ನೆಯ ಹೇವಳಂಬಿ ಸಂವತ್ಸರದ ಆಷಾಡ ಶು ೧೦ ಸ್ಥಿರವಾರ ಪಡದಣದ ದೇವಚಂದ್ರೈಯ್ಯನವರ ಮಗ ವಿಜೈಯ್ಯನು ನಗರ್ಲೆ ದೇವರ ಸೈಯನವರ ಮಗ ಬೊಮ್ಮರಸೈಯ್ಯನವರಿಗೆ ಅನಂಥನಾಥ ಪುರಾಣವನು ಬರೆದನುXXX ಶ್ರೀಮದ್ಭಟ್ಟಾಕಲಂಕ ಮುನೀಂದ್ರಯೆ ನಮಃ ಶ್ರೀ ಶ್ರೀ ಶ್ರೀ.

**ವಿಷಯ:** ಅನಂತನಾಥ ತೀರ್ಥಂಕರನ ಕಥೆ.

**ವಿಶೇಷ :** ಪತ್ರಸಂಖ್ಯೆಯಿಲ್ಲದ ಮೊದಲ ಒಂದು ಪತ್ರದಲ್ಲಿ ವಿಷಯಸೂಚಿಯಿದೆ. ಅಕ್ಷರ ಸ್ಫುಟವಾಗಿ ವಿರಳವಾಗಿವೆ ಪ್ರತಿ ಸಮಗ್ರವಾಗಿದ್ದು ಉತ್ತಮಸ್ಥಿತಿಯಲ್ಲಿದೆ.

—ಬಿಎಸ್‌ಎಸ್

## 40

ಕೆ. ೧೦೧೯ **ಅನಂತನಾಥ ಪುರಾಣಂ** ಚಂಪು

೨೦″ × ೨″ ಜನ್ನ ೧೨೦೯

೧-೮೦ ಪತ್ರ ೧೧ ಪಂಕ್ತಿ ೮೨ ಅಕ್ಷರ

**ಆದಿ :** ಶುಭಮಸ್ತು ನಿರ್ವಿಘ್ನಮಸ್ತು
ಶ್ರೀಮದನಂತಬೋಧ.... ವಿಲೋಕನದಿಂದನಂತ ಸೌ
ಖ್ಯಾಪ್ತತ ........................................ ....
.... ವನಂತನಾಮ.................................... ....
.................................ಅನಂತ ಸೌಖ್ಯಮಂ ॥೧॥

**ಅಂತ್ಯ :** ............ರ ರಾಜ್ಯಮಧಿನಾಥಂ ತಂದೆ ಸೋಮಪ್ರಭಂ
ಗಳವಟ್ಟಿತ್ತು ವಿದಗ್ಧರಾಜ್ಯಮಧಿರಾಜ್ಯ ಶ್ರೀಯನಾಳ್ದಂ ಜಗ
ಜ್ಜ್ವಳಿವಾರ್ಕಂ ಕವಿತಾನಟೀ ನಟನ ಶೈಲೂಷಂ ಜಯಶ್ರೀವಧೂ
ಕುಳಗೇಹಂ ...............................ಸಾಹಿತ್ಯರತ್ನಾಕರಾ॥

ಗದ್ಯ : ಇದು ಪರಮ ಜಿನಸಮಯವನ ವಸಂತ ಸಂತಾನಾರಾಮ ರಾಮಚಂದ್ರ ಮುನೀಂದ್ರ ಪ್ರಸಾದಾಸಾದಿತ ರತ್ನತ್ರಯಾಭರಣ........ ಕರಣ ಕವಿಚಕ್ರ ವರ್ತಿ ಬಿರುದಕವಿ ಭಾಳಳೋಚನ ಜನಾರ್ಧನ ದೈವವಿರಚಿತಮಪ್ಪನಂತ ನಾಥಪುರಾಣದೊಳ್ ಸುಪ್ರಭ ಪುರುಷೋತ್ತಮಾವತಾರ ವರ್ಣನಂ ದ್ವಾದಶಾಸ್ವಾ............ .... ಶ್ರೀ ಶ್ರೀ ಶ್ರೀ।

**ವಿಷಯ :** ಅನಂತನಾಥ ಚರಿತೆ.

**ವಿಶೇಷ :** ಪ್ರಾರಂಭದ ಓಲೆ ತ್ರುಟಿತವಾಗಿದೆ, ಜೀರ್ಣವಾಗಿದೆ. ೧೨ ಆಶ್ವಾಸಮಾತ್ರ ವಿದೆ.

—ಎಂಸಿಪಿ

## 41

ಕೆ. ೧೨೦೨ **ಅನಾದಿ ವೀರಶೈವ ಸಂಗ್ರಹ** ಶ್ಲೋಕ, ಟೀಕೆ

೧೧.೧″ × ೧.೮″ ಸಂಪಾದನಾ ಸಿದ್ಧವೀರಣ್ಣ ?

೧-೧೨೫ ಪತ್ರ ೯ ಪಂಕ್ತಿ ೫೮ ಅಕ್ಷರ

ಆದಿ: ಶ್ರೀಸದ್ಗುರು ಮರಿಸಿದ್ಧಲಿಂಗೇಶ್ವರಾಯ ನಮಃ॥ ಅನಾದಿ ವೀರಶೈವ ಸಂಗ್ರಹದಲ್ಲಿಯ ಆದ್ಯನಿತ ಸಮ್ಮತ ಶ್ಲೋಕಂಗಳು॥ ಬಸವೇಶ್ವರನ ಸ್ತವವು

ಗ್ರಂಥ॥ ಶ್ರೀ ವೃಷೇಂದ್ರಾಯನಾದಿ ಭಕ್ತಸ್ವರೂಪಿಣೆ
ಶಿವಾಷ್ಟಾವರಣಾಂಗಾಯ ಷಟ್ಸ್ಥಲಾಧ್ವ ಪ್ರವೃರ್ತ್ತಿನೆ

ಟೀಕು॥ ಅನಾದಿ ಭಕ್ತಸ್ವರೂಪಿಣೆ। ಅನಾದಿ ಭಕ್ತಾಕೃತಿಯನ್ನುಳ್ಳ। ಶಿವಾಷ್ಟವರಣಾಂಗಾಯ। ಶಿವಯುಕ್ತವಾದ ವಿಭೂತ್ಯಾದ್ಯಷ್ಟಾವರಣಂಗಳೆ ಅವಯವಂಗಳಾಗುಳ್ಳ ಷಟ್ಸ್ಥಲಾದ ಪ್ರವೃರ್ತ್ತಿನೆ। ಭಕ್ತಾದಿ ಷಟ್ಸ್ಥಲ ಮಾರ್ಗದಲ್ಲಿ ಪ್ರವೃತ್ತಿಯುಳ್ಳ। ಶ್ರೀವೃಷೇಂದ್ರಾಯ। ಶ್ರೀ ಐಶ್ವರ್ಯೋಪಲಕ್ಷಿತನಾದ। ವೃಷೇಂದ್ರಾಯ। ವೃಷಭೇಶ್ವರಂಗೋಸ್ಕರ। ಓಂ ನಮಃ ಪ್ರಣವ ಸಹಿತವಾದ ನಮಸ್ಕಾರವು ॥೧॥

ಅಂತ್ಯ: ಈ ಪ್ರಕಾರದಿಂದ। ದೀಕ್ಷಾಗುರುಸ್ಥಲ। ಶಿಕ್ಷಾಗುರುಸ್ಥಲ। ಜ್ಞಾನಗುರುಸ್ಥಲ। ಕ್ರಿಯೆಯ ಲಿಂಗಸ್ಥಲ। ಭಾವಲಿಂಗಸ್ಥಲ। ಜ್ಞಾನಲಿಂಗಸ್ಥಲ। ಸ್ವಯಸ್ಥಲ। ಚರಸ್ಥಲ। ಪರಸ್ಥಲ। ಕ್ರಿಯಾಗಮಸ್ಥಲ। ಭಾವಾಗಮಸ್ಥಲ। ಜ್ಞಾನಾಗಮಸ್ಥಲ। ಭಾಂಡ ಸ್ಥಲ। ಭಾಜನ ಸ್ಥಲ। ಅಂಗಾಲೇಪನ ಸ್ಥಲ। ಸ್ವಪರಾಜ್ಞ ಸ್ಥಲ। ಭಾವಾ ಭಾವನಾಶ ಸ್ಥಲ। ಜ್ಞಾನಶೂನ್ಯ ಸ್ಥಲಂಗಳೆಂಬ ಲಿಂಗ ಸ್ಥಲಂಗಳು ೩೭ ಯಥಾಕ್ರಮದಿಂದ ಹೇಳಲ್ಪಟ್ಟವು। ಈ ಪ್ರಕಾರದಿಂದ। ಜೀವನ್ಮುಕ್ತನಂ ಪೇಳ್ದು। ಆ ಜೀವನ್ಮುಕ್ತನು ಶಿವಾತ್ಮರುಗಳನು ಐಕ್ಯವನು ಮಾಡುವ ಯೋಗವನು ಹೇಳುತ್ತಿದ್ದಾನು॥ ಶ್ರೀ

**ವಿಷಯ:** ವೀರಶೈವ ತತ್ತ್ವ.

**ವಿಶೇಷ:** ಸಮಗ್ರ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

## 42

| ಕೆ. ೧೨೩೦ | **ಅನಾದಿ ವೀರಶೈವಸಂಗ್ರಹ** | ಶ್ಲೋಕ |
|---|---|---|
| ೧೪" × ೨.೧" | ? | ? |
| ೧-೧೦೪ ಪತ್ರ | ೧೦ ಪಂಕ್ತಿ | ೬೦ ಅಕ್ಷರ |

ಆದಿ: ....ಂಗ್ರಹದಲ್ಲಿಯ ಆದ್ಯಗೀತ ಸಂಮತ ಶ್ಲೋಕಂಗಳು॥ ಬಸವೇಶ್ವರನಸ್ತವವು ॥ಗ್ರಂಥ॥
ಓಂ। ನಮಃ ಶ್ರೀ ವೃಷಭೇಂದ್ರಾ....
... ....................ಧ್ವ ಪ್ರವರ್ತಿನೇ॥

ಟೀಕು॥ ಅನಾದಿ ಭಕ್ತಸ್ವರೂಪಿಣೆ। ಅನಾದಿ ಭಕ್ತಾ ಕೃತಿಯನುಳ್ಳ। ಶಿವಾಷ್ಟಾ

ವ

ವರಣಂಗಾ.......ಂಗಳೇ ಅವಯುವಂಗಳಾಗುಳ್ಳ| ಪಟ್ಸ್ಥಲಾಧ್ವಪ್ರವರ್ತಿನೆ ಭಕ್ತಾದಿ ಷಟ್ಸ್ಥಲ ಮಾರ್ಗದಲ್ಲಿ ಪ್ರವೃತ್ತಿಯುಳ್ಳಂಥಾ| ಶ್ರೀ.......ಕ್ಷಿತ ನಾದ ವೃಷಭೇಂದ್ರಾಯ| ವೃಷಭೇಂದ್ರಂಗೋಸ್ಕ| ನಮಃ| ನಮಸ್ಕಾರವು ೧
(ತ್ರುಟಿತವಾದ ೧ನೆಯ ಪತ್ರದಿಂದ)

....ಆ ವುನೂಸಹಿತನಾದ ಸೋಮೇಶ್ವರನನು| ಸಮುಪಾಸ್ಕೆ| ಉಪಾ ವಸ್ಥೆಯ ಮಾಡುತ್ತಿದ್ದೆವು ||೧೦||

ಶಿವೋ ಲಿಂಗಮು ವ್ಯೈವಾಂಗ ಮನಯಾ ಸಹಿತನ್ವಯಂ ...

ಸೋಮ: ಸಂಮುಂದಯಿತ್ಯೇವಂ ಪದತ್ರಯ ಮುಪಾಸ್ಮಹೇ|| ಟೀ|| ಶಿವ| ಶಿವನು| ಲಿಂಗಂ| ಲಿಂಗವು| ವುವ್ಯೈವ| ವುಮೆಯು| ಅಂಗಂ ಅಂಗವು| ಅಯಂ| ಯಿಾ ಶಿವನು (೩ನೆಯ ಪತ್ರದಿಂದ)

**ಅಂತ್ಯ:** .......ಅಭಿದೀಯ್ಯತೇ| ಹೇಳಲ್ಪಟ್ಟನು|| ೮೯ || ೫೮ಲ ಐಕ್ಯಸ್ಥಲ|| ಉತ್ತರ ತಾಪನೀಯೋಪನಿಷತ್ತಿನಲ್ಲಿ|| ಅಥಲಿಂಗಾ.......ತ್ಯತೇಜಸೇ| ಶರೀರತ್ರಯಃ| ಸ್ವಾಖ್ಯತ....ಧಿಷ್ಠಾನ ಮಾತ್ಮಾನಂ ಸಂಜ್ವಾಲ್ಯತತ್ತೇಜ ಆತ್ಮಾ ಚೈತನ್ಯರೂಪಂ ಬಲವನವಘ್ಯ ಭ್ಯಗುಣೈರೈಕ್ಯಂ ಸಂಪಾದ್ಯ....... ಮಾತ್ರಾಭಿಃ| ತೇಜೋಮಯವಾದ ಪಂಚತನ್ಮಾತ್ರೆಗಳಿಂದೆ| ವೋತಾಃ| ಅನುಸ್ಯೂತಗ| ಪ್ರಾಪ್ತಿ ಸಮಯದಲ್ಲಿ| ವಿಗತಾ| ಹೋಗಲ್ಪಟ್ಟಂಥಾ| ಆ ಶಯಾಃ||

**ವಿಷಯ:** ವೀರಶೈವ ತತ್ತ್ವ.

**ವಿಶೇಷ:** ಆದಿ, ಮಧ್ಯ, ಅಂತ್ಯಗಳಲ್ಲಿ ಗರಿಗಳು ಮುರಿದು ಭಾಗಗಳು ಲುಪ್ತವಾಗಿವೆ. ತುಂಬಾ ತ್ರುಟಿತ.

—ಕೆಆರ್ಎಸ್

## 43

| ಕೆ. ೧೬೫೧ | **ಅನಾದಿ ವೀರಶೈವ ಸಂಗ್ರಹ** | ಶ್ಲೋಕ, ಟೀಕು |
|---|---|---|
| ೧೦.೨" × ೧.೫" | ಸಂಪಾದನೆಯ ಸಿದ್ಧವೀರ | ? |
| ೧-೨೯೮ ಪತ್ರ | ೧೫ ಪಂಕ್ತಿ | ೫೬ ಅಕ್ಷರ |

**ಆದಿ:** ಸ್ರೀ ಗುರುನಿರಂಜನ ಬಸವಲಿಂಗಾಯ ನಮಃ|| ಅನಾದಿ ವೀರಶೈವ ಸಂಗ್ರಹ|| ಬಸವೇಶ್ವರನಸ್ತವು

ಗ್ರಂಥ|| ಓಂ ನಮಶ್ರೀ ವೃಷೇಂದ್ರಾಯಾನಾದಿ ಭಕ್ತ ಸ್ವರೂಪಿಣೆ| ಶಿವಾಷ್ಟಾವರ ಣಾಂಗಾಯ .......ತ್ತ ಸ್ವರೂಪಿಣೆ|

ಅನಾದಿ ಭಕ್ತಾಕೃತಿಯನ್ನುಳ್ಳ| ಶಿವಾಷ್ಟಾವರಣಾಂಗಾಯ ಶಿವಯುಕ್ತ ವಾದ ವಿಭೂತ್ಯಾದ್ಯಷ್ಟಾವರಣಂಗಳೆ ಅವಯುವಂಗಳಾಗುಳ್ಳ ಪಟ್ಸ್ಥಲಾಧ್ವ

ಪ್ರವರ್ತಿಸಿ। ಭಕ್ತಾಷಟ್ಸ್ಥಲ ಮಾರ್ಗದಲ್ಲಿ ಪ್ರವೃತ್ತಿಯುಳ್ಳ ಶ್ರೀ ವೃಷೇಂದ್ರಾಯ। ಶ್ರೀ ಐಶ್ವರ್ಯೋಪಲಕ್ಷಿತನಾದ। ವೃಷೇಂದ್ರಾಯ। ವೃಷಭೇಶ್ವರಂಗೋಸ್ಕರ। ಓಂ ನಮಃ। ಪ್ರಣವಸಹಿತವಾದ ನಮಸ್ಕಾರವೂ ||೧||

**ಅಂತ್ಯ :** ಇತಿ ಶ್ರೀಮದ್ವೀರ ಮಾಹೇಶ್ವರಾಚಾರ್ಯವರ್ಯ ಶ್ರೀವೀರಶೈವ ಷಟ್ಸ್ಥಲಮಾರ್ಗ್ಗ ಸ್ಥಾಪನಾಗ್ರಗಣ್ಯ ಶ್ರೀ ಸಂಪಾದನ ಸಿದ್ಧವೀರಣಾಖ್ಯ ಶಿವಯೋಗೀಂದ್ರ ವಿರಚಿತೆ ಅನಾದಿ ವೀರಶೈವ ಸಾರಸಂಗ್ರಹೆ ಐಕ್ಯಸ್ಥಲಂ ನಾಮ ಸಪ್ತವಿಂಶತಿ ಪ್ರಕರಣಂ ಸಮಾಪ್ತಂ|| ಪೀಠಿಕಾಸೂತ್ರ ೩೬|| ಅನಾದಿ ಭಕ್ತಸ್ಥಲ ೪೯|| ಅನಾದಿ ಜಂಗಮಸ್ಥಲ ೪೮|| ಶೂನ್ಯಲಿಂಗಸ್ಥಲ ೧೪|| ನಿಷ್ಕಳಲಿಂಗಸ್ಥಲ ೨೯|| ಅಂತು ವೃತ್ತಗ್ರಂಥ ಶಪ್ರತಿಗಳ ಸಮೂಹಕ್ಕಂ ೩೦೮|| ಅನಾದಿ ವೀರಶೈವ ಸಂಗ್ರಹ ಪರಿಸಮಾಪ್ತಂ ಮಂಗಳಮಹಾಶ್ರೀ ಇತಿ ಅನಾದಿ ವೀರಶೈವಸಾರ ಸಂಗ್ರಹೆ ಲೇಖಕ ಪಾಠಕಯೊಬದ್ಭದ್ರಂ ಬೂಯಾತ್ ಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರವಾಗಿದೆ. ಪ್ರತಿ ಸಾಧಾರಣ ಉತ್ತಮಸ್ಥಿತಿಯಲ್ಲಿದೆ.

—ವೈಸಿಬಿ

## 44

| ಕೆ. ೧೦೬೭ | **ಅನಾದಿ ವೀರಶೈವಸಾರಸಂಗ್ರಹ** | ಶ್ಲೋಕ, ಗದ್ಯ |
|---|---|---|
| ೧೧.೨" × ೨.೩" | ಸಂಪಾದನೆಯ ಸಿದ್ಧವೀರಾಚಾರ್ಯ | ? |
| ೧-೨೫೯ ಪತ್ರ | ೧೬ ಪಂಕ್ತಿ | ೬೨ ಅಕ್ಷರ |

**ಆದಿ :** . ವೃತ್ತ|| ಜಯತು ಬಸವರಾಜಸ್ಥೌಲ್ಯ ನೈರ್ಮಲ್ಯ ಪೂಜಃ
ಪ್ರಮಥಗಣಸಮಾಜಃ ಪ್ರೋಲ್ಲಸದ್ಭಕ್ತಿತೈಜಃ
ಪ್ರಹೃತ ವಿಸಮದಿರ್ತಿಃ ಸ್ಫಾಯದಾಮ್ನಾಯ ಪೂರ್ತಿಃ
ಸ್ಥಿರದಿಗವಿತತಕೀರ್ತಿಃ ಶ್ರೀ ವೃಷಾಧೀಶಮೂರ್ತಿಃ

**ಟೀಕು :** ಸ್ಥೌಲ್ಯನೈರ್ಮಲ್ಯ।ಪೂಜಃ। ಸ್ಥೌಲ್ಯನೈರ್ಮಲ್ಯ। ಬಾಹ್ಯಾಭ್ಯಂತರಸಂಬಂಧವಾದಪೂಜಃ। ಶಿವಪೂಜೆಯನುಳ್ಳಾತನಾದ। ಪ್ರಮಥಗಣ। ವೀರಕವೀರ ಭದ್ರಾದಿಪ್ರಮಥಗಣಂಗಳ। ಸಮಾಜಃ। ಸಮೂಹವನುಳ್ಳಾತನಾದ। ಪ್ರೋಲ್ಲಸತ್। ಮಿಗಿಲಾಗಿ ಸ್ಫುರಿಸುತ್ತಿರ್ದ....ಶ್ರೀ ವೃಷಾಧೀಶ। ಶ್ರೀ ವೃಷಭೇಶ್ವರನಮೂರ್ತಿಃ। ಮೂರ್ತಿಯಾದ। ಬಸವರಾಜಃ। ಬಸವೇಶ್ವರನು। ಜಯತು। ಸರ್ವೋತ್ಕೃಷ್ಟನಾಗಲಿ|| ೨

**ಅಂತ್ಯ :** ಇತಿ ಶ್ರೀಮದ್ವೀರಮಾಹೇಶ್ವರಾಚಾರ್ಯವರ್ಯ ಶ್ರೀವೀರಶೈವ ಷಟ್ಸ್ಥಲಮಾರ್ಗ ಸ್ಥಾಪನಾಗ್ರಗಣ್ಯ ಶ್ರೀಸಂಪಾದನ ಸಿದ್ಧವೀರಣಾಖ್ಯ ಶಿವಯೋಗೀಂದ್ರ

ವಿರಚಿತೆ ಅನಾದಿ ವೀರಶೈವಸಾರ ಸಂಗ್ರಹೆ ಐಕ್ಯಸ್ಥಲಂ ನಾಮಸಪ್ತವಿಂಶತಿ ಪ್ರಕರಣಂ ಸಮಾಪ್ತಂ|| ಗೃಹೆಯಸ್ಯೆದಮಾಖ್ಯಾನ ಪುಸ್ತಕಂ ತಿಷ್ಠತಿಧೃವಂ|| ತಸ್ಯೈಶ್ವರ್ಯ ಸಮೃದ್ಧಿಸ್ಯಾನ್ನಾಗ್ನಿ ಚೋರ ಭಯಂಭವೇತ್||
ಅಂತು ಸಪ್ತವಿಶಂತಿ ಪ್ರಕರಣಕ್ಕಂ ೩೭೯೧ಕ್ಕಂ ಮಂಗಳಮಹಾ ಶ್ರೀ ಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಮೊದಲಿನ ೨-೩ ಗರಿಗಳ ಮೇಲುಭಾಗ ತ್ರುಟಿತವಾಗಿದೆ. ಗ್ರಂಥದ ಸ್ಥಿತಿ ಚೆನ್ನಾಗಿದೆ.

—ಜಿಜಿಎಂ

## 45

ಕೆ. ೧೧೫೮/೪ — **ಅನಾಮಯಸ್ತೋತ್ರ (ಸಟೀಕು)** — ಶ್ಲೋಕ-ಟೀಕು

೧೬" × ೨" — ? — ?

೪೪-೫೫ ಪತ್ರ — ೮ ಪಂಕ್ತಿ — ೬೫ ಅಕ್ಷರ

**ಆದಿ :** ನಿರ್ವಿಘ್ನಮಸ್ತು. ಶ್ರೀಗುರು ಬಸವಲಿಂಗಾಯನಮಃ ಅನಾಮಯ ಸ್ತೋತ್ರದ ಟೀಕು.

ಕಂದ|| ಕಾತ್ಯಾಯಿನಿ ಮುಖಾಂಭೋಜ ಸಾರಭಾಸ್ವಾದ ಷಟ್ಪದಂ
ಕಾರ್ತಸ್ವರಾಗಸಿಲಯಂ ನಮಾಮಿ ಶಿವಮವ್ಯಯಂ

ವಾಙ್ಮಾನ ಸಗೋಚರನಾದ ಪರಮಾತ್ಮನನು ಹೇಂಗೆ ಸ್ತೋತ್ರವ ಮಾಡಿದ ವೆಂಬ ಶಂಕೆಯನು ಪರಿಹರಿಸುತ್ತಲೂ ಸ್ತೋತ್ರರಂಭವನು ಮಾಡುತಿರ್ದ್ದಪಂ

**ಅಂತ್ಯ :** ಆಃ- ಅನಾಮಯ ಸ್ತೋತ್ರವನು. ಕ್ರುತ್ವಾಯುದಿ-ಯತ್ನಲಾನು ಪಠಿಸುವೆನು. ಸಃ ಆತನು. ಸುಭಗಃ- ಸೌಭಾಗ್ಯವನುಳ್ಳಂಥ ಶಾಶ್ವತವಹಂಥ ಪುಣ್ಯಂ-ಪುಣ್ಯವನು. ಆಪ್ನೋತಿ. ಯೆಯ್ದುವನು. ತೇನಸ್ತೋತ್ರ್ಯ ಪಾಠೇನ-ಆ ಪುಣ್ಯಸ್ತೋತ್ರ ಪಾಠದಿಂದ ವ್ಯಾಧಿಂ- ವ್ಯಾಧಿಯನು ಹರ-ಪರಿಹರಿಸುವನು. ಸತ್ಯಂಹಿ ಅನಾಮಯ ಸ್ತೋತ್ರದ ಟೀಕು ಪರಿಸಮಾಪ್ತ ಮಂಗಳಮಹಾ ಶ್ರೀ ಶ್ರೀ ಶ್ರೀ

**ವಿಷಯ :** ಅನಾಮಯಸ್ತೋತ್ರಕ್ಕೆ ಕನ್ನಡ ಟೀಕು.

**ವಿಶೇಷ :** ಈ ಕಟ್ಟಿನಲ್ಲಿ ಮಹಿಮ್ನ, ಹಲಾಯುಧ ಸ್ತೋತ್ರ ಟೀಕು ಮೊದಲಾದ ಇತರ ೪ ಕೃತಿಗಳಿವೆ.

—ಹಕರಾ

## 46

ಕೆ. ೧೮೫೬/೮ **ಅನಾಮಯಸ್ತೋತ್ರ (ಸಟೀಕು)** ಶ್ಲೋಕ, ಗದ್ಯ
೮.೮" × ೨" ? ?
೬೯-೮೨ ಪತ್ರ ೧೦ ಪಂಕ್ತಿ ೪೫ ಅಕ್ಷರ

**ಆದಿ :** ಶ್ರೀಗುರು ಸಪ್ಪೇಶ್ವರಾಯ ನಮಃ। ಅನಾಮಯಸ್ತೋತ್ರ ||ಟೀಕು||
ತೃಷ್ಣಾ ತಂತ್ರೀ ಮನಸಿ ತಮಸಾ ದುರ್ದಿನೇ ಬಂಧವರ್ತಿ ಮಾದೃಗ್ಜಂತುಃ ಕಥಮಧಿಕರೋತ್ಯೈಶ್ವರಂ ಜ್ಯೋತಿರಗ್ರ್ಯಂ ವಾಚಸ್ಫೀತಾ ಭಗವತಿ ಹರೆ ಸನ್ನಿ ಕೃಷ್ಣಾತ್ಮರೂಪಾ। ಸುತ್ಯಾತ್ಮಾನಂ ಸ್ವಯಮಿವ ಮುಖಾದಸ್ಯ ಮೋನಿಷ್ಕೃತಂತಿ ಟೀಕು|| ಯಿಾಶ|| ಎಲೆ ಶಿವನೆ। XXX ಹೊರಡು ತಿದ್ದಾವು ||೧||

**ಅಂತ್ಯ :** ಸಃ। ಆತನು। ಸುಭಗಂ। ಸೌಭಾಗ್ಯವನುಳ್ಳಂಥಾ। ನಿತ್ಯಂ। ಶಾಸ್ವತ ನ ಹಂತಾಗಿ। ಪುಣ್ಯಂ। ಪುಣ್ಯಾವನು। XXXಹರ। ಪರಿಹರಿಸುವದು। ಸತ್ಯಂಹಿ। ನಿಜವಲಾ ||೩೩|| ಅನಾಮಯಸ್ತೋತ್ರದ ಟೀಕು। ಸಂಪೂರ್ಣ ಮಂಗಲ ಮಹಾಶ್ರೀ

**ವಿಷಯ :** ಶಿವನ ಸ್ತುತಿ.

**ವಿಶೇಷ :** ಕೃತಿಸಮಗ್ರ. ಪ್ರತಿ ಸುದೃಢ. ಇದರೊಂದಿಗೆ ಮಲಯರಾಜ ಸ್ತೋತ್ರದ ಟೀಕು ಮುಂತಾದ ಕೃತಿಗಳಿವೆ.

—ಎಂಪಿಎಂ

## 47

ಕೆ. ೧೫೦೮/೨ **ಅನುಪ್ರೇಕ್ಷೆ (ಸಟೀಕು)** ಶ್ಲೋಕ, ಟೀಕು
೪.೨" × ೧.೭" ಬಾಹುಬಲಿ ಸೈದ್ಧಾಂತ ಬ್ರತಿ ?
೩೩-೯೧ ಪತ್ರ ೯ ಪಂಕ್ತಿ ೧೪ ಅಕ್ಷರ

**ಆದಿ :** ಶ್ರೀ ಪಂಚಗುರುಭ್ಯೋನಮಃ
ಧ್ಯಾನದಹನ ಪ್ರದಗ್ಧ।
ಜ್ಞಾನಾವರಣಾದಿಸಿದ್ಧ ಮುನಿಜನಮಂ
ಭೂನುತವಮಂ ಬಂದಿಸಿ ಪೂ।
ರ್ಬಾನುಪ್ರೇಕ್ಷೆಗೆ ಸ್ವವೃತ್ತಿಯಂ ವಿರಚಿಸುವೆಂ
ಶ್ರೀ|| ಣಮಿಯಊಣಸಂಬಸಿಂಧೆ ರೂಣಾಂತಮುಖ ಎದದಿಹಸಂಸಾರೆ ದಸದ ಸದೊಂದೋಯಜೆಣೆದಸದೊ ಅಣುಸೆಹೆಣಂಬೊಂದಂ|| ಝೂಣಾಂತಮು। ಉತ್ತಮ ಧ್ಯಾನದಿಂದಂ! ಖಎದ। ಕಿಡಿಸಲ್ಪಟ್ಟ। ದಿಹ। ಹಿರಿದಪ್ಪ। ಸಂಸಾರಿ। ಸಂಸಾರಮನುಳ್ಳ। ಸಂವಸಿಂಧೆ। ಯಲ್ಲಾಸಿದ್ಧ ಪರಮೇಷ್ಠಿಗಳಂ।

ದಸದಸದೊಂದೊಯು। ಇಪ್ಪತ್ತನಾಲ್ವರು। ಜಿಣೆ। ಜಿಣರ್ಗಂ। ಣಮಿಂ
ಘಣಾಯು। ಪೊಡವಟ್ಟು। ದಸದೊ ಅಣುಪೆಹಣಂ। ದ್ವಾದಶಾನು
ಪ್ರೇಕ್ಷೆಯುಂ। ಬೊಂದಂ ಪೇಳ್ವೆಂ॥ ೧

**ಅಂತ್ಯ :** ಜಿತಮಳ ಜಿನಮುಖಜನಿತ
ಶ್ರುತವಿದಿತ ಸುತತ್ವ ಬಾಹುಬಲಿ ಸೈದ್ಧಾಂತ
ಬ್ರತಿ ಪೇಳ್ದ ನಾಚಿರಾಜಂ
ಗತುಳಾನುಪ್ರೇಕ್ಷೆಯೆಸೆವ ವೃತ್ತಿತ್ರಯುಮಂ
ಇತಿ ದ್ವಾದಶಾನುಪ್ರೇಕ್ಷಾ ಸಮಾಪ್ತಃ

**ವಿಷಯ :** ಜೈನಸಿದ್ಧಾಂತದ ಹನ್ನೆರಡು ಅನುಪ್ರೇಕ್ಷೆಗಳ ವಿವರ.

**ವಿಶೇಷ :** ಸಮಗ್ರ, ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಸಮಂತಭದ್ರರ ರತ್ನ ಕರಂಡಕ ಮೊದಲಾದ ಇತರ ೯ ಸಂಸ್ಕೃತ ಕೃತಿಗಳಿವೆ.

—ಜಿಜಿಎಂ

## 48

| ಕೆ. ೧೮೨೧ | **ಅನುಭವ ಮುಕುರ** | ತ್ರಿಪದಿ |
|---|---|---|
| ೧೧" × ೨.೩" | ಪರಂಜ್ಯೋತಿಯತಿ | ಸು. ೧೪೫೦ |
| ೧-೪೪ ಪತ್ರ | ೧೦ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀ ಶಂಭವೇ ನಮಃ॥ ಪರಮಾನುಭವಬೋಧೆ। ರಾಗನಾದರಾಮ॥

ಸೂತ್ರ॥ ಶ್ರೀಗುರು ಶಂಭುಲಿಂಗದ ಪಾದ ಪಂಕಜ
ವೀಗೆಂನಮತಿಗೆ ಮಂಗಲವನೂ॥

ಪದ॥ ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ
ಧಾಮಂಗೆ ಸತ್ಯಚಿದ್ರೂಪಂಗೆ
ಕಾಮಿತಜನ ಕಲ್ಪ ಭೂಜಂಗೆ ಶಂಭುವಿಂ
ಗಾಮೋದದಿಂದ ವಂದಿಸುವೆನೂ ॥೧॥

**ಅಂತ್ಯ :** ಗದ್ಯ। ಇತಿ ಶ್ರೀ ಕೈವಲ್ಯಾನ್ವಯ ಪ್ರವರ್ತಕ ಪರಮಹಂಸ ಪರಿವ್ರಾಜ
ಕಾಚಾರ್ಯವರ್ಯ ಸಕಲ ಯೋಗೀಂದ್ರವೃಂದ ವಂದ್ಯ ಪಾದಾರವಿಂದ್ಯಾ
ಶ್ರಮ ಶ್ರೀಪಾದ ಕಮಳಿನಿರಾಜಹಂಸ ಶ್ರೀ ಪರಂಜ್ಯೋತಿಯತಿ ವಿರಚಿತ
ಮಾದನುಭವಮುಕುರಃ॥ XXX ನಿಜಗುಣ ಶಿವಯೋಗಿನಾ
ವಿರಚಿತಮಪ್ಪ ಸ್ವರೂಪಸಿದ್ಧಿ। ಯುಳ್ಳಾತಂಗೆ ವರಮುಕ್ತಿ ವನಿತಾ ವಶೀಕರಣ
ಸಂಜನಿತ ಸಂಸುತ ಪರಾನಂದಪದ ಪ್ರಾಪ್ತಿಯಾಗಲೆಂಬಾಶೀರ್ವಾದ ಲಕ್ಷಣ
ಮಂಗಲಾಚರಣದಿಂದಿದು ಪರಿಸಮಾಪ್ತಿಯುಕ್ಕುಂ॥ ಇತಿ ಸರ್ವಮಂಗಲಂ॥
ಶ್ರೀ ಶ್ರೀ ಶ್ರೀ॥

**ವಿಷಯ :** ಅದ್ವೈತ ವಿಚಾರ.

**ವಿಶೇಷ :** ಪ್ರತಿ ಚೆನ್ನಾಗಿದೆ. ಸಮಗ್ರ ಕೃತಿ. ಬರವಣಿಗೆ ಸುಂದರವಾಗಿದೆ.

—ಎಂಪಿಎಂ

## 49

ಕೆ. ೧೦೦೫/೧ | **ಅನುಭವ ಮುಕುರ** | ತ್ರಿಪದಿ

೧೩" × ೧.೨" | ಪರಂಜ್ಯೋತಿಯತಿ | ಸು. ೧೪೫೦

೧-೪೮ ಪತ್ರ | ೮ ಪಂಕ್ತಿ | ೬೦ ಅಕ್ಷರ

**ಆದಿ :** ಶ್ರೀಗುರುಭ್ಯೋನಮಃ ಶ್ರೀವಿದ್ಯಾಶ್ರಮಾಯ ನಮಃ ಶ್ರೀಪರಂಜೋಯೆತಯೆ ನಮಃ ಅನುಭವಮುಕುರ ಪ್ರಾರಂಭಕ್ಕೆ ಶುಭಮಸ್ತು ಆರೋಗ್ಯಮಸ್ತು ಅಯುಶ್ವರ್ಯಮಸ್ತು ತ್ರಿವಿಧಿ ||ಸೂತ್ರ||
ಗುರುದೈವಯೆನಿಸಿರ್ದ ಪರಮ ವಿದ್ಯಾಶ್ರಮನ
ಚರಣಂಗಳೆನಗೆ ಶರಣಕ್ಕೆ ||

ತ್ರಿವಿಧಿ || ಶ್ರೀಮದಭಿಗತಜನ ಪ್ರೇಮದಾಸ್ಪಂದಂಗೆನಿ
ಶ್ಯೀಮ ಬೋಧಾಂಬುನಿಧಿಗೆ ವಿದ್ಯಾ
ಶ್ರಿಮಂಗಾಮೋದವೆತ್ತು ನತನಪ್ಪೆ|| ೧
ವಿದ್ಯಾರ್ಥಿಗಳಿಗಾವವಿದ್ಯೆಯೊಳಪೇಕ್ಷ ಯಾ
ವಿದ್ವಿಯರಲ್ಲಿ ನೆಲಸಿರ್ಪದಾ ನಿಜದ
ವಿದ್ಯಾಶ್ರಮಂಗೆ ನತನಪ್ಪೆ|| ೨

**ಅಂತ್ಯ :** ಯಿಂದು ಪರಂಜೋತಿಯೆತಿ ಪದಪಿಂದ ಸವೆದಿಟ್ಟ
ಸದಮಲಾತ್ಮಾನುಭಮುಖುರವಧಿಕಾರಿ
ವಿದರೊಳುತಂನ ನಿಜತೋರ್ಕೃ|| ೬
ಪೇಳಿವೆವು ನಾಲ್ವತ್ತು ಮೇಲಾರು ಪದವಾಕ್ಯ
ವಾಳೋಚಿತಾರ್ಥತತಿ ಸುಗಮವಾಗಿಯುವ
ಗಾಲತಾಂಹ್ವಯದವೇಳು

ಗದ್ಯ : ಇತಿ ಶ್ರೀ ಕೈವಲ್ಯಾನ್ವಾಯ ಪ್ರವರ್ಧಕ ಪರಮ ಹಂಸ ಪರಿವ್ರಾಜಕಾಚಾರ್ಯ ಸಕಲ ಯೋಗೀಂವೃಂದ ಪಾದರವಿಂದ ಶ್ರೀ ವಿದ್ಯಾಶ್ರಮ ಪಾದ ಕಮಲನೀ ರಾಜಹಂಸ ಶ್ರೀಪರಂಜ್ಯೋತಿಯೆತಿ ವಿರಚಿತ ವಾದ ಅನುಭಾವಮುಖುರದ ಗ್ರಂಥಕ್ಕೆ ತ್ರಿವಿಧಿ ರಚಿತವಾಯಿತು ಮಂಗಳ ಮಹಾ ಶ್ರೀಶ್ರೀ

**ವಿಷಯ :** ವೇದಾಂತ.

**ವಿಶೇಷ:** ಇದೇ ಕಟ್ಟನಲ್ಲಿ ಜ್ಞಾನಸಿಂಧು, ವಾಸನಾಕ್ಷಯ ಪದ ಮತ್ತು ಎರಡು ಹಾಡುಗಳಿವೆ.

—ಜಿಜಿಎಂ

## 50

ಕೆ.ಎ. ೩೮೪/೨ | **ಅನುಭವ ಮುಕುರ** | ತ್ರಿಪದಿ

೧೦.೪″ × ೯.೪″ | ಪರಂಜ್ಯೋತಿಯತಿ | ಸು. ೧೪೫೦

೫೯-೧೦೦ ಪುಟ | ೨೦ ಪಂಕ್ತಿ | ೨೫ ಅಕ್ಷರ

**ಆದಿ.** ಶ್ರೀ ಗುರವೇ ನಮಃ।
ವಿಕ್ರಮಸಂವತ್ಸರದ ಚೈತ್ರಮಾಸದೊಳು। ಗುಳಿಪೂಜೆಯ ಪೂರ್ಣಾನಂದ
ರಖಿ ..
... ವಾತ್ಮಂಕ ನಿಜಧರ್ಮ
............... ಬಡವಗಂ
ವಪ್ಪುದದು ಯುಕ್ತಿ ಸಹವಾಗಿ
ನಿಲಾತ್ಮ ಧರ್ಮವಾಗಿಹುದಹ
ರವನಾವ ವವನೆ ತಾನಾತ್ಮನೆನಿಸುವ।
ಣುವಿಲ್ಲಿ ||೮||

X X X

ವೊಂದೆಂದಡಾ ಧರ್ಮವೆಂದೆನಿಸುವುದೆ ಧರ್ಮಿ
ಯೆಂದಿಂತು ಪೇಳೆಂದೆರಡು....ರದಳ
ಗೊಂದ........ಘಟಿಸಿದಡೆಯುಂಟೆ ||೪||

**ಅಂತ್ಯ:** ಅಚ್ಚ ಕನಸಿನ ಹಾವು ಕಚ್ಚಿ ಮತ್ತೆದ್ದೊಡಂ
ಬೆಚ್ಚಿದಾ ಕಂಪಕೆಣೆಯಾಗಿ ಗೊ
ಪ್ಪಚ್ಚಿಪ್ಪುದಜ್ಞತೆಯುಗಂದ
ಈ ಗ್ರಂಥ ಸಂಪೂರ್ಣ. ಕಡವ ಶಂಭುಶರ್ಮನು ಬರೆದುದು.

**ವಿಷಯ:** ಅದ್ವೈತ ವೇದಾಂತ ವಿಚಾರ.

**ವಿಶೇಷ:** ೧೨೦ರಲ್ಲಿ ಕೆ. ಶಂಭುಶರ್ಮ ಎಂಬುವರು ಮೂಲಪ್ರತಿಯಿಂದ ಸಂಪ್ರತಿಸಿದ್ದಾರೆ. ಮೂಲಪ್ರತಿಯು ತ್ರುಟಿತವಾದುದರಿಂದ ಇದರಲ್ಲಿಯೂ ಆಯಾ ಭಾಗಗಳನ್ನು ಖಾಲಿ ಬಿಟ್ಟಿದೆ. ಇದರೊಡನೆ ದೀಕ್ಷಾಬೋಧೆ, ಜ್ಞಾನ ಸನ್ಯಾಸ(ಸಂ), ಕೇಶವಶತಕ ಎಂಬ ಇತರ ಗ್ರಂಥಗಳಿವೆ.

—ಬಿಎಸ್ಎಸ್

## 51

ಕೆ. ೧೦೦೦/೧೫ **ಅನುಭವಮುಕುರದೊಳಗಣ ಪದಂಗಳು** ತ್ರಿಪದಿ
೧೨.೮" × ೨" ಪರ ಜ್ಯೋತಿಯತಿ ?
೧೬೭ನೆಯ ಪತ್ರ ೧೪ ಪಂಕ್ತಿ ೮೩ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ|| ಅನುಭಾವಮುಖರದೊಳಗಣ ಪದಂಗಳು ||ತ್ರಿಪದಿ||

ಅಯ್ಯೊ ಅಕಟಸುಖದ ಮಯ್ಯನರಿಯದೆ ಜಗವ
ಹುಯ್ಯಲಿಡಿಸಿತ್ತು ವಿಷಯತತಿ ನೆಟ್ಟನಾ
ಕಯ್ಯಲದು ತನ್ನ ನಿಜಸುಖ ||೧||

**ಅಂತ್ಯ :** ಹಿಂಗಿತು ಗುರುಶಿಷ್ಯ ಮಾಹೇಶನು
ತ್ತುಂಗ ಸಭೆ ತನ್ಮೊಳಿದ ಮಹಮ್ಮಳಿದು ನಿ
ಸ್ತುರಂಗ ಸುಖ ಸಿಂಧುವೆನಿಸಿತ್ತು ||೪೧||

**ವಿಷಯ :** ಅದ್ವೈತ ವೇದಾಂತ.

**ವಿಶೇಷ :** ಈ ಕಟ್ಟಿನಲ್ಲಿ ಹಂಸಪವನ ಲಕ್ಷಣ, ಬಿರುದಾವಳಿ ಗದ್ಯ, ಹಾಡುಗಳು ಇತ್ಯಾದಿ ೧೫ ಕೃತಿಗಳಿವೆ. ೧–೮೬ ಪತ್ರಗಳಲ್ಲಿ ವುದ್ಧರಣೆಯ ಪಟಲದ ಚಿತ್ರಗಳಿವೆ. ೬–೫೮ ಪತ್ರಗಳಿಲ್ಲ.

—ಜಿಜಿಎಂ

## 52

ಕೆ. ೧೩೭೯/೧ **ಅನುಭವ ಮುದ್ರೆ** ಗದ್ಯ
೧೨.೫" × ೧.೭" ಪ್ರಭುದೇವರು ?
೧-೯೦ ಪತ್ರ ೭ ಪಂಕ್ತಿ ೫೮ ಅಕ್ಷರ

**ಆದಿ :** ಶ್ರೀ ಗುರುಮುರಿಗಾ ಶಾಂತ ವೀರೇಶ್ವರಾಯ ನಮಃ|| ಅನುಭವ ಮುದ್ರೆಯ ಬರವುದಕ್ಕೆ ಶುಭಮಸ್ತು XXX ಶ್ರೀಮಹಾದೇವ ದೇವತಾರಾಧ್ಯ ದೇವ ಶಿಖಾಮಣಿ ದೇವಕುಲಚಕ್ರವರ್ತಿ ಪ್ರಮಥಗಣ ಸಾರ್ವಭೌಮ ಚತುರ್ದಶ ಭುವನ ಭವನಾದೀಶ್ವರ ಹರಿಯಜೇಂದ್ರಾದಿ ಅಮರ ಶಿರೋಮೌಲಿ ವಿಂನ್ಯಸ್ತ ಪಾದಾರವಿಂದ ಸಮಸ್ತ ಬ್ರಹ್ಮಾಂಡೋದ್ಧಾರ ಬಸವೇಶ್ವರ ಚೆನ್ನ ಬಸವೇಶ್ವರ ಪ್ರಭುಮುಖ್ಯ ಸಕಲ ಪುರಾತನ ನಿರೂಪಿತ ನೀತಿಕಾವಚನ ಮನೋಹರ

**ಅಂತ್ಯ :** ಶ್ರೀಮತ್ಸಚ್ಚಿದಾನಂದ ನಿತ್ಯ ಪರಿಪೂರ್ಣ ಸ್ವಯಂಪ್ರಕಾಶ ಪರಬ್ರಹ್ಮ ಸ್ವರೂಪನಪ್ಪ ಸದ್ಗುರುಸ್ವಾಮಿ ಪ್ರಭುದೇವರು ತಮ್ಮ ನಿಜಶಿಷ್ಯರಪ್ಪ ಪ್ರಭು

ದೇವರಿಗೆ ನಿರೂಪಿಸಿದ ಅನುಭಾವ ಮುದ್ರೆಯೊಳು ಚಿತ್ಕಳೆ ವಿಯೋಗಾವ ಸ್ಥಲ ಶಾಂಭವ ಯೋಗತ್ರಯ ತ್ರಿಂಶಸ್ಥಲಂ ಸಂಪೂರ್ಣ ಮಂಗಳ ಮಹಾಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಅಕ್ಷರಗಳು ಚೆನ್ನಾಗಿಲ್ಲ. ಇದೇ ಕಟ್ಟಿನಲ್ಲಿ ಮರಣಚಿಹ್ನೆ ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 53

| ಕೆ. ೧೬೨೮ | **ಅನುಭವರಸಾಯನ** | ಗದ್ಯ, ಪದ್ಯ |
|---|---|---|
| ೬.೫" × ೧.೨" | ಶಾಲ್ಯದ ಕೃಷ್ಣರಾಜ | ? |
| ೧-೧೬೯ ಪತ್ರ | ೭ ಪಂಕ್ತಿ | ೨೧ ಅಕ್ಷರ |

**ಆದಿ :** ಶ್ರೀ ಶಿವಾಯ ನಮಃ॥ ಅನುಭವ ರಸಾಯನ ಎಂಬ .................. ಕುಳ್ಳಿರ್ದ್ದಯಂದಪ್ಪಣೆಯಂ ಕೊಟ್ಟಮೇಲೆ ಮೊಳಿತ್ತಾಗಿ ಕುಳ್ಳಿರ್ದವ ತಾಗಿ ಭಯದಿಂದುತ್ತರ ವಿಾಯದ। ಮಿತಮಿತಾಕ್ಷಿ ವೀಕ್ಷಣದಿಂದನುನಯ ಮಾಂತಿಹನಂ ನೋಡಿಯಸ್ಮೃತಿಂ ಬಂದ ಪ್ರಯೋಜನಮೇನಲಾ। ಸ್ವಾಮಿ ಭವಭೀತನಾಗಿ ಯಿದಂತಶಸುವವುಪಾಯಮಂ ಕಾಣದ। ಭವದಿಯ ಚರ ಣಾರವಿಂದವೆಂಬ ನಾವೆಯಿಂದವಧಿಯಿಲ್ಲದ ಸಂಸಾರ ಸಮುದ್ರಮಂ ದಾಂಟುವನಂ ಬಲವಲವಿಶಿಯಿಂ ಬಂಧನೆಲು॥

**ಅಂತ್ಯ :** ಯಿಂತೆಂದ ಗುರುವರ್ಯನ ಗೌರಿವತಿಯೆಂದು
ಚಿಂತಿಸಿ ನಮಿಸಿದ ಶಿಷ್ಯ
ಯೆಂತಾದರಿರಲಿ ಜೀವನ್ಮುಕ್ತರಿಲ್ಲಿಹ ತು
ಷಂ ತೊಲಗಿದ ತಂಡುಲಗಳು ॥೧೬೧॥
ಯಿಂತು ಜೀವನ್ಮುಕ್ತಿ ಲಕ್ಷಣಂ ಸಂಪೂರ್ಣಂ ॥ಶ್ರೀ॥ ಶ್ರೀಮದನೇಕ ಸುರಾ ಸುರ ಶಿರೋದೇಶ ಕಿರೀಟಮಣಿ ಪ್ರಭಾನೀರಾಜಿತ ಪಾದಾರವಿಂದ ಪರ ಮೇಶ್ವರಾಸಕ್ತ ಚಿತ್ತನಾದ ಕೃಷ್ಣಪ್ರಭುವು ಮಾಡಿದ ಅನುಭವ ರಸಾಯನ ಯಂಬ ವಚನಗಳು ಜೀವನ್ಮುಕ್ತಿ ಸಹಾ

**ವಿಷಯ :** ವೇದಾಂತ ವಿಚಾರ.

**ವಿಶೇಷ :** ಶಿಥಿಲ ಪ್ರತಿ. ಮೊದಲನೆಯ ಗರಿಯಲ್ಲಿ ಅನೇಕ ಪದಗಳು ಲುಪ್ತ.

—ವೈಸಿಬಿ

## 54

ಕೆ. ೧೭೮೭/೩ **ಅನುಭವ ರಸಾಯನ** ಗದ್ಯ

೯.೫″ × ೧.೫″ ಶಾಲ್ಯದ ಕೃಷ್ಣರಾಜ ಸು. ೧೭೪೮

೧-೧೨೩ ಪತ್ರ ೬ ಪಂಕ್ತಿ ೩೫ ಅಕ್ಷರ

**ಆದಿ :** ಶ್ರೀ ಕೃಷ್ಣಾನಂದ ಗುರುಚರಣಾರವಿಂದಾಭ್ಯಾ ನಮಃ॥ ಅನುಭವ ರಸಾಯನ ಬರೆಯುವದಕ್ಕೆ ಶುಭಮಸ್ತು॥

ಶ್ರೀಮದ್ವಿಚಾರ ಪಾರಾವಾರ ಪಾರೀಣರಾದ ಗುರುವಂ ಶೇರಿ ನಯವಿನಯ ಸಂಪನ್ನನಾದ ಶಿಷ್ಯನು ಸಾಷ್ಟಾಂಗ ನಮಸ್ಕಾರಂಗೈದು ಕೃತಾಂಜಲಿ ಬದ್ಧನಾಗಿ ನಿಂದಿರುವನಂ ಕಂಡು ಪ್ರಸಂನವಾದ ಮುಖದೊಳ್ ಪೊಳೆವ ಕರುಣರಸಭರಿತ ಕಟಾಕ್ಷದಿಂದೀಕ್ಷಿಸಿ ಕುಳ್ಳಿರೈಯೆಂದಪ್ಪಣೆಯಂ ಕೊಟ್ಟ ಮೇಲೆ ವಳ್ಳಿತಾಗಿ ಕುಳ್ಳಿರ್ದವನಾಗಿ ಭಯದಿಂದುತ್ತರವಿಾಯದೆ

**ಅಂತ್ಯ :** ಕಂದಂ॥
ಶ್ರೀಮದನೇಕ ಸುರಾಸುರ
ಶಿರೋದೇಶ ಕಿರೀಟಮಣಿಪ್ರಭಾ ನಿರಾಜಿತ
ಪಾದಾರವಿಂದ ಪರಮೇ
ಶ್ವರಾಸಕ್ತ ಚಿತ್ತನಾದ ಕೃಷ್ಣಪ್ರಭುವು ಮಾಡಿದ
ಅನುಭವರಸಾಯನವೆಂಬ ವಚನಂ ಸಂಪೂರ್ಣಂ ಮಂಗಳ ಮಹಾಶ್ರೀಶ್ರೀ

**ವಿಷಯ :** ವೈರಾಗ್ಯ ನಿರೂಪಣೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಅಥರ್ವಣ ರಹಸ್ಯೋಪನಿಷದಃ ಮತ್ತು ಅಮೃತಬಿಂದೋಪನಿಷದಃ ಎನ್ನುವ ಸಂಸ್ಕೃತ ಕೃತಿಗಳಿವೆ.

—ಜಿಜಿಎಂ

## 55

ಕೆ. ೮೪೧ **ಅನುಭವ ವೈದ್ಯ ಚಿಕಿತ್ಸೆ** ಶ್ಲೋಕ, ಟೀಕು

೧೩.೪″ × ೧.೩″ ? ?

೧೭೪ ಪತ್ರ ೬ ಪಂಕ್ತಿ ೫೬ ಅಕ್ಷರ

**ಆದಿ :** ಸಂನಿಗೆ ಅಂಗ್ನಿಕುಮರಿ ಪ್ರತ್ಯೈಕಂ ಚ...ಲೆ ಪಯೇತ್ ಭೃಂಗರಜರಸತ್ತೈಲಂ। ತೈಲತುಲ್ಯವಿದ ಪಚೆ। ಟೀಕು। ಆವರೆಬೇರು ಆಲದ ಬಿಳಿಲು ಹಂದಿಯ ಕೊಂಬ। ಜಂತ್ತ। ಯಿವಸಮನಗೊಂಚ....ಣೆ ಗರುಗದರಸ ಸಮನು ಹೊಯಿದು। ಆ ಗುರುಗಿನರಸ। ಯಿಂಗುವನ ಕರ ಅಟ್ಟು। ಮಂಡೆಗೆ ಪುಸಿಕೊಂಡಮಿವತ್ತ ಬರಲ ಕೂದಲು ಬೆಳವದೂ ॥ಶ್ರೀ॥

**ಅಂತ್ಯ :** ಯಕ್ಷ್ಮಂ ಪುಟ್ಟುಗುಂ। ಅದರ ಲಕ್ಷಣವೆಂತೆಂದಡೆ। ಖಾಸಂ। ಅರುಚಿಯುಂ। ಬರಿ ಜೇನೆಗ್ಗವುದುಂ। ಕರುಳು ಗುಳಂ ಗುಳಿಸೂದುಂ ಶೇರ್ಕು। ರಕ್ತ। ಚ್ಛರ್ದ್ಧಿ ರಾಖು। ವ್ಯೆಯಿ ಬಡನಪ್ಪುದುಂ। ಬಲಕ್ಷಯುಮಪ್ಪುದುಂ। ಅಡಿಗಡಿಗು ಗುಳುದುಂ। ಕಿಱುಗೆಂದೂದುಂ। ಕೀವಿನಂತ್ತೆವುಗುಳೂದ್ದು ಕೆಯ್ಯನಾಸಾ ಗಳೂದುಂ। ಪಿತ್ತಸರ್ವ್ವವಾಗುಗಳೂದರಿಂಪೆಂನಿಲು ತೋರ್ಪ್ಪ ಪಾಂಬಳ ಬಡಂ। ಕ್ಷೀಣಶ್ವರಮಪ್ಪುದುಂ ॥ಯಿಂ........

**ವಿಷಯ :** ವೈದ್ಯಶಾಸ್ತ್ರ.

**ವಿಶೇಷ :** ಗರಿಗಳಿಗೆ ಪತ್ರಸಂಖ್ಯೆ ಇಲ್ಲ, ಶಕಟರೇಫವನ್ನು ಬಳಸಿದೆ. ಗರಿಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ. ಎರಡು ಮೂರು ರೀತಿಯ ಬರವಣಿಗೆಯನ್ನು ಈ ಗ್ರಂಥದಲ್ಲಿ ಕಾಣಬಹುದು.

—ಕೆಆರ್ಎಸ್

## 56

| ಕೆ. ೧೨೭೬ | **ಅನುಭವ ಶಿಖಾಮಣಿ** | ಭಾಮಿನೀ ಷಟ್ಪದಿ |
|---|---|---|
| ೧೬.೫" × ೧.೪" | ಸರಸಿಂಹ | ಸು. ೧೭೬೮ |
| ೧-೧೨೭ ಪತ್ರ | ೫ ಪಂಕ್ತಿ | ೬೦ ಅಕ್ಷರ |

**ಆದಿ :** ಶ್ರೀ ವೀರಭದ್ರಾಯ ನಮಃ ಅನುಭವ ಶಿಖಾಮಣಿಯ ಪುಸ್ತಕ ಬರುವ ದಕ್ಕೆ ಶುಭಮಸ್ತು ॥ಶ್ರೀರಸ್ತು॥ ನಾಂದ್ಯಪದ॥

ಭಾಮಿನಿ॥
ಮೂರುಮುಖದಲಿ ಮೆರದು ತೋರ್ಪನೆ
ಆರುನಯನದಿ ನೋಡುತಿರ್ಪನೆ
ಮಾರುತನಸುತ ವೈರಿಯುಣುಗನೆ ವೇದನಾಳುವನೆ
ಆರುಚರಣನೆ ಯರಡು ಬಾಲನೆ
ಮೂರು ಗುಣಪರಿಪೂರ್ಣ ಗಣಪನೆ
ತೋರುಮತಿಯನುಭವ ಶಿಖಾಮಣಿಯಂಬ ಕಾವ್ಯಕ್ಕೆ ॥೧॥

**ಅಂತ್ಯ :** ತೆಗದಿದಕೆ ಅನುಭವ ಸಿಖಾಮಣಿ
ಮಿಗಿಲು ಹೆಸರನುಯಿಟ್ಟಿದಕೆ ಗತಿ
ಜಗದೊಳಗೆ ಯಿಪ್ಪತ್ತಾನಾಲ್ಕು ಪದನು ಸಾಸಿರದಾ
ಮಾಗೆಯ ಕ್ಷೋಣೋತೀಸವಿಹ ವಿಧ
ಬ್ಯಾಗಲಾಲಿಸಿ ವೇದ ಶಾಸ್ತ್ರವ
ಭಾಗವತ ಪೌರಾಣಗಳ ಕೇಳಿದ ಫಲವು ಸಿದ್ಧಿಪದು ॥೫॥

ಸರುವಧಾರೀನಾಮ ಸಂವ
ತ್ಸರದ ಶ್ರಾವಣ ಶುದ್ಧ ಪಾಡ್ಯದಿ
ತರಣಿಯಾರದಿ ಮೊದಲುಗೊಂಡೆನು ಭಾದ್ರಪದ ಬಹುಳಾ
ಚರಿಪ ಪಂಚಮಿ ಸೋಮವಾರವು
ಯರಡು ತಾಸಿಗೆ ಶಾರೆ ಮೇಘಬಂ
ದಿರಲು ಹಂಪೆಯಾ ರಾಯ ಕರುಣದಿ ಕಾವ್ಯಮುಗಿಸಿದೆನು
ಅಂತು ಸಂಧಿ ೨೪ ಕಂ ಪದನೂ ೧೦೩೨ ಕಂ ಶ್ಲೋಕಾ ೨೯ ಕಂದಪದ್ಯ ೧ಕಂ
ಯೇಕೋನು ೧೦೬೭ ಕಂ ಮಂಗಳ ಮಹಾಶ್ರೀಶ್ರೀ.

**ವಿಷಯ :** ಶರಣರ ಕಥೆ ಇತ್ಯಾದಿ (ಗೌತಮಮುನಿ ಜಂಭೀರರಾಯನಿಗೆ ಬೋಧಿಸುವುದು).

**ವಿಶೇಷ :** ಪ್ರತಿ ಸಮಗ್ರ. ಚೆನ್ನಾಗಿದೆ.

—ಜಿಜಿಎಂ

## 57

ಕೆ. ೧೩೮೩/೨ — **ಅನುಭವಸಾರಸೂತ್ರ** — ತ್ರಿಪದಿ

೧೪.೫" × ೨.೧" — ನಿಜಗುಣ ಶಿವಯೋಗಿ — ಸು. ೧೫೦೦

೩೦-೪೧ ಪತ್ರ — ೧೪ ಪಂಕ್ತಿ — ೮೬ ಅಕ್ಷರ

**ಆದಿ :** ಅನುಭವ ಸಾರ
ಸೂತ್ರ|| ಪರತರಾನಂದಮಯ ಗುರು ಶಂಭು ಪದವೆಂನ
ಶಿರದೊಳಿರುತಿರ್ಕೆ ನಿಜ ಕರುಣದಿಂದಾ
ತ್ರಿವಿಧಿ|| ಶ್ರೀ ಗುರುವೆ ನಿಜಸುಖದ ಸಾಗರವೆ ತೆರೆ ಮಸಗು
ತಾಗಳುಂ ಬೆಳಗುತಿಹೆ ನಿಂನ ಕಡೆಗಣ್ಗ
ಳೀಗೆ ಸಂತಸವನಖಿಳರ್ಗ್ಗೆ ||೧||

**ಅಂತ್ಯ :** ವೃತ್ತಮ ಪದಂಗಳೈವತ್ತು ಸೂತ್ರಂಗಳೈ
ದುತ್ತಮರು ಮೆಚ್ಚುವಂತೆಂಟನೆಯ ಸಂಧಿ
ಯುತ್ತಮೋತ್ತಮ ವೆನಿಪುದಿಂತು ||೧೦||
ಯಿಾ ೧೦ ಪರಿಶಿಷ್ಟ ನಿರೂಪಣೆ
ಕಂದ|| ತ್ರಿಪದಿಗಳೈನೂರ್ಮೆೃವ್ವೈದ
ನವಧಿಯ ಮೂವತ್ತು ಸೂತ್ರವದು ನಾಲ್ವತ್ತಾ
ರಮರಿರ್ದ್ದ ಸಂಧಿಯೆಂಟನು
ಭವಸಾರದೊಳೆಸೆವವಖಿಳ ವಿಬುಧರ್ ಮೆಚ್ಚಲ್

ಗದ್ಯ॥ ಯಿ:ತಿ ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ನ್ನ ಲಕ್ಷಣ ಲಕ್ಷಿತ ನಿರಂಜನ ಪರಂಜ್ಯೋತಿ ಸ್ವರೂಪ ಶ್ರೀಶಂಭು ಪಾದಾರವಿಂದ ಮಕರಂಧ ಸೌಗಂಧಿಕಾ ಲುಬ್ಧ ಮತ್ತಮಧುಕರಾಯ ಮಾನ ಶ್ರೀ ನಿಜಗುಣ ಶಿವಯೋಗಿ ವಿರಚಿತ ಮಪ್ಪನುಭವಸಾರ ಪ್ರಕರಣಂ ಸಂಪೂರ್ನ್ನ ಮಂಗಳ ಮಹಾಶ್ರೀ

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಸಮಗ್ರ. ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಅನುಭವಾ ಮೃತ, ಪರಮಾರ್ಥ ಗೀತೆ ಇತ್ಯಾದಿ ಒಟ್ಟು ೫ ಕೃತಿಗಳಿವೆ.

—ಕೆಆರ್‌ಎಸ್

## 58

## ಅನುಭವಸೂತ್ರ (ಸಟೀಕು)

ಚೆನ್ನಮಲ್ಲಿಕಾರ್ಜುನದೇವ

| ಕೆ. ೭೧೯/೧ | | ಶ್ಲೋಕ, ಟೀಕು |
|---|---|---|
| ೧೪.೩" × ೨" | | ? |
| ೧-೭೮ ಪತ್ರ | ೯ ಪಂಕ್ತಿ | ೭೦ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ಅನುಭವ ಸೂತ್ರ.

ವೃತ್ತ॥ ಉದ್ವರ್ತುರ್ಗಂ ನಿಜ ಭಕ್ತಲೋಕ ಮುದಿತ ಪಂಡಿತಾರಾಧ್ಯ ಸಚ್ಚೈವಾ ಚಾರ್ಯಕ ಸಂಪ್ರದಾಯಜನುಷೇ ಶ್ರೀಷಟ್‌ಸ್ಥಲಬ್ರಹ್ಮಣೆ ತಸ್ಮೈ ಶ್ರೀ ಚೆನ್ನಮಲ್ಲಿಕಾರ್ಜುನ ಮಹಾದೇವ ಪ್ರಸನ್ನಾತ್ಮನೆ ತುಭ್ಯಂ ಶ್ರೀಗುರು ವಾರಣಾಸಿಯೊಡೆಯು ಪ್ರಖ್ಯಾತ ನಮೋನ್ನಮಃ। ಶ್ರೀಗುರು ವಾರಣಾಸಿ ಯೊಡೆಯುಂಗೆ ಭವಂಗೆ ಶಿವಂಗೆ ಚಾರು ಶೈವಾಗಮವಾಂತಾ ಶ್ರೀಪರಿಪೂರ್ನ ಸುಧಾಕಿರಣಂಗೆ ಷಟ್ಸ್ಥಲಯೋಗ ವಿಶುದ್ಧ ಬುದ್ಧಿ ಚರಿತಾರ್ತ್ಥಿತ ಭಕ್ತ ಜನಂಗೆ ಸಂಶ್ರುೃತ್ಯಾಗ ಪರಿಷ್ಕೃತಂಗೆ ಶರಣೆಂಬೆ ನಾನರತ ಭಕ್ತಿ ಯುಕ್ತಿಯಿಂ ॥೨॥

ಅಂತ್ಯ : ಏತದ್ಯೋ ವೇದಸೋs ವಿದ್ಯಾಗ್ರಂಥಿಂ ವಿಕಿರಿತಿ ಪ್ರಭುಃ ಶಿವಸಿದ್ಧಾಂತಕಂ ತಂತ್ರಂ। ಶಿವಾದ್ವೈತ ಶಿವಂಪದಂ

ಟೀಕು : ಶಿವಾದ್ವೈತಂ। ಶಿವ। ಶಿವನಿಂದ। ಅದ್ವೈತಂ। ಬೇರಿಲ್ಲದಿದ್ದಾಗಿ। ಶಿವಂ। ಮಂಗಳವಾದ ಪದಂ। ಶಿವನಿಪ್ಪಸ್ಥಾನವಾಗಿ। ಶಿವ ಸಿದ್ಧಾಂತಕಂ। ಶಿವ ಸಿದ್ಧಾಂತವಾಗಿ ಉಳ್ಳದು ಕಾರಣ। ಶಿವ ಸಿದ್ಧಾಂತವೆಂಬ। ಏತತ್। ತಂತ್ರಂ। ಈ ಶಾಸ್ತ್ರವ। ಯಃ। ಆವಾತನು। ವೇದ। ಅರಿವುತ್ತಿದ್ದಾನು। ಸಃ। ಆತನೂ। ಪ್ರಭುಃ। ಶಕ್ತನಾಗಿ। ಅವಿದ್ಯಾ ಗ್ರಂಥಿಂ। ಅವಿದ್ಯಾಜ್ಞಾನ ವೆಂಬ ಗ್ರಂಥಿ। ಗಂಟನು। ವಿಕಿರತಿ। ಬಿಡುತ್ತಿಹನು। ಇತ್ಯನುಭವ ಸೂತ್ರೆ। ಶಿವಸಿದ್ಧಾಂತ ತಂತ್ರೆ ಷಟ್ಸ್ಥಲ ನಿರ್ನ್ನಯೆ

ಇತ್ಯಾರಾಧ್ಯ ಪ್ರಿಯ ಚೆನ್ನಮಲ್ಲಿಕಾರ್ಜುನ ದೇವ ನಾಮಾಂಕಿತಯಾಂ। ಅನುಭವ ಸೂತ್ರ ವಾಕ್ಯಾರ್ಥ ಪ್ರಕಾಶಿಕಾಯಾಂ ಕರ್ನಾಟಭಾಷಾ ಟೀಕಾಯಾಂ ಕ್ರಿಯಾವಿಶ್ರಾಂತಿರ್ನಾಮ। ಅಷ್ಟಾಧಿಕರಣ ಸಂಪೂರ್ಣ ವಿನೃತ್ತಂ
ಅಂತು ಅಧಿಕರಣ ೮ಕ್ಕೆ ಶ್ಲೋಕ ವೃತ್ತಂಗಳು ೪೮೦ಕ್ಕೆ ಮಂಗಳ ಮಹಾ ಶ್ರೀಶ್ರೀಶ್ರೀXXXಗುರುಬಸವ ಲಿಂಗಾಯನಮಃ

**ವಿಷಯ :** ಷಟ್ಸ್ಥಲ ಸಿದ್ಧಾಂತದ ವಿವರ.

**ವಿಶೇಷ :** ಓಲೆ ಸುಸ್ಥಿತಿಯಲ್ಲಿದೆ. ಇದರೊಂದಿಗೆ ಪಾಲ್ಕುರಿಕೆ ಸೋಮಾರಾಧ್ಯರ ಯೋಗಾಂಗತ್ರಿವಿಧಿ, ಜ್ಞಾನಕೊರಪಂಜಿ ಪದ, ಲಿಂಗಸೂತ್ರ ಗ್ರಂಥಗಳಿವೆ.

—ಎಂಎನ್ಎಲ್

## 59

| ಕೆ.ಎ. ೬೦೧/೨ | **ಅನುಭವಸೂತ್ರ (ಸಟೀಕು)** | ಶ್ಲೋಕ, ಟೀಕು |
|---|---|---|
| ೯" × ೧೨" | ಚನ್ನಮಲ್ಲಿಕಾರ್ಜುನ | ? |
| ೧೦೯-೧೭೨ ಪತ್ರ | ೨೩ ಪಂಕ್ತಿ | ೩೦ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥
ಶ್ರೀಮಾಯಿ ದೇವಾಚಾರ್ಯ ಕೃತ
ಸಟೀಕ ಅನುಭವ ಸೂತ್ರ॥ ಶಾ॥ ವೃತ್ತ॥
ಮದ್ದರ್ತಂ ನಿಜಭಕ್ತಲೋಕ ಮುದಿತು ಶ್ರೀಪಂಡಿತಾರಾಧ್ಯನಚ್ಛೈವಾ ಚಾರ್ಯಕಃ ಸಂಪ್ರದಾಯು ಜನುಷೀ ಶ್ರೀಷಟ್ಸ್ಥಲ ಬ್ರಹ್ಮಣೆ ತಸ್ಮೈ ಶ್ರೀ ಚೆನ್ನಮಲ್ಲಿಕಾರ್ಜುನ ಮಹಾದೇವ ಪ್ರಸನ್ನಾತ್ಮನೆ ತುಭ್ಯಂ ಶ್ರೀ ಗುರು ವಾರಾಣಾಶಿ ವೊಡೆಯ ಪ್ರಖ್ಯಾತ ನಾಮ್ನೋ ನಮಃ ॥೧॥

**ಅಂತ್ಯ :** ಯಿತ್ಯನುಭವ ಸೂತ್ರೇಶಿವ ಸಿದ್ಧಾಂತ ತಂತ್ರೆ ಷಟ್ಸ್ಥಲ ನಿರ್ನ್ನಯೇ। ಕ್ರಿಯಾ ವಿಶ್ರಾಂತಿರ್ನಾಮ ಅಷ್ಟಮಾಧಿಕರಣಂ........ಶಿವಾರ್ಪಣಮಸ್ತು। ..........ಯಿತಿ....ಸರ್ವತಂತ್ರ ಸ್ವತಂತ್ರ ಕರ್ತೃವಾದ ಶ್ರೀಮೊಗ್ಗೆಯ ಮಾಯಿ ದೇವಾಚಾರ್ಯ ಪ್ರಭು ನಿರೂಪಿತಮಪ್ಪ ಅನುಭವ ಸೂತ್ರವೆಂಬ ಗ್ರಂಥಕ್ಕೆ ಚೆನ್ನಮಲ್ಲಿಕಾರ್ಜುನ ದೇವರೆಂಬ ಶಿವಾಚಾರ್ಯನಾ ಕರ್ಣಾಟಕ ಭಾಷೆಯಿಂ ಟೀಕಾ ವಿರಚಿತವಾದುದನ್ನು ಪಾಠಕರಿಗೆ ಸುಗಮವಾಗಲೆಂದು ಶ್ರೀ ಕಲ್ಲಿನಾಥ ದೇವನಾಡೆನ್ನಿಂ ಯಥಾಮತಿ ತಾತ್ಪರ್ಯ ತಾತ್ಪರ್ಯ ರೂಪಮಾಗಿ ಶಾಲಿವಾಹನ ಶಕ ೧೮೪೧ನೇ ಸಂವತ್ಸರಕ್ಕೆ ಸಲ್ಲುವ ಕಾಳಾ ಯುಕ್ತಿ ಸಂವತ್ಸರ ಆಷಾಡ ಮಾಸೆ ಕೃಷ್ಣಪಕ್ಷ ೧೩ ತಿಥಿಃ ರವಿವಾರಕ್ಕೆ ಲಿಖಿಸಿ ಪೂರ್ತಿಯಾಯಿತು। ಸಂಪೂರ್ಣ॥

**ವಿಷಯ :** ಷಟ್ಸ್ಥಲ ಸಿದ್ಧಾಂತದ ವಿವರ.

**ವಿಶೇಷ :** ಸಮಗ್ರ ಕೃತಿ. ಅಲ್ಲಲ್ಲಿ ತ್ರುಟಿತವಾಗಿದೆ. ಬರವಣಿಗೆ ಚೆನ್ನಾಗಿದೆ. ಇದರೊಂದಿಗೆ 'ವಿಶೇಷಾರ್ಥ ಪ್ರಕಾಶಿಕಾ' ಎಂಬ ಇನ್ನೊಂದು ಕೃತಿ ಇದೆ.

—ಎಂಪಿಎಂ

## 60

| | | |
|---|---|---|
| ಕೆ. ೬೬೭/೨ | **ಅನುಭವಾಮೃತ** | ಭಾಮಿನೀಷಟ್ಪದಿ |
| ೧೭.೮" × ೧.೩" | ಮಹಲಿಂಗರಂಗ | ಸು. ೧೬೭೫ |
| ೧-೭೦ ಪತ್ರ | ೭ ಪಂಕ್ತಿ | ೭೨ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ। ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖವರ್ಷಂಗಳು ೧೭೨೨ನೆಯ ರೌದ್ರಿ ಸಂವತ್ಸರದ ಕಾರ್ತಿಕ ಬ ೧೦ ಗುರುವಾರ ಮೋಷಾ ನಕ್ಷತ್ರದಲ್ಲೂ ಬರೆದ ಅನುಭವಾಮೃತದ ಪುಸ್ತಕ ಪ್ರಾರಂಭಾ। ಶ್ರೀ ಗುರು ಚೆನ್ನವೀರದೇಶಿಕ ಪಾದೋದ್ಭವನಾದ ಬಾಳನಡೇರ ಬಸವಲಿಂಗನು ಬರೆದ ಪುಸ್ತಕ ಶುಭಮಸ್ತು। ನಿರ್ವಿಘ್ನಮಸ್ತು। ಸಂತತಂ ಗುರುಪಾದ ಭಕ್ತಿರಸ್ತು॥

ಪಲ್ಲ॥ ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಿಸಿ ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ

ಪದ॥ ಶ್ರೀಮದನುಪಮತೇಜ ಸತಜನ
ಕಾಮಿತಾರ್ಥಫಲಪ್ರದಾಯಕ
ಸೋಮಶೇಖರ ಸುರಮುನೀಂದ್ರಾರ್ಚಿತ ಪದಾಂಭೋಜ
ಸಾಮಗಾನಪ್ರಿಯ ಸದಾಶಿವ
ವಾಮಭಾಗಾಶ್ರಿತ ಭವಾನೀ
ಪ್ರೇಮ ಶ್ರೀ ಗಿರಿಮಲ್ಲಿಕಾರ್ಜುನ ಸಲಹು ಮೂಜಗವಾ ॥೧॥

ಶ್ರೀ ಗಿರೀಶನ ಪಾದಪದ್ಮಪ
ರಾಗರಂಜಿತ ಮೌಳಿ ಭ್ರಮರಾಂ
ಬಾಗುಣಾರ್ಣವ ಪೂರ್ಣಚಂದ್ರ ವಚೋವಿಚಕ್ಷಣನೂ
ಶ್ರೀ ಗುರುವಿನುಪದೇಶದಿಂದನು
ರಾಗವುದಿಸಲು ರಂಗನಾಥನು
ಯೋಗಿಜನರಹುದೆನಲು ಪೇಳಿದನನುಭವಾಮೃತವಾ ॥೨॥

ಘನತರದ ಸಹವಾಸಿವಂಶದ
ಲನುಪಮನು ಮಹಲಿಂಗದೇವನ
ತನಯನಹ ಶ್ರೀರಂಗ ಸಹಜಾನಂದ ಗುರುಪದವಾ
ನೆನದು ಸಮ್ಯಜ್ಞಾನವನು ಬ
ಲ್ಲನುಭವಿಗಳಹುದೆನಲು ಪೇಳಿದ
ವಿನುತರಾಸ್ವಾದಿಸುವುದೊಲಿದೀಯನುಭಾವಾಮೃತವಾ ||೩||

**ಅಂತ್ಯ :** ದೇವ ಜಯಜಯ ಭಕ್ತನಿಕರವ
ಕಾಯ್ವ ಜಯಜಯ ಕಲುಷಹರ ಜಯ
ದೇವಿ ಪಾರ್ವತಿಪ್ರಿಯ್ಯ ಜಯಜಯ ದೇವತಾವಂದ್ಯಾ
ಪಾವಕಾಂಬಕ ಫಣಿವಿಭೂಷಣ
ಕಾವಮರ್ದನ ಸಕಲಲೋಕದ
ಜೀವದಂತರ್ಯಾಮಿ ಸಲಹುಗೆ ಮಲ್ಲಿಕಾರ್ಜುನನೇ ||೩೦||

ಯಿತೀ ಶ್ರೀಮತ್ಪರಮಹಂಸ ಪರಿವ್ರಾಜಿಕಾಚಾರ್ಯವ ಸಹಜಾನಂದ ಗುರುವರ್ಯ ಪದಕಮಲಭೃಂಗಾಯಮಾನ ಸಹವಾಸಿ ಮಹಲಿಂಗರಂಗ ವಿರಚಿತ ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನಾ ಪ್ರಕರಣಂ ಸಮಾಪ್ತಂ|| ಅಂತೂ ಸಂಧಿ ೧೧ಕ್ಕಂ ಪದನೂ ೭೬೨ಕಂ ಮಂಗಳ ಮಹಾಶ್ರೀ||

ತಪ್ಪಂ ಬರದಾತಂ ಕಡುಜಡನಪ್ಪಾತನೆಂದ| ಬೈಯ್ಯಲ್ಬೇಡಂ ತಪ್ಪಕ್ಕು ಶುಧ ಮಕ್ಕುಂ ತಪ್ಪುಳ್ಳರೆ ತಿದ್ದಿವೋದಿ ಉತ್ತಮಪುರುಷರೂ ||ಶ್ರೀ||

**ವಿಷಯ :** ವೇದಾಂತ.

**ವಿಶೇಷ :** ಗ್ರಂಥ ಸಮಗ್ರ, ಸ್ಫುಟಾಕ್ಷರ. ಇದರೊಡನೆ ನಂದೀಕಾವ್ಯ, ಷಡ್ವಕ್ತ್ರ ಸ್ತೋತ್ರ ಎಂಬ ಕೃತಿಗಳಿವೆ.

—ಎಸ್ ಎನ್ ಕೆ

## 61

ಕೆ. ೧೩೮೨/೨ **ಅನುಭವಾಮೃತ** ಭಾಮಿನೀಷಟ್ಪದಿ

೧೪.೬" × ೨.೨" ಮಹಲಿಂಗರಂಗ ಸು. ೧೬೭೫

೧-೪೦ ಪತ್ರ ೧೨ ಪಂಕ್ತಿ ೮೪ ಅಕ್ಷರ

**ಆದಿ :** ಸಭಾನು ಸಂವತ್ಸದ ಆಶ್ವೀಜ ಬುಧ ಪಾಡ್ಯಲು ಅನುಭವಮೃತದ ಪುಸ್ತಕ ಬರವುದಕ್ಕೆ ಶುಭಮಸ್ತು||

ಸೂಚನೆ|| ವ್ಯಾಸಮುನಿಪತಿ ಸುಖಮುನಿಗೆ ಸಂ
ತೋಷದಿಂದ ತತ್ವಬೋಧೆಯ
ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ

ಪದನೂ|| ಶ್ರೀಮದನುಪಮತೇಜ ನತಜನ
ಕಾಮಿತಾರ್ಥಫಲಪ್ರದಾಯಕ
ಸೋಮಶೇಕರ ಸುರಮುನೀಂದ್ರಾರ್ಚಿತಪದಾಂಬೋಜಾ
ಸಾಮಗಾನಾಪ್ರಿಯ ಸದಾಶಿವ
ವಾಮಬಾಗಾಶ್ರಿತ ಭವಾನೀ
ಪ್ರೇಮ ಶ್ರೀಗಿರಿ ಮಲಿಕಾರ್ಜುನ ಸಲಹು ಮೂಜಗವಾ ||೧||

ಅಂತ್ಯ : ದೇವ ಜಯ ಜಯ ಭಕ್ತನಿಕರವ
ಕಾವ ಜಯ ಜಯ ಸಕಲ ನಿರ್ಜರ
ದೇವ ಜಯ ಜಯ ಜನಾರ್ದನ ಬಂಧು ಜಯ ಜಯತೂ
ಪಾವಕಾಂಭಕ ಫಣಿವಿಭೂಷಣ
ಕಾಮಮರ್ದನ ಸಕಲ ಲೋಖರ
ಜೀವರಂತರ್ಯಾಮಿ ಸಲಹುಗೆ ಮಲ್ಲಿಕಾರ್ಜುನನೇ ||೩೦||
ಇತೀ ಶ್ರೀಮತ್ಪರಮಹಂಸ್ಪ ಪರಿವ್ರಾಜಕಾಚಾರ್ಯ ಸಹಜಾನಂಧ ಪದ ಕಮಲಭೃಂಗಾಯಮಾನ ಸಹವಾಶಿ ಮಹಲಿಂಗ್ಗ ರಚಿತಮಪ್ಪ ಅನು ಭವಾಮೃತವೆಂಬ ಗ್ರಂಥದಲಿ ನಿರ್ಗುಣರಾಧನೆ ಮಲಿಕಾರ್ಜುನ ಸ್ತುತಿ ಪ್ರಕರಣ ಯೇಕಾದಶೋಧ್ಯಾಯಃ|| ಅಂತ್ರೂ ಸಂಧಿ ೧೧ಕಂ ಪದನು ೮೮೩ಕಂ ಮಂಗಳ ಮಹಾಶ್ರೀ

ವಿಷಯ : ವೇದಾಂತ ತತ್ತ್ವಗಳು

ವಿಶೇಷ : ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಜ್ಞಾನಸಿಂಧುವೆಂಬ ಇನ್ನೊಂದು ಕೃತಿ ಇದೆ.

—ಕೆಆರ್‌ಎಸ್

62

ಕೆ. ೧೩೮೩/೧ **ಅನುಭವಾಮೃತ** ಭಾಮಿನೀಷಟ್ಪದಿ

೧೪.೫" × ೨.೧" ಮಹಲಿಂಗರಂಗ ಸು. ೧೬೭೫

೧-೩೦ ಪತ್ರ ೧೩ ಪಂಕ್ತಿ ೮೬ ಅಕ್ಷರ

ಆದಿ : ಅನುಭವಾಮೃತವ ಬರವದಕ್ಕೆ ನಿರ್ವಿಘ್ನಮಸ್ತು||

ಪಲ್ಲವ॥ ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲಿ ತತ್ವಬೋಧೆಯು
ಲೇಸಿನಲಿ ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ
ಪದ॥ ಶ್ರೀಮದ ..................
.......... ರ ಮುನೀಂದ್ರಾರ್ಚಿತ ಪದಾಂಬೋಜಾ
ಸಾಮಗಾನಪ್ರಿಯ ಸದಾಶಿವ
ವಾಮಭಾಗಾಶ್ರಿತ ಭವಾನಿ
ಪ್ರೇಮ ಶ್ರೀಗಿರಿ ಮಲ್ಲಿಕಾರ್ಜುನ ಸಲಹು ಮೂಜಗವಾ ॥೧॥

**ಅಂತ್ಯ :** ಸರ್ವ ಲೋಕಾಧ್ಯಕ್ಷ ಜಯಜಯ
ಸರ್ವ ಲೋಕಾಭಾವ ಜಯಜಯ
ಸರ್ವಮಂಗಳೆಯರಸ ಜಯಜಯ ಸರ್ವ ಸರ್ವೇಶಾ
ಗರ್ವಿತಾಸುರಮಥನ ಜಯಜಯ
ದುರ್ವಿದಗ್ಧದುರಾಪ ಜಯಜಯ
ಪರ್ವತಾಧಿಪ ಮಲ್ಲಿಕಾರ್ಜುನದೇವ ಜಯ ಜಯತೂ ॥೨೯॥
ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯ ಸಹಜಾನಂದ ಗುರುವರಿಯ ಪಾದಕಮಲಭ್ರುಂಗಾಯಮಾನ ಸಹವಾಸಿ ಮಹಲಿಂಗರಂಗ ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆ ಮಲ್ಲಿಕಾರ್ಜುನ ಸ್ತುತಿ ಪ್ರಕರಣಂ ಯೇಕಾದಶ ಸಂಧಿ ೧೧ಕ್ಕಂ ಪದ ೮೩೦ಕ್ಕಂ ಮಂಗಳಮಹಾಶ್ರೀ

**ವಿಷಯ :** ವೇದಾಂತ ತತ್ತ್ವ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಅನುಭವ ಸಾರಸೂತ್ರ, ಪರಮಾರ್ಥಗೀತೆ ಇತ್ಯಾದಿ ಒಟ್ಟು ಐದು ಕೃತಿಗಳಿವೆ.

—ಕೆ ಆರ್ ಎಸ್

## 63

| ಕೆ. ೧೬೦೦ | **ಅನುಭವಾಮೃತ** | ಭಾಮಿನೀಷಟ್ಪದಿ |
|---|---|---|
| ೫.೭″ × ೧.೯″ | ಮಹಲಿಂಗರಂಗ | ಸು. ೧೬೭೫ |
| ೬-೪೯ ಪತ್ರ | ೧೧ ಪಂಕ್ತಿ | ೩೪ ಅಕ್ಷರ |

**ಆದಿ :** ಜನ್ಮಂಗಳಿಂದಲಿ ತೊಳಲುವೀ ಪ್ರಾ
ಣಂಗಳಾತುಮನೆಂದು ಬರಿದೇ ಭಂಗಬಟ್ಟೆದಕೆ
ಕಂಗೆಡುತ ಕಳವಳಿಸಿ ತನುವನು
ಹಿಂಗದಾತುಮನಳಿದನೆಂದೇ
ಸಂಗರಹಿತಾತ್ಮನಲಿಯಾರೋಪಿಸುವರಕಟೆಂದ ॥೬॥

**ಅಂತ್ಯ :** ಚಾಪಲತೆಯುಳಿದಂತರಂಗದ
ತಾಪವಡಗಿ ಮನೋನುರಾಗದ
ದೀಪವನು ಬೆಳಗಿದನು ಸಹಜಾನಂದ ಗುರುಪದಕೆ

ಭೂತಪತಿ ಭುವನೇಶ ಭೈರವ
ಮಾತರೀಶ್ವಾಸನ ವಿಭೂಷಣ
ವೀತಿಹೋತ್ರ ವಿವಸ್ವದಾಮೃತ ಮರೀಚಿಲೋಚನನೇ
ಪ್ರೇತನಿಲಯನಿವಾಸ ನಿಗಮಾ
ತೀತ ನಿತ್ಯಾನಂದ ಗಿರಿಜಾ
ಪ್ರೀತ ಶ್ರೀ ಗಿರಿನಾಥ ರಕ್ಷಿಸು ಜಗವನಗಚಾಪಾ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯ ಸಹಜಾನಂದ ಗುರುವಾರ್ಯ ಪಾದಕಮಲಭೃಂಗಾಯಮಾನ ಸಹವಾಸಿ ಮಹಲಿಂಗರಂಗ ವಿರಚಿತ ದನುಭವಾಮ್ರುತ ಗ್ರಂಥದಲ್ಲಿ ಜೀವತ್ರಯ ಪ್ರಕರ್ಣ ಸಂಧಿ ೯ಕ್ಕಂ ಮಂಗಳ ಮಹಾಶ್ರೀ

**ವಿಷಯ :** ವೇದಾಂತ.

**ವಿಶೇಷ :** ಅಸಮಗ್ರ. ಬರಹ ಸುಂದರ. ಈ ಗ್ರಂಥವಾದ ಮೇಲೆ ಸಂಸ್ಕೃತದ ಭಗ ವದ್ಗೀತೆಯ ಅಸಮಗ್ರ ಕೃತಿಯೊಂದಿದೆ.

—ಕೆಆರ್‌ಎಸ್

## 64

| ಕೆ. ೧೭೦೯ | **ಅನುಭವಾಮೃತ** | ಭಾಮಿನೀಷಟ್ಪದಿ |
|---|---|---|
| ೧೦.೧″ × ೨″ | ಮಹಲಿಂಗರಂಗ | ಸು. ೧೭೬೫ |
| ೧-೮೨ ಪತ್ರ | ೧೦ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀಗುರುವೇ ನಮಃ॥ ಅನುಭವಾಂಮ್ರುತ ಪ್ರಾರಂಭಾ॥ XXX ಶಾಲೀ ವಾಹನ ಶಕಾಬ್ಧಾಃ ೧೭೬೪ನೆ ಶುಭಕೃತು ಸಂವತ್ಸರದ ಶ್ರಾವಣ ಬ ೨ ಸೋಮವಾರ ಪ್ರಾರಂಭಾಃ॥ ಸೂಚನೆ
ವ್ಯಾಸಮುನಿ ಶುಕಮುನಿಗೆ ವರ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ
ಶ್ರೀಮದನುಪಮತೇಜ ನತಜನ
ಕಾಮಿತಾರ್ಥಫಲಪ್ರದಾಯಕ
ಸೋಮಶೇಖರ ಸುರಮುನೀಂದ್ರಾರ್ಚಿತ ಪದಾಂಭೋಜ

ಸಾಮಗಾನಪ್ರಿಯ ಸದಾಶಿವ
ವಾಮಭಾಗಾಶ್ರಿತ ಭವಾನೀ
ಪ್ರೇಮ ಶ್ರೀಗಿರಿಮಲ್ಲಿಕಾರ್ಜುನ ಸಲಹು ಮೂಜಗವ ||೧||

**ಅಂತ್ಯ :** ತತ್ವಮಸಿ ವಾಕ್ಯಾರ್ಥವನು ಪರ
ತತ್ವದಿರವನು ಸಕಲಯೋಗ
ಸ್ಫೂರ್ತಿಯನು ಷಡ್ವಿಧ ಸಮಾಧಿಯ ಮನನದಿರವುಗಳ
ಸತ್ಯವಹ ಪರಮಾತ್ಮಪದವನು
ಮಿಥ್ಯಭೇದವನಳಿವ ತೆರನನು
ವಿಸ್ತರಿಸಿ ಪೇಳಿದ ಮಹಾತ್ಮಗೆ ಜಯತು ಜಯ ಜಯತು ||೩||
ಅನುಭವಾಂಮೃತ ಗ್ರಂಥ ಸಂಪೂರ್ನ ಮಂಗಳ ಮಹಾಶ್ರೀ ಶ್ರೀ

**ವಿಷಯ :** ವೇದಾಂತ.

**ವಿಶೇಷ :** ಸಮಗ್ರ, ಪ್ರತಿ ಚೆನ್ನಾಗಿದೆ.

—ಜಿಜಿಎಂ

## 65

ಕೆ. ೧೬೮೭ **ಅನುಭವಾಮೃತ** ಭಾಮಿನೀಷಟ್ಪದಿ

೧೩″ × ೨.೧″ ಮಹಲಿಂಗರಂಗ ಸು. ೧೬೭೫

೧-೭೪ ಪತ್ರ ೯ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀ ರಾಮಚಂದ್ರಾಯ ಗುರುವೇ ನಮಃ|| ಅನುಭವಾಮೃತ ಬರೆವುದಕ್ಕೆ ನಿರ್ವಿಘ್ನಮಸ್ತು
ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲು ತತ್ವಭೋಧೆಯ
ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿದೂ
ಪದನೂ|| ಶ್ರೀಮದನುಪಮತೇಜ ನತಜನ
ಕಾಮಿತಾರ್ಥಫಲಪ್ರದಾಯಕ
ಸೋಮಸೇಖರ ಸುರಮುನೀಂದ್ರಾರ್ಚಿತಪದಾಂಭೋಜಾ
ಸಾಮಗಾನಪ್ರಿಯ ಸದಾಶಿವ
ವಾಮಭಾಗಾರ್ಚಿತ ಭವಾನೀ
ಪ್ರೇಮ ಶ್ರೀಗಿರಿ ಮಲ್ಲಿಕಾರ್ಜುನ ಸಲಹು ಮೂಜಗವಾ ||೧||

**ಅಂತ್ಯ :** ದೇವ ಜಯಜಯ ಭಕ್ತನಿಕರವ
ಕಾವ ಜಯಜಯ ಸಕಲ ನಿರ್ಜರ
ದೇವ ಜಯಜಯ ಜನಾರ್ದನಬಂಧು ಜಯಜಯತು

ಪಾವಕಾಂಬಕ ಫಣಿವಿಭೂಷಣ
ಕಾಮುಮರ್ದನ ಸಕಲ ಲೋಕದ
ಜೀವದಂತ್ಯಾರ್ಯಮಿ ಸಲಹುಗೆ ಮಲ್ಲಿಕಾರ್ಜುನನೇ ॥೩೦॥
ಯಿತೀ ಶ್ರೀಮತ್ಪರಮಹಂಸಾ ಪರಿವ್ರಜಾಕಾಚಾರ್ಯ ಸಹಜಾನಂದ ಗುರುವರ್ಯ ಪದಕಮಲಭೃಂಗಾಯಮಾನ ಸಹವಾಸಿ ಮಹಾಲಿಂಗರಂಗ ವಿರಚಿತ ಅನುಭವಾಮೃತವೆಂಬೊ ಗ್ರಂತದಲ್ಲಿ ನಿರ್ಗುಣಾರಾಧನೆಯ ನಿರ್ಣಯ ಯೇಕೋದಶೋಧ್ಯಾಯ ಸಂಪೂರ್ಣಃ
ಅಂತು ಸಂಧಿ ೧೧ಕಂ ಪದನು ೮೦೨ಕಂ ಮಂಗಳ ಮಹಾಶ್ರೀ ಶ್ರೀ

**ವಿಷಯ :** ವೇದಾಂತ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ, ಶುದ್ಧವಾಗಿದೆ.

—ಜಿಜಿಎಂ

66

ಕೆ. ೧೮೨೫ | **ಅನುಭವಾಮೃತ** | ಭಾಮಿನೀ ಷಟ್ಪದಿ

೧೬.೫" × ೧.೫" | ಮಹಲಿಂಗರಂಗ | ಸು. ೧೬೭೫

೧-೧೦೧ ಪತ್ರ | ೬ ಪಂಕ್ತಿ | ೬೪ ಅಕ್ಷರ

**ಆದಿ :** ಶ್ರೀ ಶಾರದಾ ಗುರು ಗಣೇಭ್ಯಾಯ ನಮಃ॥ XXX ವೇದಾತಃ ಪ್ರಕಟಿತ ಜ್ಞಾನಾನುಭವ ಬರೆವುದಕ್ಕೆ ಆಚಂದ್ರಾರ್ಕ ವಂಶಾಭಿವೃದ್ಧಿರಸ್ತೂ। ಅನುಭವಾಮೃತ। ಭಾಮಿನೀ ಷಟ್ಪದೀ॥
ವ್ಯಾಸಮುನಿ ಶುಕಮುನಿಗೆ ಸೆರೆ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಲು ವಿಸ್ತರಿಸಿ ಪೇಳಿದರಾತ್ಮವಿಧರೊಲಿಯೆ

**ಅಂತ್ಯ :** ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ............ ಯಮಾನ ಸಹವಾಸಿ ಮಹಲಿಂಗರಂಗ ವಿರಚಿತಮಪ್ಪದೇಕಾಂತ ಪ್ರಕಟಿತ ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆಯಲ್ಲಿ........... ಅಧ್ಯಾಯ ೧೧ಕ್ಕಂ ಪದನು ೮೦೫ಕಾಂ ಮಂಗಳ ಮಹಾ ಶ್ರೀಶ್ರಿ XXX ಯುವ ನಾಮ ಸಂವತ್ಸರದ ಭಾದ್ರಪದ........ನಿಗೆ ಬರಕೊಟ್ಟ ಅನುಭವಾಮೃತ

**ವಿಷಯ :** ವೇದಾಂತ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಕೆಲವು ಭಾಗ ತ್ರುಟಿತ. ಕೊನೆಯ ಕೆಲವು ಪತ್ರಗಳು ಅರ್ಥಕ್ಕೆ ಮುರಿದಿವೆ.

—ಎಂಪಿಎಂ

67

ಕೆ. ಎ. ೩೪೪/೩ **ಅನುಭವಾಮೃತ** ಭಾಮಿನೀಷಟ್ಪದಿ

೧೧"×"೭.೮ ಮಹಲಿಂಗರಂಗ ಸು. ೧೬೭೫

೧-೭ ಪತ್ರ ೧೮ ಪಂಕ್ತಿ ೨೦ ಅಕ್ಷರ

**ಆದಿ :** ಅನುಭವಾಮೃತ ಬರೆಯುವುದಕ್ಕೆ ನಿರ್ವಿಘ್ನಮಸ್ತು
ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಲು ವಿಸ್ತರಿಶಿ ಪೇಳಿದನಾತ್ಮವಿದರೊಲಿಯೆ ||ಪ||
ಶ್ರಿಮದನುಪಮತೇಜ ನತಜನ
ಕಾಮಿತಾರ್ಥವರಪ್ರದಾಯಕ
ಸೋಮಶೇಖರ ಸುರಮುನೀಂದ್ರಾರ್ಚಿತ ಪದಾಂಭೋಜಾ
ಸಾಮಗಾನಪ್ರಿಯ ಸದಾಶಿವ
ವಾಮಭಾಗಾಶ್ರಿತ ಭವಾನೀ
ಪ್ರೇಮ ಶ್ರೀಗಿರಿಮಲ್ಲಿಕಾರ್ಜುನ ಸಲಹು ಮೂಜಗವಾ ||೧||

**ಅಂತ್ಯ :** ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕಮಲಭೃಂಗಾಯಮಾನ ಸಹವಾಶಿವಂಶ ಮಹಲಿಂಗರಂಗ ವಿರಚಿತಮಪ್ಪ ಅನುಭವಾಮೃತವೆಂಬ ಗ್ರಂಥದಲ್ಲಿ ಪ್ರಥಮಾಶ್ವಾಸ ಸ್ಸಮಾಪ್ತಃ||

**ವಿಷಯ :** ವೇದಾಂತ

**ವಿಶೇಷ :** ಅಸಮಗ್ರ. ಮೊದಲ ಒಂದು ಸಂಧಿ ಮಾತ್ರ ಇದೆ. ಇದರೊಂದಿಗೆ ಗರುಡಾಚಲ, ಗಿರಿಜಾ ಕಲ್ಯಾಣ, ನಾನಾರ್ಥ ರತ್ನಾಕರ ಮೊದಲಾದ ಇತರ ಏಳು ಗ್ರಂಥಗಳಿವೆ. ೭, ೮ನೆಯ ಪತ್ರಗಳಲ್ಲಿ ಸೃಷ್ಟಿಯ ವಿಚಾರ ಇದೆ.

—ಬಿಎಸ್‌ಎಸ್

68

ಕೆ. ಎ. ೩೪೪/೭ **ಅನುಭವಾಮೃತ** ಭಾಮಿನೀಷಟ್ಪದಿ

೧೧"×೭.೮" ಮಹಲಿಂಗರಂಗ ಸು. ೧೬೭೫

೧-೮೦ ಪತ್ರ ೮೯ ಪಂಕ್ತಿ ೨೦ ಅಕ್ಷರ

**ಆದಿ :** ಅನುಭವಾಮೃತನೆಂನು ಬರೆಯುವದಕ್ಕೆ ಆಯುರಾರೋಗ್ಯ ಐಶ್ವರ್ಯ ಮಸ್ತು||

ಪಲ್ಲವ|| ಕಷ್ಟವಹ ಸಂಸಾರಧರ್ಮವು
ಯಿಷ್ಟವಲ್ಲವಡೆಂದು ತನಯುಗೆ
ಶಿಷ್ಟ ವೇದವ್ಯಾಸಮುನಿಪತಿ ಬೋಧಿಶಿದನೊಲಿದೂ

ಪದನೂ|| ಸರಸಿರುಹಭವ ಶಾರ್ಙಿರುದ್ರೇ
ಶ್ವರ ಸದಾಶಿವರಾವಳೊಬ್ಬಳ
ಚರಣಪೀಠದ ಕೆಳಗೆ ಕರಗಳ ಮುಗಿದುಕೊಂಡಿಹರೂ
ಅರರೆ ತಥಕ್ಕ್ಯಾವನಂಘ್ರಿಗೆ
ಶಿರವ ಬಾಗುವಳಾ ಮಹಾತ್ಮನ
ನರರಗುರಿಗಳೆಂತರಿವರೈ ಶ್ರೀ ಗಿರಿಯಧೀಶ್ವರನಾ ||೧||

ಅಂತ್ಯ : ಸ್ವಾನುಭವ ಮೊದಲಾಗಿ ಬುದ್ಧಿ
ಜ್ಞಾನಿಗಳಿಗಿಂದಧಿಕವದು ಪ್ರ
ಜ್ಞಾನವೆ ಪರಬೊಂಮುವೆನೆ ರುಗ್ವೇದ ಗತವಾಕ್ಯಾ
ಯೂ ನಿಖಿಲದೊಳ ಹೊರಗೆ ಸತ್ಯ
ಜ್ಞಾನ ಸುಖಮಯನಪ್ಪ ಬ್ರಂಹ್ಮವೆ
ತಾನೆನೆಲಥರ್ವಣ ಶಿರೋವಾಕ್ಯದರ್ಥವದೂ ||೫೯||

ವಿಷಯ : ವೇದಾಂತ.

ವಿಶೇಷ : ಅಸಮಗ್ರ. ೧೦ನೆಯ ಸಂಧಿಯಲ್ಲಿ ೫೯ನೆಯ ಪದ್ಯದವರೆಗೆ ಮಾತ್ರ ಗ್ರಂಥವಿದೆ. ೧೩ ಮತ್ತು ೧೬ನೆಯ ಪತ್ರಗಳಿಲ್ಲ. ೭೫ರ ಒಂದು ಕಡೆ ಮಾತ್ರ ಬರವಣಿಗೆಯಿದೆ. ಇದರೊಂದಿಗೆ ಗರುಡಾಚಲ, ಗಿರಿಜಾಕಲ್ಯಾಣ, ಅನುಭವಾಮೃತ, ನಾನಾರ್ಥ ರತ್ನಾಕರ, ಕರ್ಣಾಟಕ ಶಬ್ದಮಂಜರಿ, ಕಬ್ಬಿಗರ ಕೈಪಿಡಿ ಮೊದಲಾದ ಇತರ ಏಳು ಗ್ರಂಥಗಳಿವೆ.

—ಬಿಎಸ್ಎಸ್

## 69

## ಅನುಭವಾಮೃತ

ಮಹಲಿಂಗರಂಗ

ಕೆ. ಬಿ. ೫೨೦ | ೫.೧೦" × ೮" | ೧-೯೨ ಪತ್ರ

ಭಾಮಿನೀಷಟ್ಪದಿ | ಸು. ೧೬೭೫ | ೨೧ ಅಕ್ಷರ

೧೭ ಪಂಕ್ತಿ

ಆದಿ : ವ್ಯಾಸಮುನಿಪತಿ ಶುಕಮುನಿಗೆ ಸಂ
ತೋಷದಿಂದಲಿ ತತ್ವಬೋಧೆಯ
ಲೇಸೆನಲು ವಿಸ್ತರಿಸಿ ಪೇಳಿದನಾತ್ಮವಿದರೊಲಿಯೆ

X X X

ಶ್ರೀ ಗುರುವಿನುಪದೇಶದಿಂದನು
ರಾಗವುದಿಸಲು ರಂಗನಾಥನು
ಯೋಗಿಜನವಹುದೆನಲು ಪೇಳಿದನನುಭವಾಮೃತವಾ ||೨||

X X X

ಸುಲಿದ ಬಾಳೆಯಹಣ್ಣಿನಂದದಿ
ಕಳದ ಸಿಗುರಿನ ಕಬ್ಬಿನಂದದ
ಲಳಿದ ವೃಷ್ಣದ ಹಾಲಿನಂದದಿ ಸುಲಭವಾಗಿರ್ಪಾ
ಲಲಿತವಹ ಕನ್ನಡದ ನುಡಿಯುಲಿ
ತಿಳಿದು ತನ್ನೊಳು ತಾನೆ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನೂ ||೫||

**ಅಂತ್ಯ :** ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದಕನುಲಭೃಂಗಾಯಮಾನ ಸಹವಾಸಿ ಮಹಲಿಂಗರಂಗ ವಿರಚಿತ ಅದ್ವೈತಪ್ರಕರಣ ಅನುಭವಾಮೃತವೆಂಬ ಗ್ರಂಥದಲ್ಲಿ ನಿರ್ಗುಣಾರಾಧನೆಯಂ ಪೇಳ್ದಲ್ಲಿಗೆ ಯೇಕಾದಶೋಧ್ಯಾಯ|| ಪದ ೮೦ಳಕ್ಕೆ ಮಂಗಳಂ. ಅನುಭವಾಮೃತ ಸಂಪೂರ್ಣಂ|| ಶ್ರೀ ಸದ್ಗುರು ಚರಣಾರವಿಂದಾರ್ಪಣಮಸ್ತು|| ಶ್ರೀ ಶ್ರೀ ಶ್ರೀ

**ವಿಷಯ :** ಅಧ್ಯಾತ್ಮಬೋಧೆ.

**ವಿಶೇಷ :** ಗ್ರಂಥಕರ್ತನ ವಿಷಯವನ್ನು ಪ್ರತಿಸಂಧಿಯ ಕೊನೆಯಲ್ಲೂ ಹೇಳಲಾಗಿದೆ. ಬರವಣಿಗೆ ಗುಂಡಾಗಿದೆ. ಅಧ್ಯಾತ್ಮ ತತ್ವವನ್ನು ತಿಳಿಗನ್ನಡಲ್ಲಿ ಹೇಳಿಕೊಂಡು ಹೋಗಿರುವುದೊಂದು ಹೆಗ್ಗಳಿಕೆ.

—ಶ್ರೀನಂತ

## 70

| ಕೆ. ಬಿ. ೬೫೫ | **ಅನುಭವಾಮೃತ** | ಭಾಮಿನೀಷಟ್ಪದಿ |
|---|---|---|
| ೮" × ೯.೮" | ಮಹಲಿಂಗರಂಗ | ಸು. ೧೬೭೫ |
| ೧-೧೩೮ ಪತ್ರ | ೨೦ ಪಂಕ್ತಿ | ೧೮ ಅಕ್ಷರ |

**ಆದಿ :** ........ಶ್ರೀ ಗಿರೀಶಪಾದಪದ್ಮಪ
ರಾಗ........ ಭೃಮರ........
ಭಾಗುಣಾರ್ಣವ.... ಚಂದ್ರ–ವಚೋವಿಚಕ್ಷಣನು
ಶ್ರೀ ಗುರುವಿನುಪದೇಶದಿಂದನು
ರಾಗವುದಿಸಿ...................
ಯೋಗಿಜನವಹುದೆನಲು ಪೇಳಿದನು ಅನುಭವಾಮೃತವ ||೨||

**ಅಂತ್ಯ :** ಸರ್ವ ಲೋಕಾಧ್ಯಕ್ಷ ಜಯ ಜಯ
ಸರ್ವಲೋಕಾಧಾರ ಜಯ ಜಯ
ಸರ್ವಮಂಗಳೆಯರಸ ಜಯ ಜಯ........ ಜಯ ಜಯ
...........................................
...........................................
............................ ದೇವ ಜಯ ಜಯತು ||೨೯||
ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ ಪಾದ ....... ಗಾಯಮಾನ ಸಹವಾಸಿ ಮಹಲಿಂಗರಂಗ ವಿರಚಿತ ಅನುಭವಾಮೃತವೆಂಬ ಗ್ರಂಥದಲ್ಲಿ ಜೀವೈಕ್ಯ ಲಕ್ಷಣ ವರ್ಣನವೆಂಬ ಹನ್ನೊಂದನೆಯ ಅಧ್ಯಾಯ ಸಂಪೂರ್ಣ ಮಂಗಳ ಮಹಾಶ್ರೀ|| ಅಂತು ಸಂಧಿ ೧೧ ಕ್ಕಂ ಪದನು ೮೦೫ಕ್ಕಂ ಮಂಗಳ ಮಹಾಶ್ರೀ||

**ವಿಷಯ :** ವೇದಾಂತ ಮತ್ತು ಲೋಕಾನುಭವ.

**ವಿಶೇಷ :** ಅತ್ಯಂತ ಶಿಥಿಲ ಪ್ರತಿ. ಸಮಗ್ರ ಕೃತಿ. ಮೋಡಿ ಅಕ್ಷರ. ಹಾಳೆಗಳನ್ನು ಹುಳುಗಳು ಬಹಳವಾಗಿ ತಿಂದಿವೆ.

—ಎಂಪಿಎಂ

## 71

ಕೆ. ೧೩೩೯/೨ **ಅನುಭಾವ ಷಟ್‌ಸ್ಥಲದ ವಚನಗಳು** ವಚನ
೧೦.೪" × ೧.೮" ಚೆನ್ನಬಸವಣ್ಣ ಸು. ೧೧೬೦
೧-೭೫ ಪತ್ರ ೮ ಪಂಕ್ತಿ ೬೦ ಅಕ್ಷರ

**ಆದಿ :** ಶ್ರೀ ಸಿದ್ಧೇಶ್ವರನ ಚರಣಾರವಿಂದವೆ ಗತಿ|| XXಚೆನ್ನಬಸವೇಶ್ವರ ದೇವರೂ ನಿರೂಪಿಸಿದ ಅನುಭಾವ ಷಡುಸ್ಥಲದ ವಚನಂಗಳೂ|| ಆ ವಚನಂಗಳ ಸ್ಥಳಕುಳವ ಹೇಗೆಂದು ಶ್ರೀ ಗುರುರಾಯಂಗೆ ಶಿಷ್ಯ ಬಿನ್ನೈಸಿದ ಬಿನ್ನಹ|| ಕಂಥ||
ಆಚರಣೆಯು ಸ್ಥಲಸರಿ
ದಾಚರಿಸಲ್ಬಾರದಾಗಿ ಅನುಭಾವಸ್ಥಲದ
ಸೂಚನೆಯುನೆತ್ತಿ ಯೆನ್ನೊಳೂ
ಯೋಚಿಸು ಸದ್ಗುರುವೆ ಬಸವನ ಸಂಗ ಸದಾಶಿವ

**ಅಂತ್ಯ :** ಆಲಿಂಗಸ್ತಲದೊಳೂ ವಿವರಿಸಿ| ಯಾಜಾಜಿ:ಲಿಂಗ ಮೂವ್ವತ್ತಾಱು ತೋಱು ಬಸವಸಂಗ ಸದಾಶಿವನ ಬೇರೆನಿಸದೆ ಕೂಡಿದ ಶ್ರೀಗುರುವೆ ||೫|| ಯಿಂತು ಸಪ್ತಮ ಸ್ಥಲಕ್ಕೆ ಸೇರಿಸಿದ ವಚನ ೩೨೩ಕ್ಕಂ ಮಂಗಳ ಮಹಾ ಶ್ರೀ ಶ್ರೀ. ಗ್ರಂಥ ೧೬೫ಕ್ಕಂ ಮಂಗಳ ಮಹಾ|| ಗುರು ರೇವಣ್ಣ ಸಿದ್ಧೇಶ್ವರನ ಪಾದವೆ ಗತಿ|| ಸೋಭಕೃತು ಸಂವತ್ಸರದ ಅಶ್ವೀಜ ಸುದ್ಧ ೧೫ ಮಾಯಾ ಸೋಮ

ವಾರದ ದಿವಸ ಹನ್ನೊಂದು ಗಳಿಗೆ ಚೆನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವಸ್ಥಲ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ:** ವೀರಶೈವ ಸಿದ್ಧಾಂತ

**ವಿಶೇಷ:** ಸಮಗ್ರ. ಇದೇ ಕಟ್ಟಿನಲ್ಲಿ ಭೈರವೇಶ್ವರನ ಕಾವ್ಯವೂ ಇದೆ.

—ಜಿಜಿಎಂ

## 72

ಕೆ. ಬಿ. ೬೨೯/೧ **ಅನುಭಾವ ಷಟ್‌ಸ್ಥಲದ ವಚನಗಳು** ವಚನ

೬.೪" × ೪.೪" ಚೆನ್ನಬಸವಣ್ಣ ೧೧೬೦

೧-೫೭ ಪತ್ರ ೧೩ ಪಂಕ್ತಿ ೩೪ ಅಕ್ಷರ

**ಆದಿ:** ಚೆಂನಬಸವರಾಜದೇವರು ನಿರೂಪಿಸಿದ ಅನುಭಾವ ಷಡುಸ್ಥಲದ ವಚನ. ಯಾ ವಚನದ ಸ್ಥಳ ಕುಳ ಹೇಗೆಂದು ಶ್ರೀ ಗುರುರಾಯಂಗೆ ಶಿಷ್ಯನು ಬಿಂನೈಸಿದ ಬಿಂನಹಂ

ಕಂದ|| ಆಚರಣೆಯು ಸ್ಥಲವರಿದವ
ರಾಚರಿಸಲ್ಪಲ್ಲರಾಗಿ ಅನುಭವಸ್ಥಲದಾ
ಸೂಚನೆಯನೆತ್ತಿ
ಯೋಚಿಸಿದ ಸದ್ಗುರುವೆ ಬಸವಸಂಗ ಸದಾಶಿವ
ಯೆಂದು ಗುರು ನಿರೂಪಣೆ||

X X X

ಇ ಯಿಂನು ಬಸವರಾಜದೇವರು ನಿರೂಪಿಸಿದ ಆಚರಣೆಯು ಸ್ಥಲದ ವಚನಾ|| ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ. ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ. ಮೆಲ್ಲಮೆಲ್ಲನೆ ಪ್ರಸಾದಿಯೆನಿಸಿಕೊಂಬೆ. ಮೆಲ್ಲಮೆಲ್ಲನೆ ಪ್ರಾಣಲಿಂಗಿಯೆನಿಸಿಕೊಂಬೆ. ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ. ಮೆಲ್ಲ ಮೆಲ್ಲನೆ ಷಡುಸ್ಥಲವ ಮೀರಿ ನಿರವಯ ಸ್ಥಲವನೆಯ್ದುವೆ ಕೂಡಲ ಸಂಗಮ ದೇವಾ ||೧||

**ಅಂತ್ಯ:** ಷಡುರಸಾಂನ ಕಾಲೇಷು| ನದದ್ಯಂ ಜಂಗಮಂ ಯದಿ| ರಸಸ್ನೇಹಮಿತಿಂ ಪ್ರೋಕ್ತಂ| ನಭೋಕ್ತ್ರೋ ಜಿಂಹ್ವೆ ಚೋರತಾ ||೪|| ತೈಲಾಭ್ಯಾಂಗ ಕಾಲೇಷು ನದದ್ಯಂ ಜಂಗಮಂ ಯದಿ| ರತಿಸಂಗಮಿತಿ ಪ್ರೋಕ್ತಂ ಭುಕ್ತಾ ಚಾರ ಚೋರಕಂ ||೬|| ಯಿಂತೀ ಅನುಭಾವ ಷಡುಸ್ಥಲ ಶಿವಾರ್ಪಣಮಸ್ತು ಮಂಗಳ ಮಹಾ ಶ್ರೀ||

**ವಿಷಯ:** ವೀರಶೈವ ತತ್ವ.

**ವಿಶೇಷ:** ದಪ್ಪಕಾಗದ. ಪತ್ರದ ಎರಡು ಕಡೆಗಳಲ್ಲಿ ಬರಹವಿದೆ. ಇದೇ ಪುಸ್ತಕದಲ್ಲಿ ದಶವಿಧ ಪಾದೋದಕ ಲಕ್ಷಣದ ವಚನ, ಕದಂಬ ವಚನವೆಂಬ ಮತ್ತೆರಡು ಕೃತಿಗಳಿವೆ. ಆರಂಭ ಪತ್ರದ ಅಡಿಭಾಗದಲ್ಲಿ " ಯಿಾ ಪುಸ್ತಕ ಮಸಿಬಿನಾಳ ಮಠಪತಿ ಸೊಲಬಯ್ಯನ ಪುಸ್ತಕವೂ " ಎಂದು ಬರೆದಿದೆ.

—ಕೆಆರ್ಎಸ್

## 73

| ಕೆ. ೮೫೩/೨ | **ಅಪರಾಜಿತ ಶತಕ** | ವೃತ್ತ |
|---|---|---|
| ೧೩" × ೧" | ರತ್ನಾಕರ | ೧೮೦೦ |
| ೧೭-೨೮ ಪತ್ರ | ೭ ಪಂಕ್ತಿ | ೫೨ ಅಕ್ಷರ |

**ಆದಿ:** ಗಣಾಧಿಪತಯೇ ನಮಃ ಶ್ರೀ ನಂಜುಂಡೇಶ್ವರಾಯ ನಮಃ
ಶ್ರೀ ಕುಲನೂಪ್ತ ಗೋತ್ರಮುಮುಲಾಂಗನುತಂದ್ರತಿ ಸಮ್ಯಗಾಯುಯ ವಿ
ದ್ಯಾಕುಶಲತ್ವಮಾದೊಡಮದೆನ್ನದಿದನ್ಯಮೆನುತ್ತೆ ಕಂಡು ನಿ
ರ್ವ್ಯಾಕುಲನಾಗಿ ಯೆಲ್ಲರ ನಗಲ್ದು ಮಣಿತ್ರಯ ಸಂಪದಕ್ಕೆ ರ
ತ್ನಾಕರನಾದನಂ ತವ ಕೃಪಾತ್ಮನಲಾ ಅಪರಾಜಿತೇಶ್ವರಾ ||೧||

**ಅಂತ್ಯ:** ಅಳಿದಿಜುಸಿದ್ದುರ್ಗದಂ ಕುಡುವನಂತೆ ಪರ್ವಣ್ಣುಡಿಯಿಂದೆ ಭವ್ಯರಂ
ತಿಳಿಪುವ ಸುಂಮುನಿಪ್ರ್ವ ನಿಜಕಾರ್ಯಕ್ಕೆ ಬೊಲುವ್ವಿರ್ಗಯೊಳ್
ಪೊಳೆವ ವಿವಿಕ್ತಮಂ ಪುಗುವ ಬೈತನಿಧಾನವನೀಪಾತನಂ
ತೊಳಗನೆ ಕಾಣ್ಬನೆ ಸಫಲ ಜನ್ಮನಲಾ ಅಪರಾಜಿತೇಶ್ವರಾ ||೧೦೪||

**ವಿಷಯ:** ನೀತಿ ಮತ್ತು ತತ್ವಗಳನ್ನು ಹೇಳಿದೆ.

**ವಿಶೇಷ:** ಗ್ರಂಥ ಸಂಪೂರ್ಣವಾಗಿದೆ. ಶುದ್ಧವಾಗಿದೆ. ಓಲೆಯನ್ನು ಹುಳು ತಿಂದಿದೆ.

—ಎಂಸಿಪಿ

## 74

| ಕೆ. ಬಿ. ೬೫೧/೨ | **ಅಪರಾಧ ಸ್ತೋತ್ರ** | ಶ್ಲೋಕ, ಟೀಕು, ಭಾಮಿನೀ |
|---|---|---|
| ೬.೫" × ೮" | ಜ್ಞಾನಬೋಧ | ? |
| ೪೩-೪೮ ಪತ್ರ | ೧೬ ಪಂಕ್ತಿ | ೧೯ ಅಕ್ಷರ |

**ಆದಿ:** ಶ್ರೀ ಗುರು ಮುರುಗೇಂದ್ರಾಯ ನಮಃ|| ಅಪರಾಧ ಸ್ತೋತ್ರ ಲಿಖ್ಯತೆ
||ಭಾಮಿನೀ||

ಜಯತು ಗಣಪತಿ ಜ್ಞಾನದಿನಮಣಿ
ಜಯತು ಸರಸ್ವತಿ ದಾಸ್ವಿಲಾಸಿನಿ
ಜಯತು ಸದ್ಗುರು ಶ್ರುತಿಶಿರೋಮಣಿ ಕರುಣವಾರುಧಿಯೆ

ಜಯತು ಕವಿವರ ವ್ಯಾಸ ಶುಕಮುನಿ
ಜಯತು ವಾಲ್ಮಿಕರುಷಿಗಳಾಗ್ರಣಿ
ಜಯತು ಶಂಕರಭಾರ್ತಿ ಗುರುವಿನ ಪಾದಕ್ಕೆರಗುವೆನು ||೧||

**ಅಂತ್ಯ :** ವಂದು ಶ್ಲೋಕಕೆ ಒಂದು ಪದವನು
ತಂದೆ ಗುರುಃಗೋವಿಂದನಾಜ್ಞೆಲಿ
ಕಂದ ಹೇಳಿದ ಜ್ಞಾನಬೋಧನು ಸ್ತೋತ್ರ ಅಪರಾಧ
ಕುಂದು ಹೆಚ್ಚನು ಯೇನ ನೋಡದೆ
ಮಂದಮತಿ ಹೇಳಿಹೆನು ನಾನಿ
ವಿಂದು ಕೇಳ್ವದು ಸಾಧು ಸಂತ್ತರು ಪರಮ ಹರುಷದಲಿ ||೬೫||
||ಶ್ರೀ ಶ್ರೀ||

**ವಿಷಯ :** ಶ್ರೀ ಶಂಕರಾಚಾರ್ಯ ವಿರಚಿತ ದೇವ್ಯಪರಾಧ ಸ್ತೋತ್ರದ ಕನ್ನಡ ಪದ್ಯಾನುವಾದ.

**ವಿಶೇಷ :** ಸಮಗ್ರ. ಮೋಡಿ ಅಕ್ಷರ. ಇದರೊಂದಿಗೆ 'ಸದಾಶಿವ ನೀತಿ' ಮುಂತಾದ ಕೃತಿಗಳಿವೆ.

— ಎಂಪಿಎಂ

## 75

ಕೆ.ಬಿ. ೫೩೬ | **ಅಪ್ರಸ್ತುತ ಪ್ರಶಂಸಾ ಶತಕ** | ವೃತ್ತ
೮.೩″ × ೬.೭″ | ಶಾಲ್ಯದ ಕೃಷ್ಣರಾಜ | ಸು. ೧೭೫೮
೧-೧೮ ಪತ್ರ | ೨೨ ಪಂಕ್ತಿ | ೧೯ ಅಕ್ಷರ

**ಆದಿ :** ಶ್ರೀ ಲಕ್ಷ್ಮೀವಲ್ಲಭಾಯ ನಮಃ
ಶ್ರೀ ಮದ್ವರ್ನವಿಲಾಸದಿಂ ದಳಗಳಿಂ ಸತ್ಕರ್ನಿಕಾ ಕೇಸರ
ಪ್ರಾಮುಖ್ಯಸ್ಥಿತ ಗಂಧ [—] ಲಗಳಿಂಗುಮಂಗಳಿಂ ವೃಂತದಿಂ
ಪ್ರೇಮಂ ಪುಟ್ಟೆಸುತಿರ್ದೊಡಕ್ಷಿಯುಗಳಕ್ಕಂ ಶಾಲ್ಮಲೀಭೂಜ ಮೇ
ಣಾ ಮಾಕಂದಮಿದಲ್ಲ ಕೀರ ಭಗವೇನುಂಡೆನ್ನ ಪ್ರಾಣೇಶ್ವರಾ ||೧||

**ಅಂತ್ಯ :** ತಾರಾಮಾರ್ಗ ಸುಮಾರ್ಗ ದಿವ್ಯಭ ಮಹಾಭಿ ಪ್ರಾಕರಣ್ಯಗಳಾ
ಧಾರಾ ಭೃದ್ಗಿರಿ ತಾಮಸಸ್ಖಲನಮಂ ಸಾರುತ್ತಿರಲ್ದುಸ್ತರ
ಕ್ಷಾರಾಂಭೋಧಿಯಲೀ ಪುರಾಣ ಕರಿಯಂ ವೇಲಾಂತಿಕಂ ಸಾರ್ಚಲಿ
ನ್ನಾರುಂಟೈ ಪೃಷದಶ್ವ ನಿನ್ನ ಪೊರತಾಗಿಂತೆನ್ನ ಪ್ರಾಣೇಶ್ವರಾ ||೧೦೧||
ಪ್ರಸ್ತುತ ಪ್ರಶಂಸಾಯುಮನವದ್ಯಂ ಕುಳಶಯಂ।
ಕೃಷ್ಣಾಕ್ಯೇನಾರ್ದಿತಂ ಸಯ್ಯುಪ್ರಾಣಿ ....ಪದದ್ವಯೋ
ಶ್ರೀ ಶ್ರೀ ಶ್ರೀ ರಂಗನಾಥಸ್ವಾಮಿನೇ ನಮಃ

**ವಿಷಯ :** ನೀತಿ, ವೇದಾಂತ

**ವಿಶೇಷ :** ಈ ಗ್ರಂಥವು ಸಂಸ್ಥೆಯ ಕೆ. ೧೨೭ನೆ ಪುಸ್ತಕದ ಮೇಲೆ ಕಾಪಿ ಆಗಿದೆ. ಪ್ರತಿ ಪತ್ರದ ಒಂದೇ ಕಡೆ ಬರವಣಿಗೆಯಿದೆ. ಇದಕ್ಕೆ ಬೈಂಡ್ ಇಲ್ಲ. ಕಾಗದದ ಹೊದಿಕೆ ಮಾತ್ರ ಇದೆ.

—ಎಸ್‌ಬಿ

## 76

| | | |
|---|---|---|
| ಕೆ. ೧೨೪೭ | **ಅಬ್ಧಿಕಲ್ಪ** | ಕಂದ |
| ೮.೮" × ೧.೮" | ? | ? |
| ೨೩ ಪತ್ರ | ೭ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀಗುರು ಸ್ವತಂತ್ರ ಸಿದ್ಧಲಿಂಗಾಯ ನಮಃ ||ಅಬ್ಧಿಕಲ್ಪಾ||
ಕರುಣಿಸು ವೃಷಭಾರೂಢನೆ
ಕರುಣಿಸು ರಘುಪತಿಯು ಸುರನ ದೇಶರಿಥಾಧೀಶನೆ
ಕರುಣಿಸು ನಿಜಪದವೀವನೆ
ಕರುಣಿಸು ದತತ್ರಯುದ ಪುರದಾಧೀಶನೆ ||೧||

X X X

ವೃಷ್ಟಿಯ ಚಿನ್ನವನರಿದಾಕ್ಷಣ
ದೃಷ್ಟವ ಕೇಳ್ಸಿಯು ಅಬ್ಧಿಕಲ್ಪದ ಫಲಗಳ
ಶ್ರಿಷ್ಟಿಯಿನೆ ತಂದು ಪೇಳುವೆ
ಕಟ್ಟಳಿಗಳ ವರದನಾಗಾ ಜಿನಪದಭೃಂಗಾ ||೩||

**ಅಂತ್ಯ :** ಸುರ ವಾಯುವುಗ್ನಿ ಧೂಮನು
ಪುರಗಳನಿಲಜನ ಮಿಂಚು ಮಿಂಚಲು ಸೀಗದಿ
ಹರುಷದಿ ದೆಶೆಗುಡಿಯಿರಲು
ಧರೆಯೊಳು ನೆರೆವೃಷ್ಟಿಯೆಂಬ ಜಿನಪದಭೃಂಗಾ ||೨೨೨||

**ವಿಷಯ :** ಮಳೆಯ ವಿಚಾರ

**ವಿಶೇಷ :** ಅಸಮಗ್ರ. ಪ್ರತಿ ಅಶುದ್ಧ.

—ಜಿಜಿಎಂ

## 77

| | | |
|---|---|---|
| ಕೆ.ಎ. ೧೦೭೯ | **ಅಬ್ಬಲೂರು ಚರಿತೆ** | ಸಾಂಗತ |
| | ಶಾಂತನಿರಂಜನ | |
| ೭" × ೧.೫" | | ? |
| ೧-೬೨ ಪತ್ರ | ೯ ಪಂಕ್ತಿ | ೨೫ ಅಕ್ಷರ |

**ಆದಿ:** ಶ್ರೀ ಗಂಗಾಧರ ಗುರುಬ್ಯೋ ನಮಃ
ಪಿಂಡ ಶತಬಾಂಡಲಕ್ಕಾಗಿ ಕದ್ಯುಕ್ತನಂ
ಸಂದ ಸರಣಿಯ ಮರಳಿ ಯೌವ್ವನಾರ್ಥನ ಮಾಡಿ
ಕೆಂದು ಭವ್ಯರ ಪಡೆಯಂ ಜಿನನರ್ಥತಾಣಕ್ಕೆ
ನಂದಿವಾಹನ ದೇವನ ತಂದು ಪೀಠಂಗೊಳಿಸಿ ರಾಮನ ನೆರೆನಿಲಿಸಿ
ಒಂದು ರೂಪಿನೊಳಿರ್ದು ಮೂರು ನಾಮನ ತಾಳ್ದು
ಬಂದು ಗೌತಮಪುರದಿ ನಿಂದ ಶ್ರೀಗುರು ವಿನಾಯಕವಂ ಪೇಳ್ವೆನೊಲಿದು
ತಾವರೆಗಯ್ಯನ ತಾಯಯ್ಯನಳಿಯನ
ಪ್ರಿಯಾಳ ಮಗನನೊಲಿದನ
ಅವ್ವನ ಮಗಳ ಗಂಡಗೆ ಪಾಶುಪತವಿತ್ತ
ದೇವನ ಪಾದಕೊಂದಿಸುವೆ

**ಅಂತ್ಯ:** ಈ ಪುಣ್ಯ ಕಥೆಯ ಕೇಳಿವ ಮನುಜರಿಗೆಲ್ಲ
ಪಾಪವಿಮೋಚನವಹುದು
ಕಾಪಾಲಿಯೊಲಿದು ಸಾಲೋಕ್ಯಪದವನೀವ
ಕಾಪುರುಷನವೊಲಿದಪರೆ
ಅಂತು ಸಂಧಿ ೫ಕಂ ಪದಮು ೫೦೫ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ.
ಶ್ರೀಮದ್ವಿಜಯಾಭ್ಯುದಯ ಶಾಲಿವಾಹನ ಶಕವರುಷ ಮನ್ಮಥ ಸಂವತ್ಸರದ
ವೈಶಾಕ ಬ ೧೨ ಚಂದ್ರವಾರಕ್ಕೆ ಅಬ್ಬಲೂರು ಚರಿತ್ರೆ ಮಂಗಳ ಮಹಾಶ್ರೀ

**ವಿಷಯ:** ಏಕಾಂತರಾಮನ ಕಥೆ

**ವಿಶೇಷ:** ಪ್ರತಿಯ ಅಂಚು ಮುರಿದಿದೆ. ೪೪–೪೮ರ ವರೆಗೆ ಓಲೆಗಳಿಲ್ಲ. ೫೦ನೆಯ ಓಲೆಯಿಂದ ಮುಂದೆ ಪತ್ರಸಂಖ್ಯೆ ಹಾಕಿಲ್ಲ.

—ಹಕರಾ

## 78

ಕೆ. ೧೧೬೦/೩ **ಅಭವ ಕಂದ** ಕಂದ

೧೫.೫″ × ೧.೨″ ? ?

೫೨ನೆಯ ಪತ್ರ ೧೦ ಪಂಕ್ತಿ ೧೧೨ ಅಕ್ಷರ

**ಆದಿ:** ಅಭವಕಂದ ಬರವುದಕ್ಕೆ ಶುಭಮಸ್ತು||

ಕಂದ|| ಶ್ರೀ ಸದಾಶಿವ ಮಹೇಶ್ವರ
ಶಾಶ್ವತ ಸರ್ವಗ್ನ ಗುರುವರಾರಣ್ಯ ಕೃಪಾಕರ
ಯಿಾಶಾ ನೀನೆನ್ನಯ ನಿಜಕರ
ವಾಸಾ ಸರ್ವೇಶ ರಕ್ಷಿಸೆನ್ನನು ಅಭವಾ ||೧||

**ಅಂತ್ಯ :** ಉರುಗವೇತಾಳ ಅರಿಗಳು
ಉರಿವಗ್ನಿ ಕೂಪತರ್ಕಯುಮದೂತರುಗಳೂ
ಉರಿಗೊಡ್ಡಿದ ಅರಗಿನಂದದಿ
ಕರಗುವವೀ ಸ್ತೋತ್ರ ಸ್ಮರಣೆಮಾತ್ರದೊಳಭವಾ ||೪೧||
ಅಭವಕಂದ ಸಮಾಪ್ತಿ ಮಂಗಳ ಮಹಾಶ್ರೀ

**ವಿಷಯ :** ವೀರಶೈವತತ್ತ್ವ.

**ವಿಶೇಷ :** ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ವೀರೇಶ್ವರ ಚರಿತ್ರೆ ಮೊದಲಾದ ಕನ್ನಡ ಕೃತಿಗಳೂ ಅಪರಾಧ ಸ್ತೋತ್ರ ಮೊದಲಾದ ಸಂಸ್ಕೃತ ಗ್ರಂಥಗಳೂ ಇವೆ.

—ವೈಸಿಬಿ

## 79

ಕೆ. ೧೨೨೧/೧ | **ಅಭಿಧಾನ ವಸ್ತುಕೋಶ** | ಕಂದ ವೃತ್ತ ಟೀಕು

೧೧.೯" × ೧.೬" | ನಾಗವರ್ಮ | ಸು. ೧೧೪೫

೧-೧೧೪ ಪತ್ರ | ೮ ಪಂಕ್ತಿ | ೫೦ ಅಕ್ಷರ

**ಆದಿ :** ನಾಗವರ್ಮ ನಿಘಂಟು ಬರವುದಕ್ಕೆ ವಿಘ್ನೇಶ್ವರಂ ನಿರ್ವಿಘ್ನವಂ ಮಾಡಲಿ||
ದೇವಾದಿದೇವನಭವಂ
ಕೇವಲಬೋಧಂ ಪ್ರಬುದ್ಧ........
ಶ್ರೀವಲ್ಲಭ ನಮಗೀಗೆ ಸು
ಖವ್ಯಾಪ್ತಿಯನೊಸೆದು ವರ್ಧಮಾನ ಜಿನೇಂದ್ರಂ||

ಟೀಕು|| ಯೆಲ್ಲಾ ದೇವರಿಗೊಡೆಯನಾದ| ಅಭವಂ| ಸಾವು ಹುಟ್ಟಿಲ್ಲದ| ಕೇವಲ| ಬೋಧಂ| ಜ್ಞಾನವೆ ರೂಪಾದ ಪ್ರಬುದ್ಧತತ್ವಂ| ಅಱಿಯಲ್ಪಟ್ಟ ಸಪ್ತ ತತ್ವಂಗಳನುಳ್ಳ| ಮುಕ್ತಿಶ್ರೀವಲ್ಲಭನು| ಮೋಕ್ಷಲಕ್ಷ್ಮಿಗೆ ವೊಡೆಯನಾದ ವರ್ಧಮಾನ ಜಿನೇಶ್ವರನು| ಯೆಮಗೆ ವೊಲಿದು ಯಿಹಸುಖ ಪರದ ಗತಿಯನೂ ಕೊಡಲಿ ||೧||

**ಅಂತ್ಯ :** ಅನುಬದ್ಧಂ ಪ್ರಾರಬ್ಧದೊ
ಳನುವೃತ್ತಿಯೊಳೆಸಗುಮಿಂನು ಪೂರ್ವೋಕ್ತಿಯಿಮಿಂ
ತೊನದಿರೆ ತತ್ಸಂಬದ್ಧಂ
ವಿನಯಯುತಮಪ್ಪಂತು ಸಕಲಯುತದಿ ನೆಗಳ್ಗಂ||
ಇತಿ ನಾಗವರ್ಮಂ ವಿರಚಿತಮಪ್ಪ ನಾನಾರ್ಥಂ ಸಮಾಪ್ತಃ ಮಂಗಲ ಮಹಾಶ್ರೀ

**ವಿಷಯ :** ಸಂಸ್ಕೃತ ಕನ್ನಡ ನಿಘಂಟು.

**ವಿಶೇಷ :** ಸಮಗ್ರ. ಶಕಟರೇಫವನ್ನು ಬಳಸಿದೆ. ಬರಹ ಚೆನ್ನಾಗಿದೆ. ಗ್ರಂಥದ ಸ್ಥಿತಿ ಉತ್ತಮ. ಈ ಕೃತಿಯ ಅಂತ್ಯದಲ್ಲಿ ಪ್ರತಿ ಮಾಡಿದ ಕಾಲವಿಚಾರಗಳಿವೆ:– " ಶ್ರೀ ಗುರುಬಸವ ಉಮಾಮಹೇಶ್ವರ ವಿಘ್ನೇಶ್ವರ ಸ್ಕಂದ ರೇಣುಕ ದಾರುಕ ಮೊದಲಾದ ದಶದಿಕ್ಕಿನಲ್ಲಿರುವ ಸಕಲ ಪ್ರಮಥರು ಯಿಾ ಪುಸ್ತಕದಲ್ಲಿರಲಿ. ಶಿವಮತದಲ್ಲಿ ಸರ್ವೋತ್ಕೃಷ್ಟವ ಮಾಡಲಿ ಶುಭಕೃತು ಸಂವತ್ಸರದ ಆಶ್ವೀಜ ಬಹುಳ ತ್ರಯೋದಶಿ ಸೋಮವಾರ ಪ್ರಾತಃಕಾಲದಲ್ಲಿ ಬರದು ಸಮಾಪ್ತಿ ಯಾದ ಪುಸ್ತಕಕ್ಕೆ ಜಯ ಮಂಗಲವ ಮಾಡಲಿ ಶಂಭು ಲಿಂಗವು. ಮಳಲಿ ವಂಶದಲ್ಲಿ ಪ್ರಸಿದ್ಧವಾದ ಸಿದ್ಧಲಿಂಗಸಾಮಿಗಳು ಬರದವರು ಉತ್ತಮ ಪುರುಷರು ವೋದಿಕೊಳುವದು." ೧೧ಳನೆಯ ಗರಿಯಲ್ಲಿ ವಿಷಯ ಸೂಚಿ ಯಿದೆ. ಇದೇ ಕಟ್ಟಿನಲ್ಲಿ 'ಶಿವಪೂಜಾ ವಿಧಾನ' ಎಂಬ ಒಂದು ಸಂಸ್ಕೃತ ಕೃತಿಯಿದೆ.

[ಕಹವಸೂ. ಪ್ರಥಮ ಸಂಪುಟ ಪುಟ. ೭೩ ಕ್ರಮಾಂಕ. 66 ನೋಡಿ]

—ಕೆಆರ್‌ಎಸ್

## 80

ಕೆ. ೮೦೨ | **ಅಭಿನವ ದಶಕುಮಾರ ಚರಿತೆ** | ಚಂಪು

೧೩.೬" × ೧.೬" | ಚಾಂಡರಸ | ಸು. ೧೨೧೦

೧-೯೯ ಪತ್ರ | ೯ ಪಂಕ್ತಿ | ೬೮ ಅಕ್ಷರ

**ಆದಿ :** ಶ್ರೀ ಗುರುಭ್ಯೋ ನಮಃ ||ಶುಭಮಸ್ತು||
ಶ್ರೀಯನುದಾರದಿಂದುರದೊಳೊಪ್ಪಿರೆ ತಾಳ್ದ ದಶಾವತಾರಸಂ
ದಾಯಕದಿಂ ವಿರೋದಿಬಲಮಂ ತವೆ ಗೆಲ್ದನುಮನ್ನಿಕಾಯಮಂ
ಸ್ಪಾಯಕ ಸತ್ವದಿಂ ಪೊರೆದಂ ಲೋಕಜನಸ್ತುತಿವೆತ್ತ ಪಂದ
ರಾಯನಭಂಗ ವಿಠ್ಠಲನಲಂಪಿನೊಳೀಗೆಮಗೆ ಪ್ರಸಿದ್ಧಿಯಂ||

X X X

ವರಮಧುಸೂದನಂ ಜನಕನೊಪ್ಪುವ ಮಲ್ಲಿಲೆ ಮಾತೆಯಗ್ರಜಂ
ಸರಸಕವೀಶ್ವರಂ ತನಗೆ ವಲ್ಲಭೆ ಲಕ್ಷ್ಮಿಯೆನಿಪ್ಪ ಪೆಂಪು ಬಿತ್ತ
ತ್ತರಿಸುಬಡಗ್ಗಳಂ ನಿಜವೆನಲ್ಕೆಜಿತವಂ ಹರಿಪಾದ ಶೋಣಪಂ
ಕರುಹ ಮಧುವ್ರತಂ ಸುಕವಿ ಚೌಂಡರಸಂ ಕವಿರಾಜಶೇಖರಂ ||೧೪||

**ಅಂತ್ಯ :** ವೆಸರಂ ಪೆತ್ತರ್ದೆವಾ ಶ್ರೀಪತೀ ||೬೮|| ವ|| ಮತ್ತಮಂ ಧರ್ಮ್ಮಕರ್ಮ್ಮವಂ ........ಯನೊಲ್ದು ಹೂಸಿ ತೊವಲಂ ಪೊದರ್ಾವಗಂ ಕೊಡನಂಗಯ್ಯೊ ಳ್ತಾಳ್ದಿಹ ಲೋಕದಿಂ ಪೂಜಗೆ ಬಪ್ಪಾಕಾರವಂ ತಾಳ್ದಿಗೆಯ್ಯರ್ಕೇಳವರಿಂದ್ರ ನಾರಿಯರ ವಿಕ್ಷೋಜಾತಸಂಹಂಗದಿಂ ಸಯ್ಯಾ ಕಾಂತಿಯನಾವು........

**ವಿಷಯ :** ದಂಡಿಕವಿಯ ಸಂಸ್ಕೃತ ಕಾವ್ಯ ದಶಕುಮಾರ ಚರಿತ್ರೆಯ ಕನ್ನಡ ಕಥೆ

**ವಿಶೇಷ:** ಹದಿನಾಲ್ಕನೆಯ ಆಶ್ವಾಸದಲ್ಲಿ ೬೮ನೆಯ ಪದ್ಯದವರೆಗೆ ಇದೆ. ಅಕ್ಷರಗಳು ಸ್ಫುಟವಾಗಿವೆ. ಶಕಟರೇಫವನ್ನು ಬಳಸಿದೆ. ಅಲ್ಲಲ್ಲಿ ಪತ್ರಗಳಿಗೆ ಹುಳು ಹೊಡೆದು ರಂಧ್ರಗಳಾಗಿವೆ. ಪ್ರತಿಯು ಅಷ್ಟೇನೂ ಉತ್ತಮ ಸ್ಥಿತಿಯಲ್ಲಿಲ್ಲ. ೧೬ನೆಯ ಪತ್ರವಿಲ್ಲ. ೧೭, ೨೫, ೨೬, ೩೦, ೩೯- ಈ ಕ್ರಮಾಂಕದ ಪತ್ರಗಳು ಮುರಿದು ತುಂಡಾಗಿದ್ದು ಬಹುಪಾಲು ಲುಪ್ತವಾಗಿವೆ.

—ಕೆಆರ್‌ಎಸ್

## 81

| | | |
|---|---|---|
| ಕೆ.ಎ. ೪೭೦/೪ | **ಅಭಿನವ ನಿಘಂಟು** | ವಾರ್ಧಕ ಷಟ್ಪದಿ |
| ೮.೧″ × ೧೨.೬″ | ಅಭಿನವ ಮಂಗರಾಜ | ? |
| ೬೩-೮೩ ಪತ್ರ | ೨೬ ಪಂಕ್ತಿ | ೧೭ ಅಕ್ಷರ |

**ಆದಿ:** ಅಭಿನವ ನಿಘಂಟು ಪಲ್ಲ || ಭಾಗುರಿ ಹಲಾಯುಧಂ ಸುಪತಿ ಧನಂಜಯಂ
ನಾಗವರ್ಮಂ ವೈಜಯಂತಿ ವರರುಚಿಯಾದಿ
ಯಾಗಿಯಭಿನವ ಮಂಗರಾಜನುಸುರಿದನಭಿನವಾಭಿಧಾನವನಿಳೆಯೊಳೂ

ಪದನೂ|| ಶ್ರೀಮದನುಪಮ ನಿತ್ಯಾನಂದ ಕೃತ್ಯನು
ದ್ದಾಮ ಸಂಸ್ತುತ್ಯನುಂ ನತಶುದ್ಧ ಸತ್ಯನಭಿ
ಲಾಮ ರಾಮಾತ್ಯನತ್ಯಘ ನಿಶಾದಿತ್ಯನನಿರಳ ಭಕ್ತಸಾಹಿತ್ಯನೂ
ಕಾಮ ಕಾಲಾಘಾತ್ಯನತುಳಗಣ ಭೃತ್ಯನುರು
ಭೀಮಾಂಧದೈತ್ಯತನು ತಟಘಟಿತ ನೃತ್ಯನಾ
ಸೋಮೇಶನಮಲವರದಿಂದೀಗೆ ಮಂಗಂಗಭಂಗಮಂಗಳಮತಿಯನೂ ||೧||

**ಅಂತ್ಯ:** ಧರಮುದ್ರಿಕುಧ್ರಮದ ಹಾರ್ಯಂ ನಗಂ ಶಿಖರಿ
ಗಿರಿಶೈಲಮಚಲಂ ಶಿಲೋಚ್ಚಯ ಪರ್ವತಂ
ಧರಣೀಧರ ಶೃಂಗಿ ಸಾನುಮಂತಂ ಗೋತ್ರಮೆನಲ್ಬೆಟ್ಟಕ್ಕೆ ನಾಮಂ
ಸ್ಥಿರಕುಪಕ್ಷಿ ಪಾಷಾಣಮಶ್ಮಮುಪಲಂ ಪ್ರ
ಸ್ತರನಾದೃಷತ್ ಶಿಲೆಗ್ರಾವಮೆನಲ್ಕಲ್ಲಕ್ಕು
ಗಿರಿಯ ಶಿರದಿಂದುರುಳ್ದ ಸಣ್ಣಗುಂಡುಗಳ್ಗಂಡಶೈಲಂಗಳೆಂದೆನಿಕ್ಕುಂ ||೧||
ಗಿರಿಯ ಗುಹೆ ಗುಹರಮೆನಿಸಿಕ್ಕು ಕಂದರಮೆನ
ಲ್ದರಿಯಕ್ಕು ಕೂಟಮಾ............

**ವಿಷಯ:** ನಿಘಂಟು.

**ವಿಶೇಷ:** ಇದೇ ಪುಸ್ತಕದಲ್ಲಿ ಕವಿಕಂಠಪಾಶ, ನಾನಾರ್ಥ ರತ್ನಾಕರ, ವಿದಗ್ಧ ಮಂಗರಾಜ ನಿಘಂಟು ಎಂಬ ಕೃತಿಗಳಿವೆ.

—ವೈಸಿಬಿ

## 82

ಕೆ. ೧೫೩೫ | **ಅಭಿಮನ್ಯುವಿನ ಕಾಳಗ** | ಯಕ್ಷಗಾನ
೭.೮" × ೧.೮" | ? | ?
೧-೪೩ ಪತ್ರ | ೭ ಪಂಕ್ತಿ | ೩೬ ಅಕ್ಷರ

**ಆದಿ :** ಶ್ರೀ ಶಾರದ ಗುರುಭ್ಯೋ ನಮಃ। ಶ್ರೀ ಗಣಾಧಿಪತಯೇ ನಮಃ। ಯಕ್ಷ ಗಾನದಲ್ಲಿ ಅಭಿನುನ್ಯುವಿನ ಕಾಳಗ ಬರೆಯುವುದಕ್ಕೆ ಶುಭಮಸ್ತು॥ ವೃತ್ತ॥
ಶ್ರೀ ಪದ್ಮಾಸನ ಪೂಜಿತಾಂಗ್ರಿಕಮಲಂ ಆನಂದತೀರ್ಥಾರ್ಜಿತಂ
ಪಾಪಾಂಭೋದಿಘಟೋದ್ಭವಂ ಶುಭಕರಂ ಪಂಕೇಜನೇತ್ರಂ ಹರಿಂ
ಗೋಪಾಲಂ ಗುಣಸಾಗರಂ ಗಿರಿಧರಂ ಧ್ಯಾಯಾಮಿ ಕೃಷ್ಣಂ ಸದಾ
ರಾಗಾ॥ ನಾಟಿ॥
ಜಯ ಮಹಾ ಗಣನಾತ
ಜಯ ರಮಾಸುಪ್ರೀತ
ಜಯತು ಸದ್ಗುಣಯೂತ
ಜಯ ಬಹುಖ್ಯಾತ ಜಯ ಜಯತೂ ॥೧॥

**ಅಂತ್ಯ :** ಮಂಗಳ ಪಥಾ॥
ಮಂಗಲಂ ಮತಿಭಾಗ್ಯದಾಯಕ ವಿನಾಯಕನಿಗೆ
ಮಂಗಲಂ ಶಿದ್ದ ಚಾರಣಸೇವಕಗೆXXX
ಶರದವಾಹನ ಮುಖ್ಯ ಸುರನಮಿತಗೆ
ಪಶ್ಚಿಮಾಂಬುಧಿಯ ತಡಿಯಲಿ ಬಂದು
ನಿಂತಹಿಗೆ ನಿಶ್ಚಯವ ತೋರಿ ಪೂಜೆಯಗೊಂಬಗೆ
ಜಯಮಂಗಳಂ ನಿತ್ಯ ಶುಭಮಂಗಳಂ

**ವಿಷಯ :** ಅರ್ಜುನನ ಮಗ ಅಭಿಮನ್ಯುವಿನ ಯುದ್ಧ.

**ವಿಶೇಷ :** ಸಮಗ್ರ.

—ಜಿಜಿಎಂ

## 83

ಕೆ. ೧೧೧೬ | **ಅಮರಕೋಶ (ಸಟೀಕು)** | ಶ್ಲೋಕ, ಗದ್ಯ
೮.೩" × ೧.೮" | ನಾಚಿರಾಜೀಯ | ?
೧೫೨ ಪತ್ರ | ೮ ಪಂಕ್ತಿ | ೩೦ ಅಕ್ಷರ

**ಆದಿ :** ....ನಾಚಿರಾಜೀಯ॥
ಯಸ್ಯಜ್ಞಾನದಯಾಸಿಥೋ....

ಸ ಶ್ರೀಯೇಜಾನ್ಮೃತಾಯಚ ಶಾಸ್ತ್ರಾರ್ಥ। ಶಾಸ್ತ್ರಾರಂಭದೊಳು ಶಿಷಾಪತಿ ಪಾಲನ ಚಾರಲೆಂಬುದು ಮಂಗಳಕ್ರಿಯೆ। ಮಂಗಳಕ್ರಿಯೆಯೆಂಬುದು ದೇವತೋಪಾಸ್ತಿ ಅಭಿಮಥ ದೇವತೋಪಾಸ್ತಿಯೆಂದು ದ್ವಿವಿಧಮಪ್ಪುದು। ತದ್ವಿವಿಧ ದೇವತೋಪಾಸ್ತಿಯು ಮುನಿಶ್ಲೋಕದಿಂದ ಮಾಡಿದಪಂ

**ಅಂತ್ಯ :** ಪೂಜಿತೇ ಪೂಜಿಸುವುದಜಲ್ಲಿಯುಂ ಆರಾತ್ಯಭಿಯುಕ್ತೆ ಶತ್ರುವಿನಿಂದ ವೈರವ ಬಿಟ್ಟು ಸ್ನೇಹವಾಗಿ ಕೂಡಿದವನಲ್ಲಿಯುಂ ಅಗ್ರಗತಃ ಕೃತೆ ಮುಖ್ಯವಾಗಿ ಮಾಡಲುಪಟ್ಟದುದಲಿಲ್ಲಿಯುಂ ಪರಿಷ್ಕೃತಃ ಯೆನಿಸುಗುಂ। ಹಗೆಯು ಕೈಯು ಹಿಡಿದವನೊಳಮಪ್ಪುದು। ಆಶ್ರಯುವಾದೌ। ಯಿಹ ಠಾವು ಘಾಳಿ ಯಿಲ್ಲದಿಹ ಠಾವುಂ ಶಾಸ್ತ್ರಭೆ

**ವಿಷಯ :** ಅಮರಕೋಶಕ್ಕೆ ಕನ್ನಡ ಟೀಕು. (ನಿಘಂಟು)

**ವಿಶೇಷ :** ಶಕಟರೇಫದ ಬಳಕೆಯಿದೆ. ಅಸ್ತವ್ಯಸ್ತ, ಅಸಮಗ್ರ.

—ಜಿಜಿಎಂ

## 84

| ಕೆ. ೧೧೧೮ | **ಅಮರಕೋಶ (ಸಟೀಕು)** | ಶ್ಲೋಕ, ಟೀಕು |
|---|---|---|
| ೧೮.೫" × ೧.೫" | ? | ? |
| ೧-೨೦೦ ಪತ್ರ | ೮ ಪಂಕ್ತಿ | ೫೫ ಅಕ್ಷರ |

**ಆದಿ :** ಯಸ್ಯಜ್ಞಾನ ದಯಾಸಿಂಧೋಃ ರಗಾಧಸ್ಯಾ ರಘಾಗುಣಾ
ಸೇವ್ಯತಾಮಕ್ಷಯೊಧೀರಾಃ ಸಃಶ್ರೀಯೈಚಾಮೃತಾಯಚ ||೧||
ಶಾಸ್ತ್ರಕರ್ತೃಗೆ ಶಾಸ್ತ್ರಾರಂಭದೊಳು ಶಿಷ್ಟಾಚಾರ ಪರಿಕಾಲ........... .... ............ ಮಂಗಳಕ್ರಿಯೆ–ಮಂಗಾಳಕ್ರಿಯೆಯೆಂಬುದು ದೇವತೋ ಪಾಸ್ತಿ ಅಭಿಮತ ದೇವತೋಪಾಸ್ತಿಯೆಂಬುದು ದ್ವಿವಿಧಮ.................. ....................ಶ್ಲೋಕದಿಂದ ಮಾಡಿದಪಂ

**ಅಂತ್ಯ :** ಮೃಗೀ, ಅಜಃ, ಅಜಾಃ, ಷಟ್ಪದಕ್ಕೆ, ಭ್ರಮರ, ಭ್ರಮರಿ, ಉರಗಃ, ಉರಗಿ, ಜಾತಿಭೇದಾಃ.................................ಶೇಷಂಗರು ಸ್ತ್ರೀಪುಂಸ ಲಿಂಗ, ಬ್ರಾಹ್ಮಣ.

**ವಿಷಯ :** ಸಂಸ್ಕೃತ ನಿಘಂಟು

**ವಿಶೇಷ :** ಬಹಳ ಶಿಥಿಲವಾಗಿದೆ, ತ್ರುಟಿತವಾಗಿದೆ. ಕೆಲವು ಓಲೆಗಳು ತುಂಡಾಗಿವೆ.

—ಎಂಸಿಪಿ

## 85

ಕೆ. ೧೫೯೧ **ಅಮರಕೋಶ (ಸಟೀಕು)** ಶ್ಲೋಕ, ಟೀಕು

೧೨.೮" × ೧.೩" ? ?

೧-೧೨೪ ಪತ್ರ ೧೧ ಪಂಕ್ತಿ ೫೨ ಅಕ್ಷರ

**ಆದಿ :** ಶ್ರೀಗಣಾಧಿಪತಯೆ ನಮಃ॥ ಶ್ರೀ ಶಾರದಾಂಬಾಯ್ನೆ ನಮಃ। ಶ್ರೀ ತಿರುಪತಿ ವೆಂಕಟಾಚಲಸ್ವಾಮಿಯವರ ದಿವ್ಯ ಶ್ರೀ ಚರಣಾರವಿಂದವೆ ಗತಿ॥ ನಿರ್ವಿಘ್ನ ಮಸ್ತು॥ ಅಮರಸಿಂಹ ಟೀಕಾ ಮೂಲನ ಬರವದಕೆ ಶುಭಮಸ್ತು॥
ಯಸ್ಯಜ್ಞಾನ ದಯಾಸಿಂಧೋಃ। ಗ್ನಾನ। ಗ್ನಾನದಿಂದಾ। ದಯಾ। ದಯ ದಿಂದಾ। ಸಿಂಧೂ। ಸಮುದ್ರದೋಪಾದಿಯಲ್ಲಿ ಯಿದ್ದಂಥಾ। ಅಗಾ....ಸ್ಯಾ। ಗಂಭೀರನಾಗಿ। ಅಪಾರ ಮಹಿಮನಾದಂಥಾ। XX ಆ ಕ್ಷೀರ ಸಮುದ್ರನು ಶ್ರೀಯ್ಯೈಚ। ಮಹಾಲಕ್ಷ್ಮಿಗೋಸ್ಕರಲು। ಅಮ್ರುತಾಯಚ। ಅಮ್ರುತ ಕ್ಕೋಸ್ಕರಲು ಸೇವ್ಯ। ಸೇವಿಸಲ್ಪಡಲಿ ॥೧॥

**ಅಂತ್ಯ :** ಸಾರ್ಧಂ। ಸಾಕಂ। ಸತ್ರಾ। ಸಮಂ! ಸಹ। ೫ ಕೂಡಿಹದೆಂಬದರಲ್ಲಿ। ಲ್ಲಿಗೆ। ಪ್ರಯೋಗ। ಸಾರ್ಧಂ ಮುದ್ಭವಃ। ರಖ್ಯಾಂ। ಉದ್ದವ ಬಲರಾಮನಿಂದಾ ಕೂಡಾ ॥೧॥ XXX ಯಿಂದು ಉ್ರಥಾ। ಮುದಾ ......ಫಲವಿಲ್ಲದ್ದಾ ರಲ್ಲಿ। ಯಿಾ। .. ... ....

**ವಿಷಯ :** ಅಮರಕೋಶದ ಕನ್ನಡ ವ್ಯಾಖ್ಯಾನ. (ನಿಘಂಟು)

**ವಿಶೇಷ :** ಕೃತಿ ಅಸಮಗ್ರ. ಮೋಡಿ ಅಕ್ಷರ. ಕೆಲವು ಗರಿಗಳ ಅಂಚುಗಳು ತ್ರುಟಿತ ವಾಗಿವೆ.

—ಎಂಪಿಎಂ

## 86

ಕೆ. ೧೮೪೨ **ಅಮರಕೋಶ (ಸಟೀಕು)** ಶ್ಲೋಕ, ಟೀಕು

೮.೪" × ೨" ? ?

೧-೬೮ ಪತ್ರ ೮ ಪಂಕ್ತಿ ೩೧ ಅಕ್ಷರ

**ಆದಿ :** ಶ್ರೀ ಶಾರದಾ.... ನಮಃ.... ಶ್ರೀ ವೀತರಾಗಾಯ ನಮಃ। ಶುಭಮಸ್ತು॥ ಶ್ರೀ ಜ್ವಾಲಾಮಾಲಿನಿಯ ನಮಃ॥ ವಿಶ್ವವಸು....ತ್ಸರದ ಚೈತ್ರ ಬಹುಳ ೫ ಶನಿವಾರದಲ್ಲಿ ಪ್ರಥಮಕಾಂಡ ಅಮರ ಬರೆಯುವದಕ್ಕೆ ಶುಭಮಸ್ತು॥
ಯಸ್ಯಜ್ಞಾನ ದಯಾಸಿಂಧೋ ರಗಧಸ್ಯಾ ನಘಾಗಣಾಃ
ಸೇವ್ಯತಾಮಕ್ಷಯೋಧೀರಾಃ ಸ ಶ್ರೀಯ್ಯೈಚಾಮೃತಾಯಚಾ ॥೧॥

**ಅಂತ್ಯ :** ಸ್ವರ್ಗವರ್ಗಃ ವ್ಯೋಮವರ್ಗಃ ದಿಗ್ವರ್ಗಃ
ಕಾಲಕಾಲವರ್ಗಃ ಧಿ ಬುದ್ಧಿವರ್ಗಃ ವಾಕುವರ್ಗಃ
ಶಬ್ದವರ್ಗಃ ನಾಟ್ಯವರ್ಗಃ ಪಾತಾಳ ಭೋಗಿವರ್ಗಃ
ನರಕ ನರಕವರ್ಗಃ ವಾರಿ ವಾರಿವರ್ಗಃ
ಅಂತು ೧೨ ವರ್ಗಃ ಶ್ರೀ
ವಿಶ್ವವಸು ಸಂವತ್ಸರದ ವೈಶಾಕ ಶುದ್ಧಾ ೨ ಬ್ರೆಸ್ಪತಿ ವಾರದಲ್ಲಿ ಅಮರ ಪ್ರಥಮ ಕಾಂಡ| ಹರವಿನ ಉಪದ್ರಿಯುಲ್ಲೈಯ್ಯನರ ಪುಸ್ತಕ ಮಂಗಳ ಮಹಾಶ್ರೀ

**ವಿಷಯ :** ಅಮರಕೋಶದ ಕನ್ನಡ ವ್ಯಾಖ್ಯಾನ. (ನಿಘಂಟು)

**ವಿಶೇಷ :** ಶಿಥಿಲಪ್ರತಿ.

—ವೈಸಿಬಿ

87

ಕೆ. ೧೮೪೩ **ಅಮರಕೋಶ (ಸಟೀಕು)** ಶ್ಲೋಕ, ಟೀಕು
೧೦.೩" × ೧.೯" ? ?
೧-೧೧೪ ಪತ್ರ ೮ ಪಂಕ್ತಿ ೩೨ ಅಕ್ಷರ

**ಆದಿ :** ಶ್ರೀ ಶಾರದಾಂಭಯು ನಮಃ| ಶ್ರೀ ವೀತರಾಗಾಯ ನಮಃ| ಶುಭಮಸ್ತು||
ಸೌಮ್ಯನಾಮ ಸಂವತ್ಸರದ ಆಶ್ಯಾಡ ಸುದ್ದ ೮ ಯ ಸುಕ್ರವಾರ ಅಮರ ಖಾಂಡಾ ಬರೆಯುದಕ್ಕೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿರಸ್ತು||
ವಿಶೇಷ್ಯ ನಿಘ್ನೈ ಸಂಕೀರ್ಣೈ ರ್ನಾನಾರ್ಥೈರವ್ಯಯೈರಪಿ
ಲಿಂಗಾದಿ ಸಂಗ್ರಹೈವರ್ಗೈ ಸ್ಸಾಮಾನ್ಯೈರ್ವರ್ಗ ಸಂಶ್ರಯಾ ||೧||

ಟೀಕು|| ವಿಶೇಷ್ಯಾದಿನಗಳಾಗಿ ವಿಶೇಣಗಳೆಂಬ ತ್ರಿಲಿಂಗ ಶಬ್ದಗಳಿಂದಲೂ ಸಂಕೀರ್ಣೈ|| ಯಿಾಖಾಂಡಗಳಲ್ಲಿ ಬೆರಕೆಯಾಗಿರುವ ಶಬ್ದಗಳಿಂದಲು| ನಾನಾರ್ಥೈ| ಅನೇಕಾರ್ಥಗಳ ಹೇಳು ಶಬ್ದಂಗಳಿಂದಲೂ| ಅವ್ಯಯೈಃ| ಲಿಂಗ ಭಕ್ತಿ ವಚನಗಳ ನಿರ್ಣಯವಿಲ್ಲಾದ ಶಬ್ದಗಳಿಂದಲೂ|

**ಅಂತ್ಯ :** ಶಿಷ್ಟಪ್ರಯೋಗದಿಂದ ಪುಲ್ಲಿಂಗವಾದತಿಶಯು| ಶಬ್ದವು| ಶಿತಟ ಪರಿವಚನಂ| ಭವತೀಯಂಬ ಭಾಷ್ಯ| ಪ್ರಯೋಗದೆಶೆಯಿಂದ ನಪಂಸಕ ಯಂದು| ತಿಳಿಯ ತಕ್ಕದ್ದು| ಕಲ್ಲಿಕಾ| ಕೆಲಾರಕಾಃ| ಪೂಮಾನ್| ಯಂಬ ವಚನದಿಂದ ಪುಲ್ಲಿಂಗವಾದರು| ಕೋರಕ ಶಬ್ದವು| ಕೋರಕಾನಿಯಂಬ| ಮಾಗ ಪ್ರಯೋಗದ ದಶೆಯಿಂದ| ನಪಂಸಕ ಉಂಟು ಯೆಂದು| ತಿಳಿಯತಕ್ಕದ್ದು|

ಇತಿ ಬಾಲಾನಂದಕರೇ ಲಿಂಗಾದಿ ಸಂಗ್ರಃ। ವರ್ಗಃ। ಸಮಾಪ್ತ ಖಾಂಡ ತ್ರಯಶಂ। ಶುಭಮಸ್ತು॥
ಯಾದೃಶೀ ಪುಸ್ತಕಂ ದೃಷ್ಟ್ವಾXXXಶ್ರೀ

**ವಿಷಯ:** ಅಮರಕೋಶದ ವ್ಯಾಖ್ಯಾನ.

**ವಿಶೇಷ:** ಕೆಲವು ಪತ್ರಗಳ ಅಂಚು ಮುರಿದಿವೆ.

—ವೈಸಿಬಿ

88

| ಕೆ. ೧೮೪೬ | **ಅಮರಕೋಶ (ಸಟೀಕು)** | ಶ್ಲೋಕ, ಟೀಕು |
|---|---|---|
| ೯.೫" × ೨" | ? | ? |
| ೧-೧೭೦ ಪತ್ರ | ೭ ಪಂಕ್ತಿ | ೩೨ ಅಕ್ಷರ |

**ಆದಿ:** ಶ್ರೀ ವೀತರಾಗಾಯ ನಮಃ XX ಸೌಮನಾಮ ಸಂವತ್ಸರದ ಶ್ರವಣ ಶುದ್ಧ ೧೪ಯಲ್ಲು ಮೂರನೆಯ ಖಾಂಡ ಬರಯುನದಕ್ಕೆ ಶುಭಮಸ್ತು ॥ಶ್ರೀ॥ ಭೂವರ್ಗಃ॥
ವರ್ಗಾಃ ಪೃಥ್ವೀ ಪುರಕ್ಷ್ಮಾ ಬೃದ್ವನೌಷಧಿ ವೃಗಭಿಃ
ನೃಬ್ರಹ್ಮ ಕ್ಷೇತ್ರ ವಿಟ್ಶುದ್ರೈಃ ಸಾಂಗೋಪಾಂಗೈರಿಹೋತಾಃ।
XXXಟೀಕು॥ ಭೂಃ। ಭೂಮಿಃ। ಅಚಲಾ। ಅನಂತಃ ರಾಸಾ। ವಿಶ್ವಂ ಭರಾ। ಸ್ಥೀರಾ। ಧರಾ। ಧರಿತ್ರೀ। ಧರಣೀ। ಕ್ಷೋಣಿ। ಇಜ್ಯಾ। ತಾಶ್ಯಪಿಃ। ಕ್ಷಿತಿಃ। ಸರ್ವಸಹಾ। ವಸುಮತಿ। ವಸುಧಾ। ಲೋರ್ವಿ। ವಸುಂಧರಾ। ಗೋತ್ರಾ। ಕುಃ। ಪೃಥ್ವಿ। ಪೃಥಿವಿ। ಕ್ಷ್ಮಾ। ಅವನೀ। ಮೇದಿನೀ। ಮಹೀ। ವಿಪುಲಾ। ಗಹ್ವರಿ। ಧಾತ್ರಿ। ಗೌ। ಇಲಾ। ಕುಂಭಿಣಿ। ಕ್ಷಮಾಜಗತಿ। ರತ್ನ ಗರ್ಭ। ಅಬ್ಧಿಮೇಂಖಲಾ। ಇ ೩ ಬೊಮಿಾ ಹೆಸರೂ॥

**ಅಂತ್ಯ:** ವೂಹ್ಯಃ। ವ್ಯೂಹನೀಯುಂಗಳು। ಮಾಯಾಕಾರೊ। ಮಾರ್ದನಿಕೋ। ವೈ ವಣಿಕೋಲೋಕ। ಮಾಯಾಕಾರಿ ಮಾರ್ಧಂನಿಕಿ। ವೈವಣ। ಮಾಯಾ ಕಾರಂ। ಮಾರ್ದ್ಧನೀಕಂ। ವೈಂದಂ॥ ಇತಿ ಶೂದ್ರವಗಃ॥ ಇತ್ಯಮರ ಬಹು ತೈತ್ರಾ ನಾಮಲಿಂಗಾನುಶಾಸನೇ ಭೂಮ್ಯಾದಿ ಕಾಂಡೋ ತ್ರಿಯಸಾಂಗ। ಎನ ಸಮರ್ಥಿತಃ ಶ್ರೀXXX
ಸೌಮ್ಯನಾಮ ಸಂವತ್ಸರದ ಬದ್ರಾಪಿತ ಸುದ್ಧ್ರ ರವಿವಾರದಲ್ಲು ಭುಜಬಲ ರಾಜನ ಅಮರ ಪುಸ್ತಕ ಶ್ರೀ ಖಾಂಡ ಸಂಪೂರ್ಣ ಮಂಗಳ ಮಹಾಶ್ರೀ

**ವಿಷಯ:** ಅಮರಕೋಶದ ಕನ್ನಡ ವ್ಯಾಖ್ಯಾನ.

**ವಿಶೇಷ:** ಸಮಗ್ರ. ಗ್ರಂಥಾಂತ್ಯದಲ್ಲಿ ಗ್ರಂಥರಚನಾ ಕಾಲ ವಿಚಾರವಿದೆ.

—ಕೆಆರ್‌ಎಸ್

## 89

| | | |
|---|---|---|
| ಕೆ.ಎ. ೩೫೭ | **ಅಮರಕೋಶ (ಸಟೀಕು)** | ಗದ್ಯ |
| ೧೩" × ೮.೩" | ಅಮರಸಿಂಹ | 7 |
| ೧-೭೭ ಪತ್ರ | ೨೫ ಪಂಕ್ತಿ | ೧೩ ಅಕ್ಷರ |

**ಆದಿ :** ಇದು ಶ್ರೀ ಎನ್. ಬಸವಾರಾಧ್ಯರು ಟೂರಿನಲ್ಲಿ ತಂದ ಕಾಗದದ ಪುಸ್ತಕದ ಮೇಲೆ ಕಾಪಿಯಾಗಿದೆ. ಕನ್ನಡ ವ್ಯಾಖ್ಯಾನ ಸಹಿತವಾದ ಅಮರಕೋಶವು.
ಶ್ರೀ ನಂಜುಂಡೇಶ್ವರ ಸ್ವಾಮಿನೇ ನಮಃ। XX ಅಮರಸಿಂಹದ ವ್ಯಾಖ್ಯಾನ ಬರೆಯುವುದಕ್ಕೆ ಶುಭಮಸ್ತು। ಶೋಭನಮಸ್ತು XX
ಅಗಜಾನನ ಪದ್ಮಾರ್ಕಂ ಗಜಾನನಮಹರ್ನಿಶಂ।
ಅನೇಕದಂತಂ ಭಕ್ತಾನಾಮೇಕದಂತಮುಪಾಸ್ಮಹೇ।
ಯಸ್ಯಜ್ಞಾನ ದಯಾಸಿಂಧೋರಗಾಧಸ್ಯಾನಘಾಗುಣಾಃ
ಸೇವ್ಯತಾಮಕ್ಷಯೋಧೀರಾಃ ಸ ಶ್ರೀಯೈಚಾಮೃತಾಯಚ॥
ಜ್ಞಾನದಯಾಸಿಂಧೋಃ ಜ್ಞಾನ ಶಿವಜ್ಞಾನಕ್ಕೂ, ದಯಾ–ಕಾರುಣ್ಯಕ್ಕೂ ಸಿಂಧೋಃ–ಸಮುದ್ರನಾದಂಥ, ಅಗಾಧಸ್ಯ–ಗಾಧರಹಿತವಾದಂಥ

**ಅಂತ್ಯ :** ಬೀಜಕೋಶಃ ವರಾಟಕಃ ಅಪ್ಪಿರುಪಂಥ ಅಟಪಟಗತೌ, ಇತಿ ಧಾತುಃ, ಬೀಜಕೋಶಃ ಈ ೧ ಬೀಜದ ಬೊಕ್ಕಸದ ಹೆಸರು. ಇತಿ ವಾರಿವರ್ಗಃ
ಶ್ರೀಃ ಶ್ರೀಃ ಶ್ರೀಃ
ಉಕ್ತಂ ಸ್ವರ್ವ್ಯೋಮದಿಕ್ಕಾಲಧೀ ವಾಕ್ಯಬ್ದಾದಿ ನಾಟ್ಯಕಂ।
ಪಾತಾಳ ಭೋಗಿ ನರಕ ವಾರಿಜೈಷಾಂ ಚ ಸಂಗತಿಃ॥
ಇತ್ಯಮರಸಿಂಹಕೃತೌ ನಾಮಲಿಂಗಾನುಶಾಸನೇ।
ಸ್ವರಾದಿಃ ಪ್ರಥಮಃ ಕಾಂಡಃ ಸಾಂಗಏವ ಸಮರ್ಥಿತಃ॥
ಇತಿ ಪ್ರಥಮ ಕಾಂಡ ವ್ಯಾಖ್ಯಾನಂ ಸಂಪೂರ್ಣಂ ಮಂಗಳ ಮಹಾ ಶ್ರೀ ಶ್ರೀ ಶ್ರೀ,

**ವಿಷಯ :** ಸಂಸ್ಕೃತ ಪದಗಳಿಗೆ ಕನ್ನಡ ಅರ್ಥ.

**ವಿಶೇಷ :** ಪ್ರಥಮಖಾಂಡ ಮಾತ್ರ ಇದೆ. ಅಸಮಗ್ರ.

—ಬಿಎಸ್ಎಸ್

## 90

| | | |
|---|---|---|
| ಕೆ. ಎ. ೫೫೪/೪ | **ಅಮರುಕ** | ಪರಿವರ್ಧಿನೀ ಷಟ್ಪದಿ |
| ೧೦.೧" × ೯.೨" | ದೇಪರಾಜ | ಸು. ೧೪೧೦ |
| ೧೧೬-೧೨೮ ಪುಟ | ೨೦ ಪಂಕ್ತಿ | ೨೬ ಅಕ್ಷರ |

**ಆದಿ :** ಶ್ರೀ ಗಿರಿಜೆಯುಪ್ಪುವ ಮುಧ್ಧಿಪನಂ
ತಾಗುಲೊಡನೆ ಕಂಡಡೆ ಕನಲುವ
ನೇಗೈದಸೆನೆಂದಿಂದುವ ಸ್ಫೈತಿರಿಪಂತೆ ಕಗನಪೆದಿಗಹಿ
ಭಾಗೀರತಿಯನು ವೈದಡಹುವ ಮದ
ನಾಗನು ಪರಿಹರ್ವೆಂಡಿರಲೊಳಿಮ
ಗೀಗೆ ಚಮತ್ಕೃತಿಗಂ ಮತಿಗರಶನ ನಿರ್ವಿಘ್ನತೆಯಿಂದಾ ||೧||

**ಅಂತ್ಯ :** ಸುತಳಿಯೆ ಭುಜದರಳೊಳಗಣಗೆದಳೊ .......ಯಂ ಮಳ ಪಂಜರಪನರಿಸು ತಿರ್ದ........ನಿಲದಾಳದರೆ ಗಾಳಿಳಿವಂತೆ! ಕೇಳದಿಯಲೊಪ್ಪಿದರಾದಾಡಿಂಬ ದಪ.......

**ವಿಷಯ :** ಶೃಂಗಾರ ಕಾವ್ಯ

**ವಿಶೇಷ :** ಅಸಮಗ್ರ. ೬೪ನೆಯ ಪದ್ಯದವರೆಗಿದ್ದು ಮುಂದಿನ ಭಾಗವಿಲ್ಲ. ಅಲ್ಲಲ್ಲಿ ಲುಪ್ತ ವಾಗಿದೆ. ಸಂಸ್ಕೃತ ಅಮರುಕ ಶತಕದ ಭಾಷಾಂತರ ಕಾವ್ಯವಿದು. ಇದೇ ಪುಸ್ತಕದಲ್ಲಿ ಚೂಡನಾಥಾಸ್ಥಾನ, ವೈಭೋಗ ರಾಜಾಸ್ಥಾನ, ವಿರೂ ಪಾಕ್ಷಾಸ್ಥಾನ ವರ್ಣನೆ, ಶಾರದಾ ಗದ್ಯವೆಂಬ ಇತರ ಕೃತಿಗಳಿವೆ.

—ಕೆಆರ್ಎಸ್

## 91

ಕೆ. ೧೧೫೭/೯ **ಅಮ್ಮಗಳ ನೂರೆಂಟು ನಾಮಂಗಳು** ವಾರ್ಧಕಷಟ್ಪದಿ
೧೪.೩" × ೧.೮" ? ?
೬೨-೬೩ ಪತ್ರ ೭ ಪಂಕ್ತಿ ೪೫ ಅಕ್ಷರ

**ಆದಿ :** ಶ್ರೀ ಗುರು ಪಾರ್ವತೀಶ್ವರಾಯ ನಮಃ|| ಅಮ್ಮಗಳ ನೂರೆಂಟು ನಾಮಂ ಗಳೂ||
ಪರಮಪಾವನ ಚಾರುಚರಿತೆಯರೆನಿಪ್ಪ ಶಿವ
ಶರಣೆಯರ ನೂರೆಂಟು ನಾಮಸ್ಮರಣೆಯ ಮಾಡಲಿಹ
ಪರವು ಮರಣಾದಿ ಭಯುವಳಿದು ಮುಕ್ತ್ಯಾಂಗನೆಯ ಬೆರಸಿ ಸುಖದಿಂದಿರ್ಪರೂ ||ಪ||

ನೀಲಲೋಚನೆ ನಂಬಿಯಕ್ಕ ನಿಜಸಂಗವ್ವೆ
ಕೋಳೂರ ಕೊಡಗೂಸು ವೀರಸುಗ್ಗಲದೇವಿ
ಕೇಳಿಕೆಯ ಮಹದೇವಿ ಸತ್ಯಕ್ಕ ನಿಂಬವ್ವೆ ಗುಡ್ಡವ್ವೆ ಸಾಯಿದೇವಿ
ಸೂಳೆ ಪದ್ಮಲದೇವಿ ಸೂಳೆ ಬೊಮ್ಮಲದೇವಿ
ಸೂಳೆ ನಂಬ್ಯಕ್ಕ ಚೋಳವ್ವೆ ಚಾಕಲದೇವಿ
ಕಾಳವ್ವೆ ಕಮಲವ್ವೆ ತಿಲಕವ್ವೆ ಬಿಜ್ಜಮಹದೇವಿ ಚಂಗಳೆ ದುಗ್ಗಳೆ ||೧||

**ಅಂತ್ಯ :** ಇಂತು ನಿಃಕ್ಕಲ ಪರಶಿವಂಗೆ ಯಂಗಸ್ವ
ಮಂ ತಾಳ್ದು ಚಿತ್ಯಕ್ತಿಯೆ ಹಲವು ರೂಪನಾಂ
ತಿಂತು ಮರ್ತ್ಯಕ್ಕೆಯವತರಿಸಿದ ಶರಣೆಯರ ನೂರೆಂಟು ನಾಮವನಾವದಂ
ಸಂತತಂ ಸ್ಮರಿಸಿ ಉಚ್ಚರಿಸಿ ಜಪಿಸಲ್ಕೆ ಚಿ
ತ್ಕಾಂತನಹ ಗುರು ನಿರಂಜನಲಿಂಗನೊಲ್ದು ವೋ
ರಂತೆ ಅವಿರಳಾನಂದಸುಖವಿತ್ತು ನಿಜಮುಕ್ತಿವೀವನಿದು ಸಿದ್ಧಾಂತವು ॥ ೭

**ವಿಷಯ :** ನೂರೆಂಟು ಶಿವಶರಣೆಯರ ನಾಮಸ್ಮರಣೆ.

**ವಿಶೇಷ :** ಸಮಗ್ರ. ಶುದ್ಧವಾಗಿದೆ. ಇದರ ಜೊತೆಗೆ ಗುರು ಭಕ್ತಾಂಡಾರಿಯ ಚರಿತ್ರೆ, ಕಪೋತ ಚರಿತೆ ಮುಂತಾದ ೧೩ ಕೃತಿಗಳಿವೆ.

—ಜಿಜಿಎಂ

## 92

ಕೆ. ೧೫೩೬/೨ **ಅಮ್ಮನವರ ಹಸೆಗೆ ಕರೆದ ಶೋಭಾನದ ಪದ** ಹಾಡು

೭.೪″ × ೨.೧″ ? ?

೭೩-೭೬ ಪತ್ರ ೭ ಪಂಕ್ತಿ ೩೨ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಅಂಮನವರ ಹಸಿಗೆ ಕರದ ಶೋಭಾ
ನದ ಪದ ಬರಯುವುದಕ್ಕೆ ಶುಭಮಸ್ತು॥ XXXಪದನು॥
ಶ್ರೀ ಗಿರಿಜಾಸುತನಿಗೆ ನಮಿಸಿ ವರ
ವಾಗೀಶ್ವರಿಯ ಪಾದವ ಭಜಿಸಿ
ನಿಜವಾಗಿ ಮನವ ಭಕತಿಯೊಳರಿಸಿ
ಶೈವಾಗನುನಿಗಮಕೆ ನಿಲುಕದ ಪಾರ್ವತಿ
ಗೀಗ ವಂದಿಸುವೆ ಮುದದಿಂದ ॥೧॥

**ಅಂತ್ಯ :** ಮರುಗದವನವನು ಸರಗೊಳಿಸಿ
ಹಿಮಗಿರಿಜಾತೆಗೆಯಚರಣ ಧರಿಸಿ
ನಿಜಕರವ ಮುಗಿದು ಮುರಹರನರಸಿ
ತಾನರಿಯದವಳ ಶ್ಯಾವೆಗೆ ಪಾರ್ವತಿ ನಿಂನ
ಚರಣಕರ್ಪಿಸುವೆ ಮುದದಿಂದ ॥೩೭॥
ಯೆನುತ ಸರಧಿಸುತೆ ಭ

**ವಿಷಯ :** ಪಾರ್ವತಿಯನ್ನು ಹಸೆಗೆ ಕರೆಯುವ ಹಾಡು.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಕಕೋಕ ಶಾಸ್ತ್ರ ಕೃತಿಯೂ ಇದೆ.

—ಜಿಜಿಎಂ

## 93

ಕೆ.ಎ. ೪೨೩/೧೫ **ಅಮ್ಮವ್ವೆಯ ರಗಳೆ** ರಗಳೆ

೮.೪" × ೧೨.೮" ತ್ರಿಭುವನತಾತ ಸು. ೧೧೬೦

೬೭-೭೭ ಪತ್ರ ೨೬ ಪಂಕ್ತಿ ೧೨ ಅಕ್ಷರ

**ಆದಿ :** ಅಮ್ಮವ್ವೆಯ ರಗಳೆ॥
ಕಂದ॥ ಶ್ರೀ ವರದ ಗುರುದೇವ ಜಗಾ
ಪಾವನ ನಿಜಭಕ್ತಿಭರಿತ ನಾಥರನಾಥಂ
ಭೂನಳಯದೊಳಂ ಮಹೌವೆಯಾ
ಭವಕ್ಕೆ ಮಿಗೆ ಮೆಚ್ಚಿಮೆದ ಗುರುವಿಶ್ವೇಶಾ ॥೧॥
ಶ್ರೀ ಭೂಮಿಸ್ಥಳಕೊಪ್ಪುವ ದೇಶವು
ಸೇವವು ಕರ್ಣಾಟಕ ಪುರವಾಸವು॥

**ಅಂತ್ಯ :** ಚಂದದಲೀಶ್ವರ ಮೆಚ್ಚಿದನಾಗಂ
ಬಂದು ಅಗಲೇ ಪುಷ್ಪಕ ಬೇಗಂ
ದುಂದುಭಿನಾದವುನಾಳ್ಕುತಿರೆ
ಕಂದದ ವಾದವು ಮೆಳ್ಳಿಸೆತಿರೆ
ಶರೀರ ಸಹ ತಂಮ್ಮವ್ವೆಯ ನೋಯಿರಂ
ಶರಮುಗ್ಧೆಯ ಸತ್ಕೃತನು ಮೊಯಿದಂ॥

**ವಿಷಯ :** ಅಮ್ಮವ್ವೆಯ ಚರಿತ್ರೆ.

**ವಿಶೇಷ :** ಇದೇ ಪುಸ್ತಕದಲ್ಲಿ ನೀಲಮ್ಮನ ತ್ರಿವಿಧಿ, ಹರಗಣಮಾಲೆ, ಗಣಸಹಸ್ರನಾಮ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 94

ಕೆ. ಎ. ೫೬೮/೧೩ **ಅಮ್ಮವ್ವೆಯ ರಗಳೆ** ರಗಳೆ

೧೨" × ೯.೮" ತ್ರಿಭುವನತಾತ ಸು. ೧೧೬೦

೮೯-೯೫ ಪುಟ ೨೪ ಪಂಕ್ತಿ ೨೦ ಅಕ್ಷರ

**ಆದಿ :** ಶ್ರೀಗಣಾಧಿಪತಯೇ ನಮಃ। ಶುಭಮಸ್ತು। ಅಮ್ಮವ್ವೆಯ ರಗಳೆ।
ಕಂದ॥ ಶ್ರೀ ವರದಗುರುದೇ (ವ) ಜಗಾ
ಪಾವನ ನಿಜಭಕ್ತಿಭರಿತ ನಾಥರ ನಾಥಂ
ಭೂವಳೆ(ಯ್ಯಾ)ದೊಳಂ ಮಹೌವೆಯಾ
ಭವಕ್ಕೆ ಮಿಗೆ ಶುಚಿಮೆರದ ಗುರು ವಿಶ್ವೇಶಾ ॥೧॥

ಶ್ರೀ ಭೂಮಿ.... ಳ ಕೊಪ್ಪುವ ದೇಶಉ
ನಮ್ಮವು ಕರ್ಣಾಟಕ ಶುಕವಾಸಉ॥

**ಅಂತ್ಯ :** ಚಂದದ ನವಿಶ್ವರ ಮೆಚ್ಚಿದಾಗಂ
ಬಂದುದು ಆಗಲೆ ಪುಷ್ಪಕ ಬೇಗಂ
ದುಂದುಭಿನಾದಂ ಸೂಳೈಸುತಿರೆ
ಚಂದದ ವಾದಉ ಮೇಳೈಸುತಿರೆ
ಶರೀರ ಸಹಿತಂ ಮೌವೆಯು ಸೊಯದಂ
ಕರ ಮುಗ್ಧಿಯ ಸವ್ಯತ್ರಸು ಪೊಯದಂ

**ವಿಷಯ :** ಅಮ್ಮವ್ವೆ ಎನ್ನುವ ಶರಣೆಯ ಚರಿತ್ರೆ.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

95

**ಅರಣ್ಯಪರ್ವ**

ಕುಮಾರವ್ಯಾಸ

ಕೆ. ೧೬೫೪/೨ — ೭-೭″ × ೩.೭″ — ೫೦ ಪತ್ರ — ೯ ಪಂಕ್ತಿ — ಭಾಮಿನೀಷಟ್ಪದಿ — ಸು. ೧೪೨೦ — ೪೮ ಅಕ್ಷರ

**ಆದಿ :** ........ದಲೀ ಮಾಡಿದರು ವಿಶ್ರಮವಾ
ನಿಲಿಸೆ ನಿಲ್ಲದೆ ಬಂದರರಸನ
ಬಳಿಯಲಗ್ಗದ ಮಂಡಲೇಶ್ವರ
ರೊಲಿದು ಸಾರ........ಹಲಉಸಂಗಣಿಯಾ
ಬಲು ಭಟರು ಬಾಹತ್ತರದ ನಿ
ಶ್ಚಲ ನಿಯೋಗಿಗಳಾಶ್ರಮಿಗಳ
ಗ್ಗಳಿಯ ವಿಪ್ರಸ್ತೋಮವಂದು ಸಹಸ್ರ ಶಂಖೆಯ॥ XXX ॥೧೧॥
ಅರಣ್ಯಪರ್ವ ಪ್ರಥಮ ಆರಣ್ಯಾ ಬರೆವದಕೆ
ಮಂಗಳ ಮಹಾ ಶ್ರೀ ಶ್ರೀ
ಸಕಲ ರಾಜ್ಯವನುಳಿದರಸ ಕಾ
ಮ್ಯಕ ಮಹಾಕಾನನಕೆ ಬರೆ ಕೀ
ಚಕಕುಲಾಂತಕ ಕೆಡಹಿದ ಕೆಂಮಿಾರದಾನವನಾ॥

**ಅಂತ್ಯ :** ನರಮ್ರುಗಾಧಮ ನಿಂಮ
ಭಾರತವರುಶ ಭೂಮಿಯಲೊಂದು

ಪರುಶಾಂತರ ನಪುಂಸಕನಾಗಿ ಚರಿಸು ನಿರಂತರಾಯುದಲೀ
ಹರಿಯು ಮರೆಹೊಗು ಕೂರ
ಗಿರನನುಸರಿಸು ಗಿರಿವ್ಯೈಯಂಗೆ.......

**ವಿಷಯ:** ಪಾಂಡವರು ಕಾಡಿನಲ್ಲಿದ್ದದ್ದು.

**ವಿಶೇಷ:** ಅಸಮಗ್ರ, ತ್ರುಟಿತ. ಪ್ರತಿ ಶುದ್ಧವಾಗಿದೆ. ಇದೇ ಕಟ್ಟಿನಲ್ಲಿ ಗಣಿತ ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 96

ಕೆ.ಬಿ. ೬೩೮/೨ **ಅರುವತ್ತುಮೂರು ಪುರಾತನರ ನಾಮಾವಳಿ** ವಾರ್ಧಕಷಟ್ಪದಿ
೮″ × ೫.೨″ ಅನ್ನದಾನಿ ೧೯ನೇ ಶತಕ
೧೧ ಪುಟ ೧೨ ಪಂಕ್ತಿ ೨೦ ಅಕ್ಷರ

**ಆದಿ:** ಶ್ರೀ ಅರುವತ್ತುಮೂರು ಪುರಾತನರ ನಾಮಾವಳಿಗಳು ಇದು ರೋಣದ ಶಾಸ್ತ್ರಿ ಅಂನದಾನಿ ಕವಿಗಳಿಂದ ರಚಿಸಲ್ಪಟ್ಟಿತು. ಹುಬ್ಬಳ್ಳಿ ನೀಲೀ ಗುರು ಶಿದ್ಧಪ್ಪನವರು ಲೋಕಹಿತಾರ್ಥವಾಗಿ ಪ್ರಕಟಿಸಿದರು ಮೊದಲನೆ ಆವೃತ್ತಿ ೧೫೦೦ ಪ್ರತಿಗಳು ೧೮೯೭.

ವಿದ್ಯಾಸಂತಾನ ಛಾಪಖಾನೆಯಲ್ಲಿ ಮುದ್ರಿಸಲ್ಪಟ್ಟಿತು.
ಯಿಾ ಪುಸ್ತಕದ ಯಾವತ್ತು ಹಕ್ಕು ಮಾಲೀಕರ ಕಡೆಗೆ ಅದೆ.

ಶ್ರೀ ಗುರು ಬಸವಲಿಂಗಾಯ ನಮಃ :– ರೋಣದ ಶಾಸ್ತ್ರಿ ಅಂನದಾನಿ ಕವಿಗಳಿಂದ ವಿರಚಿತಮಾದ ಅರವತ್ತುಮೂರು ಪುರಾತನರ ನಾಮಾವಳಿಯ ವಾರ್ಧಿಕಗಳಂನು ಬರೆಯುವದಕ್ಕೆ ಪ್ರಾರಂಭಃ||

ಶ್ರೀಮದಗಣಿತ ಮಹಿಮ ಸಂಪನ್ನರಂ ನಾಡೆ
ಕಾಮತಾತಪ್ರಮುಖ ಸುರನಿಕರವಂದ್ಯರಂ
ಸೋಮಧರ ಸದ್ಭಕ್ತರೆಂದೆನಿಸಿ ಮೆರೆವರಂ ನಿರವದ್ಯಕಂಪ್ವದ್ಯಕಂ
ಯಿಾ ಮಹಿಯೊಳಂದು ಮೆರದರುವತ್ತು ಮೂವರಾ
ರಾಮಃಣೀಯ್ಯಕಮಾಗಿ ನುತಿಸುವೆನದ್ಯಾಕೆನಲು
ಕಾಮಹರ ಪೂಜೆಗಿಂದಿವರ ನುತಿಕೋಟಿ ಮಿಗಿಲೆಂದು ತಿಳಿದುದರಿಂದಲಿ ||೧

ಪರಮ ಸೌಂದರ ನಂಬಿಯರುರು ಪಿರುಮಳೆಯ ಕುರುಂ
ಬರು ಮೆರೆವ ಸೋಮಾಶಿಮಾರರುಂ ಕಲಿಕಾಮ
ರುರುಮಹಿಮ ಮೆರೆಮಿಂಡ ದೇವರುಂ ತಿರುನೀಲಕಂಠ ಕುಶವರು ಭಾವಿಸೇ

ಪಿರಿಯುನಹ ಯಳೆಯಾಂಡ ಗುಡಿಯುಮಾರಂ ಮತ್ತೆ
ನೆರೆಧೀರರಮರನೀತಿಗಳು ಚಿರುತೊಂಡರುಂ
ಧರಣಿಯೊಳು ಮೆರೆವಿಹಪ್ಪಗೆಯಾಂಡರುಂ ಪಗಲ್ತೊಣೆಯಾಂಡ
ದೇವರುಗಳೂ ॥೨॥

ಅಂತ್ಯ : ಕರಮುಂನದಾನಿ ಕವಿಯಿಂದಿಂತು ನುತಿವೆತ್ತ
ವರಪುರಾತನರ ನಾಮಾವಳಿಗಳಂ ನುತಿಪ
ನರರು ಕಳೆಸಿರಿಧರ್ಮಮುತ್ಸವಮಭೀಷ್ಟಿತಂ ಮಂಗಳತೆ ನಿರ್ಮಲತ್ವಂ
ಅರಿದೆನಿಪ್ಪಾತ್ಮವಿದ್ಯೆಯು ಸುಕ್ರುತಮೇಳ್ಗೆಯುಂ
ಪರಿಕಲಿತ ಭುಕ್ತಿಯುಂ ಮುಕ್ತಿಯೆಂದೆಂಬಿವಂ
ಗುರುನಾಖ್ಯ ಜಲರುಹಕರ ಶಿದ್ಧಲಿಂಗನುಂನತ ಕರುಣದಿಂ ಪಡೆವರೂ ॥೮॥
ಇತಿ ಅಂನದಾನಿ ಕವಿವಿರಚಿತ ತ್ರಿಷಷ್ಟಿ ಪುರಾತನರ ನಾಮಾವಳಿಯ
ವಾರ್ಧಿಕಗಳು ಸಂಪೂರ್ಣವಾದವೂ
ಶ್ರೀ ಗುರು ಬಸವಲಿಂಗಾಯ ನಮಃ
ಅರುವತ್ತುಮೂರು ಪುರಾತನರ ನಾಮಾವಳಿಯಂನು ಬರೆಯುವುದಕ್ಕೆ
ಪ್ರಾರಂಭಃ

ಕಂದಃ॥ ಶ್ರೀಗುರು ದೀಕ್ಷಾಗುರು ಶಿ •
ಕ್ಷಾಗುರು ಮೋಕ್ಷಾಧಿಗುರುಗಳುಂ ವರ ಕಗುಣಾ
ಸಾಗರರುಂ ಸಟ ಮಾಡುಗೆ
ರಾಗದಿ ಸದ್ದೀಕ್ಷೆ ಶೀಕ್ಷೆ ಮೋಕ್ಷಗಳೆಮಗಂ ॥೧॥
XXXಅದೆಂತೆನೆ
೧ ಸೌಂದರನಂಬಿಯರು ೨ ಪಿರುಮಳೆಯ ಕುರುಂಬರು
೬೨ ಕಾರಿಕಾಲಂಮೆಯರು ೬೩ ತಿರುನೀಲಕಂಠಪಾಣರು

ಕಂದಃ॥ ಈ ಪರಿಯೊಳ್ ಪುರಾತನ
ರೀ ಪೆಸರ್ಗಳನೊಲ್ದು ಪಾಡುತಂ ವಿಚಕಿಲಸರ
ಸಾಮರಪತಿ ಗುರುಕರುಣದಿ
ತಾಪತ್ರಯುವಳಿದು ತಳೆಪೆನಾ ಪರಸುಖಮಂ ॥೩॥
ಇತಿ ಅಂನದಾನಿಕವಿ ವಿರಚಿತ ತ್ರಿಷಷ್ಟಿ ಪುರಾತನರ ನಾಮಾವಳಿಗಳು
ಸಂಪೂರ್ಣವಾದವು ಶುಭಮಸ್ತು ಶ್ರೀ॥ XX
ಹಂಪಿಾರ ಕಾವ್ಯದೊಳಗಿನ
ಶ್ರೀ ಗುರುಬಸವಲಿಂಗಾಯ ನಮಃ

ಕಂದ॥ ಗೋಕ್ಷೈಚಾಂದ್ರೋಗಾನಿಂ
ವ್ಯೈಕೊಂಕುಂ ಸೂಚಿ ಜೊಂಚಿಕೆ ಮೌಧೂಪಾಂ

ಶೂಕಂ ಚಂದೋೇಹಂ ವಿಂ
ಗೌ ಕೂಚ್ಛಿಕಾಮು ಸೋಹವೊಹಾವುಂ ಗುಂ ||೧||

ವೃತ್ತ || ಹಸವೋ ಜಂಗಮು ಭಾಪುವೊ ಶಿವನಿಶಂ ಮಾರಾಹುರೇ ಹೋಬತಂ
ವಿಶಿಪಂಚಾ ಗುಜವಾತಿದೇಕುಧಧ ಕೆಂಬೊವೂಕದಾನಂ ಪ್ರದಂ
ಅಸುವ್ಮೇ ಶ್ರೀನುತೆ ಜ್ಯೋಕೆಜೂಜೆ ಮೆಬಿಸೆ ಬಾಸಾಹೊವೀದೀಪಕೋ
ಪ್ರಸರಕ್ಕೈಕ ಸುವರ್ನದಿಂ ನುತಿಪೆನಾನತ್ಯಂತಮಾನಾಗ್ರರಂ ||೨||

ಟೀ|| ಗೊ| ಗೊಲ್ಲಾಳನು. ಕೈ–ಕೈಕೂಲಿ ಚಾಮರಸನುXX
ಮೊ–ಮೊರಟದ ಬಂಕಿದೇವ. ಕಾ............... ಮುಂ...............
ಗುಂ............... ||೧||

**ವಿಷಯ :** ಅರುವತ್ತುಮೂರು ಪುರಾತನರ ಹೆಸರುಗಳು

**ವಿಶೇಷ :** ಸಮಗ್ರ, ಸ್ಫುಟಾಕ್ಷರ. ಮೊದಲು ೮ ವಾರ್ಧಕ ಷಟ್ಪದಿಗಳಲ್ಲಿ ಪುರಾತನರ ಹೆಸರೆಲ್ಲ ಸಂಗೃಹೀತವಾಗಿದೆ. ಬಳಿಕ ಪ್ರತ್ಯೇಕ ನಾಮಾವಳಿ ಇದ್ದು ಕೊನೆಯಲ್ಲಿ ಹವ್ಮಿರ ಕಾವ್ಯದಲ್ಲಿ ಬರುವ ಪುರಾತನರ ಹೆಸರುಗಳ ಆದ್ಯಕ್ಷರಗಳನ್ನು ಸೇರಿಸಿ ಒಂದು ಕಂದ ಮತ್ತು ಒಂದು ವೃತ್ತವಿದ್ದು ಆ ಆದ್ಯಕ್ಷರದ ವಿವರ ಮುಂದೆ ಇದೆ. ಆದರೆ ಎಲ್ಲ ಅಕ್ಷರಗಳಿಗೂ ವಿವರವಿಲ್ಲ. ಇದೇ ಕಟ್ಟಿನಲ್ಲಿ ವೈದ್ಯಸಾರವೆಂಬ ಗ್ರಂಥವಿದೆ.

—ಎಸ್ ಎನ್ ಕೆ

## 97

| ಕೆ. ಬಿ. ೭೩೩ | **ಅರುವತ್ತುಮೂವರ ಚಾರಿತ್ರ** | ವಾರ್ಧಕಷಟ್ಪದಿ |
|---|---|---|
| ೮.೨" × ೬.೧" | ಆರಾಧ್ಯದೇವ | ? |
| ೧-೬೦ ಪುಟ | ೧೮ ಪಂಕ್ತಿ | ೨೩ ಅಕ್ಷರ |

**ಆದಿ :** ಶ್ರೀ ಭುಜಂಗೇಶ್ವರಾಯನಮಃ XXXಅರವತ್ತು ಮೂವರ ಪಾದವೇ ಗತಿ|
ಶುಭಮಸ್ತು| ಅರುವತ್ತುಮೂವರ ಚಾರಿತ್ರ.
ಸುರನರೋರಗ ನಮಿತ ಪಾದಪಂಕೇರುಹಂ
ಧರಣಿತಳಕ್ಕೆ ಕೂಷ್ಮಾಂಡ ಗಣನಾಥನಂ
ಹರುಷದಿಂ ಬೀಳ್ಕೊಟ್ಟು ಸುಖಮಿರಲ್ಪೇಳ್ದನಾ ಗಿರಿಜಾರ್ಧದೇಹನೊಲಿದ:||

X X X

ಕೃತಿಯು ಪೆಸರರುವತ್ತು ಮೂವರ ಚರಿತ್ರಮಿಾ
ಕೃತಿಗಧೀಶಂ ಭುಜಂಗೇಶ್ವರಂ ಪ್ರೇಮದಿಂ
ಕೃತಿಗೆ ಸಹಕಾರಿಗಳ್ಸದ್ಭಕ್ತ ಸಮುದಯಂ ಕೃತಿಯಂನೊಲವಿಂ ಪೇಳ್ದವಂ

ಚತುರ ಕವಿತಾ ಮನೋಹರನಿಳಾಭೂಷಣಾ
ನ್ವಿತ ಧರ್ಮಪರನು ಆರಾಧ್ಯದೇಶಂ ಮಹಾ
ಕೃತಿಯಿದಂ ಕೇಳ್ದು ಸಂತೋಷವಂ ಮಾಡದಿಹ ಸುಜನರಾರೀ ಧರೆಯೊಳು
೧–೨೨

**ಅಂತ್ಯ :** ಪುರವ ಸಿಂಗರಿಸಿ ವಸ್ತುಗಳಂ ತರಿಸಿ ಬಂದ
ಧರಣಿಪತಿಗಳ್ಗೆ ನೂತನ ರಾಜಗೃಹಗಳಂ
ವೀಚಿಸಿ ವಿವಾಹಮಂಟಪವ ವಿಸ್ತರಿಸಿಯೆಂದೆನುತಲರಸಂ ಸಚಿವರಂ
ಕರಸಿ ಪೇಳ್ದ ದೊರೆಗಳಿಗೆ ನಿಯಾಮಿಸಿ ಕೂಡೆ
ಪರಿದುದಾ ನಗರದೊಳು ದೇಶದೊಳು ದುರ್ಗದೊಳು
ಪಿರಿಯರೊಳು ಸಿರಿಯರೊಳು ರಾಜಮಂದಿರಗಳೊಳು ವೈವಾಹವಾರ್ತೆ
ಭರದಿಂ|| ೪–೨೫

**ವಿಷಯ :** ಅರುವತ್ತು ಮೂವರ ಪುರಾತನರ ಚರಿತ್ರೆ.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ.

— ಜಿಜಿಎಂ

## 98

| ಕೆ. ಎ. ೫೧೧/೨ | **ಅರುವತ್ತುಮೂವರು ಪುರಾತನರ ತ್ರಿವಿಧಿ** | ತ್ರಿವಿಧಿ |
|---|---|---|
| ೧೨.೨″ × ೬.೪″ | ನಿಜಗುಣ ಶಿವಯೋಗಿ | ಸು. ೧೫೦೦ |
| ೧೦-೧೨ ಪುಟ | ೨೪ ಪಂಕ್ತಿ | ೧೫ ಅಕ್ಷರ |

**ಆದಿ :** ಅರುವತ್ತುಮೂವರು ಪುರಾತನರ ತ್ರಿವಿಧಿ D.No. 678. ಅರುವತ್ತು
ಮೂವರು ಪುರಾತನರ ತ್ರಿಹುದೆ ಬರೆವುದಕ್ಕೆ ಶುಭಮಸ್ತು||
ಶ್ರೀ ಗುರು ನಂಜುಂಡಲಿಂಗಾಯ ನಮಃ| ಸೋಬನಮಸ್ತು|
ಶ್ರೀ ಗುರುವೆ ನಿಜಸುಖದ ಸಾಗರವೆ ತೆರೆ ಮಸಂಗು
ತಾಗುಳಂ ಬೆಳಗುತಿಹ ನಿನ್ನ ಕಡೆಗಣ್ಣ
ಳೀಗೆ ಸಂತಸವನಖಿಳರ್ಗೆ ||೧||

**ಅಂತ್ಯ :** ಯಿಂತು ನಿರುಗುಣ.... ಸಂತಸದೊಳೊರೆದುದನ್ನ
ನಂತ ಮಹಿಮಾಂಬು ಸಿದ್ಧಿ ಶಂಭು ತಾನೊಪ್ಪಿ
ಸಂತಜಂ ಪಾಡಿಸುತವಿರ್ಕೆ ||೭೭||
ಯಿತಿ ಶ್ರೀ ನಿಜಗುಣ ಶಿವಯೋಗಿ ವಿರಚಿತಾಯಾಂ ಅರುವತ್ತುಮೂವರು
ಪುರಾತನರ ತ್ರಿವಿಧಿ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ವೀರಶೈವ ಧರ್ಮದ ಅರುವತ್ತುಮೂವರು ಪುರಾತನರ ಸ್ತುತಿ.

**ವಿಶೇಷ:** ಸಮಗ್ರ. ಈ ಪುಸ್ತಕದಲ್ಲಿ ವಚನಗಳು ಮೊದಲಾದ ೭ ಕೃತಿಗಳಿವೆ.

—ಜಿಜಿಎಂ

## 99

ಕೆ. ೯೯೪/೨೬ **ಅರುವತ್ತು ಸಂವತ್ಸರಂಗಳ ವಾರ್ಧಿಕ** ವಾರ್ಧಕಷಟ್ಪದಿ

೮" × ೨.೨" ? ?

೧೩೩ನೆಯ ಪತ್ರ ೧೫ ಪಂಕ್ತಿ ೪೭ ಅಕ್ಷರ

**ಆದಿ:** ಶ್ರೀ ಗುರು ಬಸವಲಿಂಗಾಯ ನಮಃ
ಪರನಸುಗ್ನೆಯೊಳು ಚತ್ರಜಲತಿಲಯಂತ್ರ
ತಿರಿಗಿ ಬರುವಂತೆ ಬಹದಿವ ಕಾಲಕಲಿತಕೆ
ಗುರಿಯಾದ ಅರುವತ್ತು ಸಂವತ್ಸರಂಗಳ ವಾರ್ಧಿಕ ಷಟ್ಪದದೊಳಗೊರೆ
ವೆನೊ ||ಪ||

**ಅಂತ್ಯ:** ಬುದುವಾರದಲಿ ನೆರೆಯೆ ದನದಾನ್ಯವಮ್ರುತಗಳು
ಸಿರಿಯಾಗಿ ಸುಖಿ ಪೇಳ್ಳೆ ಗುರುವಾರ ಬಂದುಗಕೆ
ಮುದದಿ ಹಿತವಾಗಿ ಸಕಲಸುಕಾರ್ಯ ಸಿದ್ಧ ಗಂಡನ ಮುಂದೆ ಮರಣವಹಳೂ
ವಿದಿತ ಶುಕ್ರನೊಳು ಕರಿದರ್ಮ ಪರುಷನ ಭಕ್ತಿ
ವದಗಿ ಮುತ್ತೈದೆಯಾಗುವಳು ಶನಿವಾರದೊಳು
ಸುದತಿಯರು ನೆರೆಯೆ ಪಾಪಿಗಳಾಗಿ ತಿರಿ....

**ವಿಷಯ:** ಸಂವತ್ಸರಗಳ ಹೆಸರು, ತಿಂಗಳುಗಳ ಹೆಸರು, ವೈನೆರೆದ ಫಲ ಇತ್ಯಾದಿ.

**ವಿಶೇಷ:** ಅಸಮಗ್ರ. ಇದೇ ಕಟ್ಟನಲ್ಲಿ ಬಸವ ತ್ರಿನಿಧಿಯೇ ಮೊದಲಾದ ೨೭ ಕೃತಿಗಳಿವೆ.

—ಜಿಜಿಎಂ

## 100

ಕೆ. ೧೦೧೭ **ಅರ್ಜುನ ಕೊರವಂಜಿ** ಯಕ್ಷಗಾನ

೧೦" × ೧" ? ?

೧-೬೩ ಪತ್ರ ೩ ಪಂಕ್ತಿ ೨೮ ಅಕ್ಷರ

**ಆದಿ:** ಶ್ರೀಮನ್ ಮಹಾ ಚಿದಾನಂದಗುರು ಸಿದ್ಧಲಿಂಗೇಶ್ವರ ಸ್ವಾಮಿಯೇ ಗತಿ. ಶ್ರೀ ಗುರುಭ್ಯೋ ನಮಃ ಶ್ರೀ ನಂಜುಂಡಾಯ ನಮಃ ಬಸವಲಿಂಗಾಯ ನಮಹ.

ಶಂಕೋಧ್ಧಾರಗೆ ಶಾಂತಸ್ವರೂಪಗೆ
ಶಂಕರಪ್ರಿಯನಿಗೆ ಯಂಕಿತದೊಳು ಲ
ಕ್ಷ್ಮಿಕಾಂತೆನ ಶ್ರೀಪಾದಪಂಕಜವಿಭುಗಳಿಗೆ

**ಅಂತ್ಯ :** ಪಾಂಡುವ ಪಾಯುನ ಪ್ರಿಯಸುತಗೆ
ಅಂಗನೆ ಕುಂತಿಯು ವರಪುತ್ರಗೆ
ಅಂಬುಜನಾಭನ ಅನುಜೆ ಸುಭದ್ರೆಗೆ
ಗಂಡುಗಲಿ ಗಾಂಡೀವಿಗೆ ಶೋಬನ ಶೋಬನವೆ.
ಮಂಗಳ ಮಹಾ ಶ್ರೀ ಶ್ರೀ ಶ್ರೀ.

**ವಿಷಯ :** ಅರ್ಜುನ ಕೊರವಂಜಿ ಹಾಡುವಳು. ಭಕ್ತಿ.

**ವಿಶೇಷ :** ಕೃತಿ ಸಂಪೂರ್ಣವಾಗಿದೆ. ಹಸ್ತಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ಹಕರಾ

## 101

ಕೆ.ಬಿ. ೬೯೪/೧೩ **ಅರ್ಜುನ ಜೋಗಿಹಾಡು** ಹಾಡು

೬.೫" × ೮.೩" ? ?

೨೧೨-೨೨೬ **ಪುಟ** ೧೭ ಪಂಕ್ತಿ ೧೮ ಅಕ್ಷರ

**ಆದಿ:** ಹರ ಹರ ಹರನೆ ಜಯತು। ಹರ ಮೂರು ಪುರವ ಗೆದ್ದವನೆ ಜಯತು॥ ಕರುಣಿಸು ಕಾಲಕಂಧರಹರ ಮಹದೇವ। ಪರಮೇಶನಿಗೆ ಜಯತು॥ ಹರ ಹರ ಗಿರಿಜೆಯರಸನಿಗೆ ಜಯತು ॥ಪ॥ ಕಾಲಕಂದರನೆ ಜಯತು। ನೀಲಾಗ್ನಿ ಫಾಲ ಲೋಚನನೆ ಜಯತು। ಕಾಲಕರ್ಮವ ಗೆಲಿದ ಶ್ರೀ ಮನ್ಮಹದೇವ। ಪಾಲಿಸು ಜಗವೆಲ್ಲವ॥ ನೀನೀಗ ಪಾಲಿಸು ಜಗವೆಲ್ಲವಾ ॥೧॥

**ಅಂತ್ಯ:** ಕೈಲಾಸಕೆ ಗಿಳಿಗಳೋಗಿ ಆವಾಗ ಹೇಳಿದವು ಈ ವಾರ್ತೆಯ। ಫಾಲ ಲೋಚನನು ಗಿಳಿಗಳಿಗೆ ಮೇಲಾದ ಪದವೀ ಕೊಟ್ಟನು॥ ಪರಮೇಶ ಮೇಲಾದ ಪದವಿ ಕೊಟ್ಟನು ॥೧೦೩॥

**ವಿಷಯ :** ಶಾಪಗ್ರಸ್ತನಾಗಿದ್ದ ಅರ್ಜುನ ಜೋಗಿಯ ವೇಷವನ್ನು ತಾಳಿದ ಪ್ರಸಂಗ.

**ವಿಶೇಷ:** ಪ್ರತಿ ಚೆನ್ನಾಗಿದೆ. ಕೃತಿ ಸಮಗ್ರವಾಗಿದೆ. ಬರವಣಿಗೆ ಸುಂದರವಾಗಿದೆ. ಇದರೊಂದಿಗೆ 'ರುದ್ರಮುನಿ ಪದ್ಯ' ಮುಂತಾದ ಕೃತಿಗಳಿವೆ.

—ಎಂಪಿಎಂ

## 102

ಕೆ. ೬೬೪/೨೨ **ಅರ್ಧೇಂದುಮೌಳಿ ಶತಕ** ವೃತ್ತ

೯.೫" × ೨.೪" ಗುಮ್ಮಟಾರ್ಯ ೧೫೦೦

೬೮-೭೩ ಪತ್ರ ೧೨ ಪಂಕ್ತಿ ೭೮ ಅಕ್ಷರ

**ಆದಿ :** ಗುರು ಬಸವಲಿಂಗಾಯ ನಮಃ॥ ಗೊಂಮಟಯ್ಯಗಳ ಶತಕ॥
ಶ್ರೀಮತ್ಸರ್ವೇಶ ಲೋಕತ್ರಯ ಜನಕ ಜಗಂನಾಥ ಚಿದ್ರೂಪನಿತ್ಯ।
ವ್ಯೋಮಾಕಾರತ್ವದಿಯೊಂನತೇಯನನುದಿನಂ ಬಂಣಿಸುತ್ತಮೆಯ್ದಲ್॥

ಕಾಮಾರಕೋಟಿ ಕಲ್ಪಂಗಳೊಳಮರ ಫಣೀಂದ್ರರ್ಕಳೆಂಬಂನರಂಸ್ಯ।
ಸಾಮಾನ್ಯರ್ಮರ್ತ್ಯರೇಂ ಬಂಣಿಪರತಿಮುದದಿಂ ನಿಂಮನರ್ಧೇಂದು
ಮೌಳೀಶ್ವರಾ ॥೧॥

**ಅಂತ್ಯ :** ೧೦೭॥ ಸೌರಾಷ್ಟ್ರ ಸೋಮನಾಥಂ ಪ್ರಭು ಗಿರೀಶಪದ ಕ್ಲೈಪಿತಂ ಚಿತ್ರಭಕಿ।
ಶ್ರೀರಾಮಂ ಗುಂಮ್ಮಃಹಾರ್ಯಂ ವಿರಚಿತವೆನಿಪರ್ದೆಂದುಮೌಳಿಸ್ತವಾಖ್ಯಂ॥
ಶೌರಂ ಶೈವಾಗಮೋಕ್ತ ಶಮದವು ನಿಯತಾರ್ಥಪ್ರದಂ ಭಕ್ತಿಂದೋ।
ಲಾರಾಮಂ ನಿಚನಿಚಂ........ಲಿಷ್ಟಾರ್ಥಸೌಖ್ಯಂ ॥೧೦೮॥
ಅರ್ಧೇಂದುಮೌಳಿ ಶತಕ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ ಶ್ರೀ.

**ವಿಷಯ :** ಶಿವಸ್ತೋತ್ರ.

**ವಿಶೇಷ :** ಪತ್ರಗಳ ಅಕ್ಕಪಕ್ಕದ ಅಂಚು ತ್ರುಟಿತ. ಈ ಕೃತಿಯಲ್ಲದೆ ಇದೇ ಕಟ್ಟಿನಲ್ಲಿ ಗುರುಶಂಕರ ಶತಕಾದಿ ೧೭ ಕನ್ನಡ ಗ್ರಂಥಗಳೂ, ಭವಾನಿ ಭುಜಂಗ ಸ್ತೋತ್ರಾದಿ ೧೬ ಸಂಸ್ಕೃತ ಗ್ರಂಥಗಳೂ, ೧ ತೆಲುಗು ಕೃತಿಯೂ ಇವೆ.

—ಎಸ್ ಬಿ

## 103

| ಕೆ. ೧೧೩೮/೧೬ | **ಅರ್ಧೇಂದುಮೌಳಿ ಶತಕ** | ವೃತ್ತ |
|---|---|---|
| ೭" × ೧.೯" | ಗುಮ್ಮಟಾರ್ಯ | ೧೫೦೦ |
| ೧೦೪-೧೧೧ ಪತ್ರ | ೧೧ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಗುಮ್ಮಟೈಯಂಗಳ ಶತಕ॥

ಮ॥ಸ್ರ॥ ಶ್ರೀಮತ್ಸರ್ವೇಶ ಲೋಕತ್ರಯ ಜನಕ ಜಗನ್ನಾಥ ಚಿದ್ರೂಪ ನಿತ್ಯ
ವೋಮಕಾರತ್ವದಿಯೋನತೇಯನನುದಿನಂ ಬಣ್ಣಿ ಸುತ್ತಂತವೆಯ್ದಲ್
ತಾಮರಕೋಟಿಕಲ್ಪಂಗಳೊಳಮರ ಫಣೀಂದ್ರರ್ಕಳೆಂಬಂನರಸ್ಯ
ಸಾಮಾನ್ಯ ಮರ್ತ್ಯರೇಂ ಬಂಣಿಪರತಿಮುದದಿಂ ನಿಂಮನರ್ಧೇಂದುಮೌಳಿ
॥೧॥

**ಅಂತ್ಯ :** ಸೌರಾಷ್ಟ್ರಂ ಸೋಮನಾಥಂ ಪ್ರಭುಃಗಿರಿಶಪದಕ್ಲೇಪಿತಂ ಚಿತ್ರ ಭಕ್ತಿ
ಶ್ರೀರಾಮಂ ಗುಮ್ಮಟಾರ್ಯಂ ವಿರಚಿತವಿನಿಪ್ಪರ್ಧೇಂದುಮೌಳಿಸ್ತವಾಖ್ಯಂ
ಕ್ಷಾತ್ರ ಶೈವಾಗಮೋಕ್ತಂ ಸಮುದಮನೀಯತಾತ್ಥಪ್ರದಂ ಭಕ್ತಿಯಿಂದೂ
ಲ್ದಾರಾಮಂ ನಿಚ್ಚನಿಚ್ಚಂ ಪಠಿಯಿಸಿದವರ್ಗಕ್ಕಂ ವಿಶಿಷ್ಟಾರ್ತಸೌಖ್ಯಂ
॥೧೦೮॥

ಅರ್ಧೇಂದು ಮೌಳಿಯ ಶತಕ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ಈಶ್ವರ ಸ್ತುತಿ.

**ವಿಶೇಷ :** ಈ ಕಟ್ಟಿನಲ್ಲಿ ಗುರು ರಗಳೆ, ಷಡಕ್ಷರಿ ರಗಳೆ ಇತ್ಯಾದಿ ೨೯ ಕೃತಿಗಳಿವೆ.

—ಜಿಜಿಎಂ

## 104

ಕೆ. ೧೧೯೪/೧೩ **ಅರ್ಧೇಂದುಮೌಳಿ ಶತಕ** ವೃತ್ತ
೭.೨" × ೧.೭" ಗುಮ್ಮಟಾರ್ಯ ೧೫೦೦
೧೩೨-೧೪೭ ಪತ್ರ ೯ ಪಂಕ್ತಿ ೩೨ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಗುಂಮಟಯ್ಯಗಳ ಶತಕ॥
ಶ್ರೀಮತ್ಸರ್ವೇಶ ಲೋಕತ್ರಯ ಜನಕ ಜಗಂನಾಥಾ ಚಿದ್ರೂಪ ನಿತ್ಯ
ವ್ಯೋಮಕಾರತ್ವದಿಯೊಂನತೆಯನನುದಿನಂ ಬಂಣಿಸುತ್ತಂತ ಮೆಯ್ದಲ್
ತಾಮಾರಕ್ಕೋಟಿ ಕಲ್ಪಂಗಳೊಳಮರ ಫಣೀಂದ್ರರ್ಕಳೆಂಬಂನರನ್ಯಾ
ಸಾಮಾನ್ಯರ್ಮತ್ತ್ಯರೆಂಬಣಿಪರತಿಮುದದಿಂನೆಂಪುನರ್ಧೇಂದುಮೌಳೀ
॥೧॥

**ಅಂತ್ಯ :** ಸೌರಾಷ್ಟ್ರಂ ಸೋಮನಾಥಂ ಪ್ರಭು ಗಿರೀಶ ಪದಕ್ಷೇಪಿತಂ ಚಿತ್ರಭಕ್ತಿ
ಶ್ರೀರಾಮಂ ಗುಂಮಟಾರ್ಯ ವಿರಚಿತಮೇನಿಪರ್ಧೇಂದುಮೌಳಿಸ್ತವಾಕ್ಯಂ
ಶೌರಂ ಶೈವಾಗಮೋಕ್ತಂ ಸಮದ ಮುನಿಯತಾರ್ತ್ಥಪ್ರರಂ ಭಕ್ತಿಯಿಂದೊ
ಲ್ದೋರಾಮಂ ನಿಚ್ಚ ನಿಚ್ಚಂ ಪಠಿಯಿಸಿದಮರ್ಗಕ್ಕು ವಿಶಿಷ್ಟಾರ್ಥ ಸೌಖ್ಯಂ
॥೧೦೮॥

ಅರ್ಧೇಂದು ಮೌಳಿಯ ಶತಕಂ ಸಂಪೂರ್ಣ ಮಂಗಳ ಮಹಾಶ್ರೀ.

**ವಿಷಯ:** ಭಕ್ತಿ, ವೈರಾಗ್ಯಗಳ ನಿರೂಪಣೆ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಬಸವಸ್ತೋತ್ರದ ತ್ರಿವಿಧಿ, ಅಷ್ಟಾವರಣ ಸ್ತೋತ್ರದ ತ್ರಿವಿಧಿ, ಷಡಕ್ಷರಿಯ ಕಂದ, ಅಕ್ಷರಮಾಲಿಕಾ ಗದ್ಯ, ಮಹದೈ ಪುರೀಶ್ವರ ಶತಕ, ಶಿವಾಧವ ಶತಕ ಮೊದಲಾದ ಕೃತಿಗಳಿವೆ.

—ವೈಸಿಬಿ

## 105

ಕೆ. ೧೭೫೩/೨೭ **ಅರ್ಧೇಂದುಮೌಳಿ ಶತಕ** ವೃತ್ತ
೮" × ೨.೪" ಗುಮ್ಮಟಾರ್ಯ ೧೫೦೦
೧೧೦-೧೨೦ ಪತ್ರ ೧೩ ಪಂಕ್ತಿ ೪೨ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಗುಂಮಟ ಶತಕ॥ ಶ್ರಗ್ದರ

ಶ್ರೀಮತ್ಸರ್ವೇಶ ಲೋಕತ್ರಯ ಜನಕ ಜಗಂನಾಥ ಚಿದ್ರೂಪ ನಿತ್ಯಾ
ವ್ಯೋಮಾಕಾರ ತ್ವದೀಯೋಂನತಿಯನನುದಿನಂ ಬಣ್ಣಿ ಸುತ್ತಂತಮೆಯ್ದಲ್
ತಾಮಾರರ್ಕೋಟಿ ಕಲ್ಪಂಗಳಮಱ ಫಣೀಂದ್ರರ್ಕಳೆಂಬಂನರನ್ಯ
ಸ್ವಾಮಾನ್ಯರ್ಮರ್ತರೇಂ ಬಂಣಿಪರತಿಮುದದಿಂನಿಂಮನರ್ಥೇಂದುಮೌಳೀ
||೧||

ಅಂತ್ಯ : ಕಂದ|| ಯಿಾ ಶತಕವ ಪೇಳಿದವರ್ಗಂ
ಶಾಶ್ವತನಂ ಗುಂಮಟಾರ್ಯ್ಯ ಸಿವನೊಲಿದಾಗಂ
ಲೇಸಾಗಿಯೆ ವೋದಿ ಪಠಿಯಿಸೆ
ಯಿಾಶನೊಳಗೆ ಬರದು ಮುಕ್ತಿಪಡೆವ್ರದು ಸುಜನಂ
ಅರ್ಥೇದುಮೌಳಿಯ ಶತಕ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಹಸ್ತ ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಚಂದ್ರಲೇಖಾವತಂಸ ಶತಕ ಮೊದಲಾದ ೪೭ ಕೃತಿಗಳಿವೆ.

—ಜಿಜಿಎಂ

## 106

ಕೆ. ಎ. ೫೯೬/೧ **ಅಲಂಕಾರಗೀತ ತಾನ** ಹಾಡು
೧೦.೨" × ೭.೯" ? ?
೧-೫ ಪತ್ರ ೨೩ ಪಂಕ್ತಿ ೨೮ ಅಕ್ಷರ

**ಆದಿ :** ಸರಳೆ ವರಿಶೆ ಅಲಂಕಾರಗೀತ ತಾನಗಳ ಬರೆಯುವದಕ್ಕೆ ಅವಿಘ್ನಮಸ್ತು||
ಸರಿಗಮ| ಪದನಿಸ| ಸನಿಧಪ| ಮಗರಿಸ ||೧||
ಸರಿಗಮ| ಸರಿಗಮ| ಸರಿಗಮ| ಪದನಿಸ|
ಸನಿಧಪ| ಸನಿಧಪ| ಮಗರಿಸ|| ||೨||

**ಅಂತ್ಯ :** ........ಪಧನಿಸ| ರಿಸಿ ನಿಸ| ದನಿ ಧಪ| ಪಧ ಸನಿನಿ ಧಧಪ| ಧಪಮಪ|
ಪರಿ ಅ....ಭಳಾ| ಜ ಅಅಅಣು| ಮ ಅಅಅಧ್ಯ| ಚಿನ್ಮಯ| ಮಗರಿಸ|
ಸರಿ ಸ ಗ ಗಾ ಗಾ| ರಿಗಮಪ| ಮಗಗರಿ| ರಿಗ ಮಗಗರಿ| ....ವ್ರವ್ರಪಾವೇ|
ದಾಂತಾ| ವೇೀೀದ್ಯ| ಪುರ ರಿಣ ಪುವುರೂರಿ ಗರಿಸಾ ಸಾಗಿರ ||೩೦||

**ವಿಷಯ :** ಸಂಗೀತ.

**ವಿಶೇಷ :** ಪತ್ರಗಳಿಗೆಲ್ಲ ಹುಳು ಹೊಡೆದಿದೆ. ಇದೇ ಪುಸ್ತಕದಲ್ಲಿ ತಿರುವೆಂಕಟಾಚಾರ್ಯರ ಚರಿತ್ರೆ, ಸರ್ವಸಾರ ಸಂಗ್ರಹ ಶ್ಲೋಕ ಲೇಖನ, ಅಂಬಾ ನವರತ್ನಮಾಲಿಕಾ ಗ್ರಂಥಗಳೇ ಮೊದಲಾದ ಇತರ ೬ ಕೃತಿಗಳಿವೆ.

—ಕೆಆರ್‌ಎಸ್

## 107

ಕೆ. ೧೬೬೬ **ಅಲಂಕಾರ ರೀತಿನಿರ್ಣಯು** ಶ್ಲೋಕ, ಗದ್ಯ ಪದ್ಯ

೧೧.೫″ × ೨″ ? ?

೧-೯೨ ಪತ್ರ ೮ ಪಂಕ್ತಿ ೪೦ ಅಕ್ಷರ

**ಆದಿ :** ....ಸಾಲಂ ........ಭಾವ ಸಂಚಾರಿ ಸಾತ್ವಿಕಂಗಳಿಂ। ರತಿಸ್ಥಾಯಿ ಪುಷ್ಟ ........ಯಿತ್ತೆರಂ। ಸಂಭೋಗ ಶೃಂಗಾರ ಪ್ರಚ್ಛನ್ನವೆಂದು। ಪ್ರಕಾಶವೆಂದು ಯೆರಡು ಭೇದಂ। ರಸಕಳಿಕೆಯು ಪದ್ಧತಿಯಿಂ। ಶೃಂಗಾರೋದ್ದೀಪನಂ ಆಲಂಬನಗುಣ ಆಲಂಬನ ಚೇಷ್ಟೆ ಆಲಂಬನಾಲಂಕರಣ। ಆಲಂಬನತಟಸ್ಥ ವೆಂದು ಅಲ್ಲಿ ನಾಲ್ಕು ತೆರಂ। ಅಲ್ಲಿ ಆಲಂಬನ ಗುಣ। ರೂಪು ಯುವುವನ ಮುಖ್ಯವಾದುದು। ಆಲಂಬನ ಚೇಷ್ಟೆ। ತದನುಭವವೆಂದು ಯರಡು ಭೇದ। ಆ ಅಪದವೆಂಬುದು ಭಾವ। ಪರಾವ। ಮೆಳೆ। ಶೋಭೆ। ಕಾಂತಿ। ದೀಪ್ತಿಮಾದೂರ್ಯ ಪ್ರಾಗಲ್ಭ್ಯಂ। ಔದಾರ್ಯ। ಧೈರ್ಯ।

**ಅಂತ್ಯ :** ಆದಿಶಬ್ದದಿಂ ರಜನಿ ರಜನಿಪತಿ ಸಂಭೋಗಕ್ಕೆ॥

ಕಂದ॥ ಪರದಿರೆ ತಿಮಿರಕಚಂ ನೆರೆ
ನೆರದಿರೆ ಭಗಣಚ್ಛೇದ ಜಲಸಮೂಹಂ
ರಾಗಂಬೋರದಿರೆ ಚ
ಕೋರ ನಯುನಯುನಂ ಕರವೆಸೆದಂ
ನೆರೆದು ರಜನಿ ರಜನಿಪತಿಯೊಳ್ ॥೧೯॥

ವೃತ್ತ॥ ಪೊಸ ಮಕರಂದವೆಂಬ ಬೆಮರುಣ್ಮಿರೆ ತಂಬೆಲರೆಂಬ ಸುಯ್ಯೆಲ್
ಪಸರಿಸೆ ಗುಚ್ಛವೆಂಬ ಮೇಲು ಚಪ್ಪರ....

**ವಿಷಯು :** ಆಲಂಕಾರ ರೀತಿ ನಿರ್ಣಯ.

**ವಿಶೇಷ :** ಗುಂಡಾದ ಅಕ್ಷರ. ಅಸಮಗ್ರ ಪ್ರತಿ. ಮೊದಲನೆ ಗರಿಯ ಅಂಚು ಮುರಿದಿದೆ.

—ವೈಸಿಬಿ

## 108

ಕೆ. ಬಿ. ೬೨೭/೩ **ಅಲ್ಲಮುನ ಹಾಡು** ಹಾಡು

೮.೮″ × ೫.೪″ ? ?

೧-೨ ಪತ್ರ ೧೧ ಪಂಕ್ತಿ ೨೦ ಅಕ್ಷರ

**ಆದಿ :** ಅಲ್ಲಂಮುನ ಟವಮಾಲ್ಲನೆ ಬರುತನ ಸುವಳೆ ಸುವಳೆ॥
ತಲ್ಲಣಂತ ಚಂನಬಂಸವಣ॥ ಸುವಳೆ ಸುವಳೆ

ತಂಲ್ಲಿಯಣತ ಚನ ಬಸವಣ ತರುಪಗ|| ಸುವಳಿ||
ಕಲ್ಲು ತೆಳುಗುಳು ಯಲ್ಲ ಬಹಿಲ್ಲಳಿ|| ಸುವಳಿ||

**ಅಂತ್ಯ :** ಪಥನಲ್ಲ ಮುಂದಗಿ ನಡೆದವ ಸುವಳಿ
ಪಡವಲ್ಲ ಮುಂದಗಿ ನಡದವ ಹುಲ್ಲಿಂಗಳಿಗೆ|| ಸುವಳಿ
ಕೊಡೆವ ಆವೊಗಳು ನುಡಿಂದರು|| ಸುವಳಿ||
ಧರ್ಮದ ಕಿಡದುನಿಗಮುಕದವೊವೊ ... ಪಿಡೆದು|| ಸುವಳಿ

**ವಿಷಯ :** ಅಲ್ಲಮ ಪದ.

**ವಿಶೇಷ :** ಅಸಮಗ್ರ. ಇದೇ ಪುಸ್ತಕದಲ್ಲಿ ಸೋಮಶೇಖರನ ಚೌಪದ, ಜಗನ್ನಾಥಿಯ ಕಥೆ ಎಂಬ ಇನ್ನೆರಡು ಗ್ರಂಥಗಳಿವೆ. ಬರಹವು ದಪ್ಪಗಿದ್ದರೂ ಓದಲು ಕಷ್ಟಸಾಧ್ಯ.

—ಕೆಆರ್‌ಎಸ್

## 109

ಕೆ. ೧೨೫೩/೮ **ಅಲ್ಲಮಪ್ರಭುದೇವರ ನಟನತಾರಾವಳಿ** ಹಾಡು
೭.೮″ × ೨″ ಮರಿರಾಚವಟ್ಟದೇವ ಸು. ೧೬೫೦
೧೧೩-೧೨೫ ಪತ್ರ ೧೧ ಪಂಕ್ತಿ ೩೨ ಅಕ್ಷರ

**ಆದಿ :** ಶ್ರೀ ಗುರು ಪ್ರಭುವೆ ಶರಣು| ಅಲ್ಲಮ ಪ್ರಭುದೇವರ ನಟನಾ ತಾರಾವಳಿ||
ರಾಗ ಕಂನಡ ಕಾಂಭೋದಿ||
ಪಲ್ಲ|| ಯೆಂತು ನುತಿಪೆ ನಿಂನ ಯೆತಿಗಳ ಕಲೆ ರಂನ್ನ
ಕಂತುವಿಜಯ ಜೀಯ ಪ್ರಭುರಾಯ ನಿರ್ಮಾಯಾ ನಾ
ನೆಂತು ನುತಿಪೆ ನಿಂನಾನೂ||
ಪದ|| ನಿರುತ ನಿರಂಜನ ಶೂಂನ್ಯ ನಿಷ್ಕಲ ಪರ
ತರ ಸುಮಹಾಲಿಂಗ ಶಿವ ಸದಾಶಿವನಾದ
ಪರಿ ಪೂರ್ಂಣಬ್ರಂಹ್ಮ ವೇಶಿ ಪಂಚಲಾಪಸಥಿಂನೊ
ಪ್ಪರು ತಿರಲಲ್ಲಿಗೆ ಮಾಯ ಕೋಳಾಹಾಳಾ||

**ಅಂ್ಯ :** ಕಂದ|| ಗರುಣಿಯ ಬಸವೇಶಂ ಪ್ರಭು
ಗುರುನುತಿಯಂ ಮಾಳ್ಪುದೆಂದು ಕರೆದೆನಗಜಿಪ
ಲ್ದಿ ರಚಿಸಿದೆಂ ಪ್ರಭುನಟನಾ
ವರ ತಾರಾವಳಿಯನಿಳಿಗೆ ತಿಳಿವವೊಲುಜಿತ ನಾಂ ||೧||
... ತಿರೆ ಪ್ರಭು ನಟನಾ ತಾರಾವಳಿವಿದು ಸಮಸ್ತ ಭಕ್ತ ಮಾಹೇಶ್ವರ ರಾರೈದು ಪಟಿಸಿ ನುತಿಸ... ಪ್ಪ ಸಿದ್ಧಿ ವೃದ್ಧಿಗಳಕ್ಕುಂ ||೨|| ಅಲ್ಲಮ ಪ್ರಭು ದೇವರ ನಟನಾ ತಾರಾವಳಿ ಸಮಾಪ್ತ ಮಂಗಳ ಮಹಾ||

**ವಿಷಯ :** ಪ್ರಭುದೇವರು ಮದ್ದಳೆಯನ್ನು ಮಾಯೆಯ ನರ್ತನಕ್ಕೆ ಬಾರಿಸಿದ ಪ್ರಸಂಗ.

**ವಿಶೇಷ :** ಬರವಣಿಗೆ ಸುಂದರವಾಗಿದೆ. ಕೆಲವು ಪತ್ರಗಳು ಕೊನೆಯಲ್ಲಿ ತ್ರುಟಿತವಾಗಿವೆ. ಶಕಟರೇಫದ ಬಳಕೆಯಾಗಿದೆ. ಈ ಕಟ್ಟಿನಲ್ಲಿ 'ಅಷ್ಟಾವರಣ ಚರಿತೆ' ಮುಂತಾದ ಇತರೆ ೮ ಕೃತಿಗಳಿವೆ.

—ಎಂಪಿಎಂ

## 110

## ಅಲ್ಲಮಪ್ರಭುವಿನ ಅಷ್ಟಕ

ಕೆ. ೧೮೩೦/೨ ವೃತ್ತ
೯.೫″ × ೧.೮″ ? ?
೧೮ನೆಯ ಪತ್ರ ೯ ಪಂಕ್ತಿ ೫೨ ಅಕ್ಷರ

**ಆದಿ :** ಅಲ್ಲಾ ಮಹಾ ಪ್ರಭುವಿನಾ ಅಷ್ಟಾಕಾ||
ಶ್ರೀ ರಮಣಯಿಂದ್ರಾದಿ ವಂದಿತಾ ಚರಣನಂ ಶುಭಕರಣನಂ
ಮಾರನುದಸಂಹಾರ ನಿರ್ಮಲಪೂರನಂ ಸುಶರೀರನಂ
ಕಾರುಣಿಕಮಹಾತ್ಮಾ ನುತಜನಪಾಲನಂ ದಯಸೀಲನಂ
ಧೀರ ಗುಣಗಂಭೀರನಲ್ಲಮದೇವನಂ ಸುಕವೀವನಂ ||೧||

**ಅಂತ್ಯ :** ವಿಮಲಚಿತ್ತನಾ ವಿಬುಧಜನನುತಕಾಯನಂ ನಿರ್ಮಾಯನಂ
ಪ್ರಮಥಪೂಜಿತಾಮದಾನಾಮದಾ ಗಿರಿಶಂಭನಂ ಸಿವನಂ ಚನು ಕ್ರಮಧಿ ಶರಣರಾಹು

**ವಿಷಯ :** ಅಲ್ಲಮಪ್ರಭುವಿನ ಸ್ತುತಿ.

**ವಿಶೇಷ :** ಕೆ. ೧೦೩೨ ಮತ್ತು ಕೆ ೧೦೩೩ರಲ್ಲಿರುವ ಕೃತಿಗಳೂ ಈ ಕಟ್ಟಿಗೆ ಸೇರಿದುವು.

—ಜಿಜಿಎಂ

## 111

## ಅಲ್ಲಮಪ್ರಭುವಿನ ಪದಗಳು

ಕೆ. ೮೪೫/೧ ಹಾಡು
೫.೮″ × ೧″ ? ?
೬ ಪತ್ರ ೫ ಪಂಕ್ತಿ ೨೨ ಅಕ್ಷರ

**ಆದಿ :** ಶ್ರೀ ಶಾರದಾಯೆ ನಮಃ! ರಾಗ ಸೌರಾಷ್ಟ್ರ!
........ದಿಂದಿಪ್ಪವೈದು ಲೀಲೆಯಾ।
ಬಲ್ಲಷ್ಟ ಪೇಳುವ....ದ ಕೇಳಿ ನೀವು ||ಪಲ್ಲ||
ನಿರಹಂಕಾರ ಸಜ್ಞಾನದ........ ಪರಿಪರಿ ವಿಧದಲಿ ಮೆರದು ತೋರಿದ
ತಾನು........ ಉರುತರ ಯೌವನ ರೂಪ........ ಮಧುಕೇಶನಲ್ಲಿಗೆ

ಅಂತ್ಯ : ಬಹ ಕಾಲಜ್ಞಾನವಿಂತೆಂದು ಪೇಳಿದ ಲೋಕವರಿಯಲೆಂದೂ
ಸ....ರ್ವರಿಹ ಕಾಲದಲಿ ತಿಳು....ದ ಕಾಲಜ್ಞಾನ ನಿರುಪಮ ಲೀಲೆಯಾ
....ಹುದಹುವಿಂತಲ್ಲವಿಂನ್ನು ತೋರುವನಾನಂತಲೀಲೆಯಾ
ವರ ಮಹಿ....ರೊಳೆಸದು ತೋರುವ ಪ್ರಭುಗಂಗೇಶ ಲಿಂಗಲೀಲೆಯ ||೬||

ವಿಷಯ : ಅಲ್ಲಮ ಪ್ರಭುವನ್ನು ಕುರಿತ ಹಾಡುಗಳು.

ವಿಶೇಷ : ಅಸಮಗ್ರ. ಅತ್ಯಂತ ಶಿಥಿಲ ಪ್ರತಿ. ಪತ್ರಗಳ ಅಂಚು ಮುರಿದು ಗ್ರಂಥ ಲುಪ್ತ. ಇದೇ ಕಟ್ಟಿನಲ್ಲಿ ಇಮ್ಮಡಿಯ ಕೆಂಪರಾಯನನ್ನು ಕುರಿತು ಬೇರೆ ಬೇರೆ ರಾಗದ ಎರಡು ಪುಸ್ತಕಗಳಿವೆ.

—ವೈಸಿಬಿ

## 112

| ಕೆ.ಎ. ೫೧೪/೧ | ಅಲ್ಲಮಪ್ರಭು ಸಂಗೀತ | ಹಾಡು |
|---|---|---|
| ೧೦.೪" × ೯" | ? | ? |
| ೧-೩ ಪುಟ | ೨೦ ಪಂಕ್ತಿ | ೨೪ ಅಕ್ಷರ |

ಆದಿ : ಶ್ರೀ ಶಾರದಾಯ್ಯೆ ನಮಃ|| ರಾಗ ಸೌರಾಷ್ಟ್ರ
ಅಲ್ಲಮಪ್ರಬು ಲಿಂಗನನುಪದಿಂದಿಪ್ಪವೈದುರಿತೆಯಾ
ಬಲ್ಲಷ್ಟ ಪೇಳುವೆನಧಿಕ ಹರುಷದಿಂದ ಕೇಳಿ ನೀವೂ ||ಪಲ್ಲ||
ನಿರಹಂಕಾರ ಸುಜ್ಞಾನದೇವಿಯರಿಗೆ ವರದನಾಗಿ ಚೆಲ್ವ
ಪರಿಪರಿ ವಿಧದಲಿ ಮೆರದು ತೋರಿದ ತಾನು ಬಾಲಲೀಲೆಯ||
ಉರುತರ ಯೌವನ ರೂಪ ತಳೆದು ಮಧುಕೇಶನಲ್ಲಿಗೆ ಹೋಗಿ
ಪಿರಿದು ತೋರಿಸಿದ ಸಕಲರಹುಡೆನಲು ಮುಡಂಗಲೀಲೆಯಾ ||೧||

ಅಂತ್ಯ : ಬಹುಕಾಲ ಜ್ಞಾನವಿಂತೇದು ಪೇಳಿದು ಲೋಕ ಪರಿಯಲೆಂದು
ಸರ್ಭರ್ರಿಹ ಕಾಲದಲ್ಲಿ ತಿಳಿದು ಕಾಲಜ್ಞಾನ ನಿರುಪಮುರಿಲೆಯಾ
ಅಹುದುಹುದುದಿಂತಲ್ಲವಿಂನ್ನು ತೋರುವನಾನಂತ ಲೀಲೆಯಾ
ವರ ಮಹಾರೊಳೆಸದು ತೋರುವ ಪ್ರಭುಗಂಗೇಶಲಿಂಗ ಲೀಲಯಾ ||೧೩||

ವಿಷಯ : ಅಲ್ಲಮ ಪ್ರಭುವಿನ ಸ್ತುತಿ.

ವಿಶೇಷ : ಸಮಗ್ರ. ಇದರ ಜೊತೆಗೆ ಇಮ್ಮಡಿ ತಮ್ಮರಾಯ ಕೆಂಪರಾಯ ಪದಗಳು, ವೈಭೋಗ ರಾಜಾಸ್ಥಾನ ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 113

| ಕೆ.ಎ. ೩೭೪/೧ | ಅಲ್ಲಮಪ್ರಭು ಸಂಗೀತ ಪದ | ಹಾಡು |
|---|---|---|
| ೧೦.೨" × ೯.೪" | ? | ? |
| ೧-೩ ಪತ್ರ | ೨೦ ಪಂಕ್ತಿ | ೨೧ ಅಕ್ಷರ |

**ಆದಿ :** ರಾಗ ಸೌರಾಷ್ಟ್ರ
ಅಲ್ಲಮಪ್ರಭು ಲಿಂಗನನುಪಮ....ದಿಂದಿಪ್ಪವೈದು ಲೀಲೆಯಾ।
ಬಲ್ಲಷ್ಟ ಪೇಳುವೆನಧಿಕ ಹರುಷದಿಂ.... ಕೇಳಿ ನೀವೂ ॥ಪಲ್ಲ॥
ನಿರಹಂಕಾರ ಸುಜ್ಞಾನದೇವಿಯರಿಗೆ ವರ....ದನಾಗಿ।
ಚಲ ಪರಿ ಪರಿ ವಿಧದಲಿ ಮೆರೆದು ತೋರಿದ ತಾನು ಬಾ....ಲೀಲೆಯಾ॥
ಉರುತರ ಯೌವನ ರೂಪ ತಳೆದು ಮಧುಕೇಶನಲ್ಲಿಗೆ।
....ಪೋಗಿ ಪಿರಿದು ತೋರಿಸಿದ ಸಕಲರಹು....ಸ್ಯಡಲಿಂಗ ಲೀಲೆಯಾ ॥೧॥

**ಅಂತ್ಯ :** ಬಹ ಕಾಲಜ್ಞಾನವಿಂತೆಂದು ಪೇಳಿದ ಲೋಕವರಿಯಲೆಂದೂ।
ಸರ್ವರಿಹ ಕಾಲದಲಿ ತಿಳಿವದ ಕಾಲಜ್ಞಾನ ನಿರುಪಮ ಲೀಲೆಯಾ ॥೨೪॥
ಅಹುದಹುದಿಂತಲ್ಲವಿನ್ನು ತೋರುವನಾನಂತ ಲೀಲೆಯಾ।
ಪರಮಹಿಮರೊಳೆಸೆದು ತೋರುವ ಪ್ರಭು ಗಂಗೇಶ ಲಿಂಗಲೀಲೆಯಾ ॥೨೫॥

**ವಿಷಯ :** ಅಲ್ಲಮ ಪ್ರಭುವಿನ ಸ್ತುತಿ.

**ವಿಶೇಷ :** ಅಸಮಗ್ರ. ಇದರೊಡನೆ ಇಮ್ಮಡಿ ಕೆಂಪರಾಯ ಪ್ರಶಸ್ತಿ ಗ್ರಂಥ ಇದೆ.

—ಬಿಎಸ್‌ಎಸ್

## 114

| ಕೆ.ಎ. ೩೬೮ | ಅಲ್ಲಮಪ್ರಭು ಸಾಂಗತ್ಯ | ಸಾಂಗತ್ಯ |
|---|---|---|
| ೧೦.೫" × ೯.೬" | ? | ? |
| ೧-೫೧ ಪುಟ | ೨೦ ಪಂಕ್ತಿ | ೨೩ ಅಕ್ಷರ |

**ಆದಿ :** ಅಲ್ಲಮಪ್ರಭು ಸಾಂಗತ್ಯ
ಪೇಳೆಹುದರ ನುಡಿಯು ಕೇಳ್ವನಲ್ತೆ ನಿನು
ಗಾಳಿಗೂಳರ ಮಾತು ಸೊಗಸು ಮುಖದೋಳ್ಳಿತ।
ತಾಳಿಕೊಂಡಿಪೆಯು ಸಾಕ್ಯಸೆಂಬನ ಕೆಣಕಿ
ಕಲ್ಲಲಿಡಿಸಿಕೊಂಡೆಯೆಯಾ॥
ಸೂಳೆಯಂಜಲನುಂಡು ಹಾವಿನ ಹಗೆಯಂ ಪೊತು
ಪೇಳ್ವೆನೆ ನಿನಗೆ ಪೊಂಗೊಟ್ಟ।
ಗಿರಿರಾಜ ಭೂಪಾಲನೆಕ್ಕಲ್ಲೆದಯಾಪಂ। ಭೋಗವಮ್ಮಲ್ಲಾ ॥ಪದನೂ॥

ಇತ್ತ ಅಲ್ಲನು ತನ್ನ ನೆನೆವ ಭಕ್ತರಿಗೆಲ್ಲ
ನಿತ್ಯ ಪದವನೀಯುತಿರಲೂ।
ಚಿತ್ತದೊಳಗೆ ನೆನೆದನು ಪಾರ್ವತಿ ಪರಶಿವ
ಗಿತ್ತ ಬಾಸೆಯ ಬಲುವೆಯನೂ ॥ ॥

**ಅಂತ್ಯ :** ಇರುತಿರಲೊಂದು ದಿವಸ ಹರುಷದಿ ಭೂ
ವರನ ಮೇಲಣ ಕೃಪೆಯಿಂದಾ।
ಗುರು....ವನಿಂ ಶಂಕರಾಚಾರ್ಯರು
ಅರಮನೆಗಾಕ್ಷಣ ಬರಲು ॥೧೬॥

X X X

ಪೊರೆದಾ ಗಾಜಿನನ ನೆಲೆಗಟ್ಟು।.......
ಚಂನ ಗಂಪಾ ಮಾಯೆಯು ಮದುಲಿಂಗಕೆ। ಮ....
....ಬರುವಾ। ನಂದಕೆ ಪ್ರತಮದಾ। ಸಂ....

**ವಿಷಯ :** ಅಲ್ಲಮಪ್ರಭು ಮತ್ತು ಮಾಯಾದೇವಿಯರ ಪ್ರಸಂಗ.

**ವಿಶೇಷ :** ಅಸಮಗ್ರ ಪ್ರತಿ. ಮೊದಲ ಸಂಧಿಯ ಮೊದಲ ಪದ್ಯಗಳು ೩೮ನೇ ಪುಟದಲ್ಲಿವೆ. ಈ ಪ್ರತಿಯನ್ನು 25-11-50ರಲ್ಲಿ ಮದರಾಸು ಪ್ರಾಚ್ಯಕೋಶಾಗಾರದಲ್ಲಿ D1794ರಿಂದ ಪ್ರತಿ ಮಾಡಲಾಗಿದೆ. ಪ್ರತಿ ಮಾಡಿದವರು ಶ್ರೀ ಎನ್. ನಾರಾಯಣ ಮಧ್ಯಸ್ಥ.

—ಬಿ ಎಸ್ ಎಸ್

## 115

| ಕೆ. ಬಿ. ೭೦೧/೨ | **ಅವಗಡ ನಕ್ಷತ್ರ** | ಗದ್ಯ |
|---|---|---|
| ೬.೫" × ೮" | ? | ? |
| ೨ ಪತ್ರ | ೧೬ ಪಂಕ್ತಿ | ೧೮ ಅಕ್ಷರ |

**ಆದಿ :** ಅವಗಡ ನಕ್ಷತ್ರಂಗಳೂ—ಶ್ರೀ—ಶ್ರೀ ಗುರುವೆ ಗತಿ॥ ಚೂ ಚೆ—ಚೊಲಾ ಅಶ್ವಿನಿ—ಲಿ ಲೂ ಲೆ ಲೊ—ಭರಣಿ ಅ ಯೋ ಯಿಾ ಯೂ—ಕೃತ್ತಿಕಾ—ವೋ ವಾ ವಿ ವೂ ರೋಹಿಣಿ—ವೇ ವ ಕಾ ಕಿ—ಮೃಗಶಿರಾXXX ಜೂ ಜೆ ಜೋ ಜ್ಯಾ ಅ ಭಿ ಜಿ ತ್ತು॥

**ಅಂತ್ಯ :** ಪೂರ್ವಾಭಾದ್ರಾ—ಶುಖಂಜಾತಾ ವುತ್ತರಾಭಾದ್ರಾ—ದೇ ದೋ ಚಾ ಚೀ—ರೇವತಿ—ಯಿವು ಅವಗಡ ನಕ್ಷತ್ರಂಗಳೂ॥

**ವಿಷಯ :** ನಕ್ಷತ್ರ ವಿಚಾರ.

ವಿಶೇಷ: ಕೃತಿ ಸಮಗ್ರ. ಮೋಡಿ ಅಕ್ಷರ. ಇದರೊಂದಿಗೆ 'ಸಂವತ್ಸರ' ಮುಂತಾದ ಕೃತಿಗಳಿವೆ.

—ಎಂಪಿಎಂ

## 116

### ಅವಧೂತ ಗೀತೆ

ಕೆ. ೬೬೫ಬಿ/೬ ಹಾಡು
೯.೫" × ೨" ಗುರುಬಸವ ಸು. ೧೪೩೦
೬೦-೬೪ ಪತ್ರ ೧೨ ಪಂಕ್ತಿ ೪೧ ಅಕ್ಷರ

ಆದಿ: ವುದ್ಗುರಿಸುತ್ತಲಾಹುತಿಗೊಳುವಂತೆ
ನುಗ್ಗಾಗಿಯು ಬಿಡೆ ವಿಷಯುವ ಮುಂತೇ
ಹಿಗ್ಗುವೆನೀ ತೋರಿಕೆಗೋರಂತೆ
ಕಗ್ಗವೆ ತಕ್ಷಣದೊಳಗೆಂತಂತೇ ||೧೦||

ಅಂತ್ಯ: ಸ್ವಾನುಭವಾದ್ವಯದಿಂ ಗುರುಬಸವಾ
ತಾನವಧೂತನೆನಿಸಿ ಕೇಳ್ದಿರವಾ
ಜ್ಞಾನೋತ್ತರ ಮಾರ್ಗದ ಬಹುವಿಧವಾ
ಸಾನಂದದಿ ಪೇಳ್ದನು ನಿಜಮತವಾ ||೧೦೧||
ಅವಧೂತ ಗೀತೆ ಸಂಪೂರ್ಣ ಶ್ರೀ|| ಅಂತೂ ಷಟ್ಕಾವ್ಯಕಂ ಪದನು ೮೯೭
ಕಂ ಮಂಗಳ ಮಹಾಶ್ರೀ

ವಿಷಯ: ವೀರಶೈವ ಸಿದ್ಧಾಂತದ ವಿರಕ್ತಿ ಬೋಧಕ ಹಾಡುಗಳು.

ವಿಶೇಷ: ಆದಿಯ ಓಲೆ ನಷ್ಟವಾಗಿದೆ. ಅಕ್ಷರಗಳು ಚೆನ್ನಾಗಿವೆ. ಇದರ ಹಿಂದೆ ಇರುವ ಇನ್ನೈದು ಗ್ರಂಥಗಳ ಒಟ್ಟು ಪದ್ಯಗಳ ಸಂಖ್ಯೆಯನ್ನು ಇಲ್ಲಿ ಸೂಚಿಸಿರುವುದಲ್ಲದೆ, ಷಟ್ಕಾವ್ಯ ಮುಕ್ತಾಯವಾಗಿರುವುದನ್ನು ಇಲ್ಲಿ ಸೂಚಿಸಲಾಗಿದೆ. ಇದರೊಡನೆ ಮನೋವಿಜಯ ಕಾವ್ಯ, ವೃಷಭ ಗೀತ ಮೊದಲಾದ ಇತರ ಆರು ಗ್ರಂಥಗಳಿವೆ.

—ಶ್ರೀನಂತ

## 117

### ಅವಧೂತ ಗೀತೆ

ಕೆ. ೮೪೭/೬ ಹಾಡು
೭" × ೧.೭" ಗುರುಬಸವೇಶ ಸು. ೧೪೩೦
೯೩-೯೯ ಪತ್ರ ೧೦ ಪಂಕ್ತಿ ೪೮ ಅಕ್ಷರ

ಆದಿ: ಶ್ರೀಗುರು ಸಿದ್ಧಲಿಂಗಾಯೆನ್ನಮಃ ಅವಧೂತ ಗೀತಿ|| ||ಪದನು||
ಸ್ವಸ್ತಿ ಸಮಸ್ತ ಜಗಂ ನಿಜರೂಪ|
ಭಕ್ತ ಮನೋಮಂದಿರ ಚಿದ್ದೀಪಾ||

ನಿತ್ಯಂ ಗುರು ಬಸವೇಶ ಪರಾಪ।
ಕೂರ್ತೆಂನೊಳು ನೆಲಸಿರು ನಿರ್ಲ್ಲೇಪಾ ॥೧॥

**ಅಂತ್ಯ :** ಸ್ವಾನುಭವದ್ವಯದಿಂ ಗುರುಬಸವ।
ತಾ..............................
............ಗ್ಗದ ಬಹುವಿಧವಾ।
ಸಾನಂದದಿ ಪೇಳ್ದನು ನಿಜಮತವಾ ॥೧೦೧॥
ಅವಧೂತಗೀ............... ಶ್ರೀ ಶ್ರೀ॥ ಸ್ವಸ್ತಿಶ್ರೀ ಜಯಭ್ಯುದಯ........
ವಾಹ........ದಲ್ಲಿ ಬರದ ಪುಸ್ತಕವು ಯೋಗಾಂಗ ವಿಭೂಷಣ ೨೭೮॥
ಸದ್ಗುರು ರಹಸ್ಯ ೨೩೬॥ ಕಲ್ಯಾಣೇಶ್ವರ ೧೦೨॥ ಸ್ವರೂಪಾಮೃತ ೭೭॥
....೦೭ ಕ್ಕಂ ಮಂಗಳ ಮಹಾ ಶ್ರೀ ಶ್ರೀ॥

**ವಿಷಯ :** ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು.

**ವಿಶೇಷ :** ಬಹು ಶಿಥಿಲ ಹಾಳೆಗಳು. ಕೊನೆಯ ಹಾಳೆ ಅರ್ಧಕ್ಕೆ ಮುರಿದುಹೋಗಿದೆ. ಶಕಟರೇಫ ಇದೆ. ಇದರೊಂದಿಗೆ ಕಲ್ಯಾಣೇಶ್ವರ ಮುಂತಾದ ಇತರ ಕೃತಿಗಳಿವೆ.

—ಎಂಪಿಎಂ

## 118

ಕೆ. ೯೮೯/೭ **ಅವಧೂತ ಗೀತೆ** ಪಾಡು
೧೦.೪" × ೨.೩" ಗುರುಬಸವೇಶ ಸು. ೧೪೩೦
೧೬೬-೧೭೧ ಪತ್ರ ೧೩ ಪಂಕ್ತಿ ೬೬ ಅಕ್ಷರ

**ಆದಿ :** ಅವಧೂತ ಗೀತಿ॥ ಚೌಪದ॥ ಪದನು॥
ಸ್ವಸ್ಥ ಸಮಸ್ತ ಜಗಂ ನಿರೂಪಾ
ಭಕ್ತ ಮನೋಮಂಧಿರ ಚಿದ್ವೀಪಾ
ನಿತ್ಯಂ ಗುರು ಬಸವೇಶ ಪರಾಪಾ
ಕೂರ್ತ್ತೆಂನೊಳು ನೆಲಸಿರು ನಿರ್ಲ್ಲೇಪಾ ॥೧॥

**ಅಂತ್ಯ :** ಸ್ವಾನುಭವದ್ವಯದಿಂ ಗುರುಬಸವಾ
ತಾನವಧೂತನೆನಿಸಿ ಕೇಳಿರವಾ
ಜ್ಞಾನೋತ್ತರಮಾರ್ಗ್ಗ ಬಹುವಿಧವಾ
ಸಾನಂದದಿ ಪೇಳ್ದನು ನಿಜಮತವಾ ॥೧೦೧॥
ಅವಧೂತ ಗೀತಿ ಸಂಪೂರ್ಣ್ಣ ಮಂಗಳ ಮಹಾ ಶ್ರೀ
ಅಂತು ಕಾವ್ಯಷಟ್ಕಮಕ್ಕಂ ಪದನು ೮೯೭ಕ್ಕಂ ಸಂಪೂರ್ಣ್ಣಂ ಮಂಗಳ ಮಹಾಶ್ರೀ.

ವಿಷಯ : ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು

ವಿಶೇಷ : ಸಮಗ್ರವಾಗಿದ್ದು ಶಕಟರೇಫವನ್ನು ಬಳಸಿದೆ. ಇದೇ ಕಟ್ಟಿನಲ್ಲಿ ಪದ್ಮರಾಜ ಪುರಾಣ, ಶಿವಯೋಗಾಂಗ ವಿಭೂಷಣಾದಿ ಸಪ್ತ ಕಾವ್ಯಗಳು, ಭಿಕ್ಷಾಟನ ಚರಿತ್ರೆ ಎಂಬ ಕೃತಿಗಳೂ ಇವೆ.
[ಕಹವಸೂ. ಪ್ರಥಮ ಸಂಪುಟ. ಪುಟ ೧೦೮-೧೦೩ ಕ್ರಮಾಂಕ. 97-99 ನೋಡಿ]

—ಕೆಆರ್‌ಎಸ್

## 119

ಕೆ. ೧೦೧೩/೬ | **ಅವಧೂತ ಗೀತೆ** | ಹಾಡು
೧೧ ೨" × ೧.೧೦" | ಗುರುಬಸವೇಶ | ಸು. ೧೪೩೦
೫೩-೫೭ ಪತ್ರ | ೧೦ ಪಂಕ್ತಿ | ೬೫ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಯೆ ನಮಃ। ಅವದೂತ ಗೀತಿ।
ಪದ।। ಸ್ವಸ್ತಿ ಸಮಸ್ತಜಗಂ ನಿಜರೂಪ
ಭಕ್ತ ಮನೋಮಂದಿರ ಚಿದ್ದೀಪ
ನಿತ್ಯಂ ಗುರುಬಸವೇಶ ಪರಾಪ
ಕೂರ್ತ್ರೆಂನೊಳು ನೆಲಸಿರು ನಿರ್ಲ್ಲೇಪ ।।೧।।

ಅಂತ್ಯ : ಸ್ವಾನುಭವ್ದ್ವಯದಿಂ ಗುರುಬಸವಾ
ತಾನವಧೂತನೆನಿಸಿ ಕೇಳ್ದಿರವಾ
ಜ್ಞಾನೋತ್ತರಮಾರ್ಗದ ಬಹುವಿಧವಾ
ಸಾನಂದದಿ ಪೇಳ್ದನು ನಿಜಮತವಾ ।।೧೮೧।।
ಅವಧೂತಗೀತಿ ಸಮಪ್ತಂ ಮಂಗಳ ಮಹಾಶ್ರೀ.

ವಿಷಯ : ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು.

ವಿಶೇಷ : ಸಮಗ್ರ. ಶಕಟರೇಫ ಇದೆ. ಇದೇ ಕೃತಿಯ ಇತರ ಪ್ರತಿಗಳಿಗೆ ಕ.ಹ.ವ. ಸೂಚಿಯ ೧ನೆಯ ಸಂಪುಟ ನೋಡಿ. ಇದೇ ಕಟ್ಟಿನಲ್ಲಿ ಶಿವಯೋಗಾಂಗ ಭೂಷಣ, ವೃಷಭಗೀತೆ, ಸದ್ಗುರು ರಗಳೆ ಮೊದಲಾದ ಇತರ ಏಳು ಕೃತಿಗಳಿವೆ.

—ಬಿಎಸ್‌ಎಸ್

## 120

ಕೆ. ೧೦೪೦/೬ | **ಅವಧೂತ ಗೀತೆ** | ಹಾಡು
೫.೨" × ೧.೬" | ಗುರುಬಸವೇಶ | ಸು. ೧೪೩೦
೧೨೮-೧೩೬ ಪತ್ರ | ೧೦ ಪಂಕ್ತಿ | ೩೨ ಅಕ್ಷರ

ಆದಿ : ಅವಧೂತ ಗೀತ ||ಪದ||
ಸ್ವಸ್ತಿ ಸವಸುಸ್ತ ಜಗಂ ನಿಜರೂಪ
ಭಕ್ತ ಮನೋಮಂದಿರಂ ದ್ವೀಪ
ನಿತ್ಯಂ ಗುರುಬಸವೇಶ ಪರಾಪ
ಕೊತ್ರ್ತಿಂನೊಳು ನೆಲಸಿರು ನಿರ್ಲೇಪ ೧
ಗುರುಬಸವೇಶ ಸನುಗ್ರಪರೇಶ
ಶರಣಮನಸ್ಸರಸಿರುಹ ನಿವಾಸ
ಪರಮ ನಿರಂತರ ಸುಖ ಪರಿತೋಷ
ನರಕರ ಶಲಹೆಂನನು ಭವನಾಶಾ ೨

ಅಂತ್ಯ : ಸ್ವಾನುಭವ ಗುರುದ್ವಯದಿಂ ಗುರುಬಸವ
ತಾನವಧೂತನೆನಿಸಿ ಕೇಳ್ದಿರವಾ
........ಸೋತ್ತರ ಮಾರ್ಗದ ಬಹುವಿಧವಾ
ಸಾನಂದ ಪೇಳ್ದನು ನಿಜಮತವಾ ೧೮೧
ಅವಧೂತಗೀತಿ ಸಮಾಪ್ತಂ ಮಂಗಳಮಹಾಶ್ರೀ
ಅಂತ ಷಷ್ಠಮ ಕಾವ್ಯಕ್ಕಂ ಪದನೂ ೮೯೭ಕ್ಕಂ ಮಂಗಳ ಮಹಾಶ್ರೀ

ವಿಷಯ : ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು.

ವಿಶೇಷ : ಈ ಗ್ರಂಥದ ಕೊನೆಯ ಗರಿಯು ಸ್ವಲ್ಪ ಭಾಗ ಮುರಿದು ಲುಪ್ತವಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಶಿವಯೋಗಾಂಗ ವಿಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಮನೋವಿಜಯ ಕಾವ್ಯಗಳಿವೆ.
[ಕಹವಸೂ. ಪ್ರಥಮ ಸಂಪುಟ ಪುಟ ೧೦೧–೧೦೩; ಕ್ರಮಾಂಕ 97–99 ನೋಡಿ]

—ಕೆಆರ್‌ಎಸ್

## 121

ಕೆ. ೧೧೦೩/೧೧ **ಅವಧೂತ ಗೀತೆ** ಹಾಡು
೧೪.೨" × ೨" ಗುರುಬಸವ ಸು. ೧೪೩೦
೧೮೭-೧೯೦ ಪತ್ರ ೧೩ ಪಂಕ್ತಿ ೯೫ ಅಕ್ಷರ

ಆದಿ : ಶ್ರೀಗುರುಬಸವಲಿಂಗಾಯೆನಮಃ| ಅವಧೂತಗೀತಿ
ಚೌಪದಿ|| ||ಪದನು||

ಸ್ವಸ್ತಿ ಸಮಸ್ತಜಗಂ ನಿಜರೂಪ
ಭಕ್ತಮನೋಮಂದಿರ ಚಿದ್ದೀಪ
ನಿತ್ಯಂ ಗುರು ಬಸವೇಶ ಪರಾಪ
ಕೂರ್ತೆನ್ನೊಳು ನೆಲಸಿರು ನಿರ್ಲೇಪ ||೧||

ಗುರುಬಸವೇಶ ಸಮಗ್ರ ಪರೇಶ
ಶರಣ ಮನಸ್ಸರಸೀರುಹ ನಿವಾಸ
ಪರಮ ನಿರಂತರ ಸುಖಪರಿತೋಷ
ವರಕರ ಸಲಹೆನ್ನನು ಭವನಾಶ ||೨||

**ಅಂತ್ಯ :** ಸ್ವಾನುಭವದ್ವಯದಿಂ ಗುರುಬಸವಾ
ತಾನವಧೂತನೆನಿಸಿ ಕೇಳಿರವಾ
ಜ್ಞಾನೋತ್ತರ ಮಾರ್ಗದ ಬಹುವಿಧವಾ
ಸಾನಂದದಿ ಪೇಳ್ದನು ನಿಜಮತವಾ ||೧೦೧||

ಅವಧೂತಗೀತೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ
ಅಂತು ಷಷ್ಟಮ ಕಾವ್ಯಕ್ಕಂ ಪದನು ೮೭೭ಕ್ಕಂ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ವೀರಶೈವ ಸಿದ್ಧಾಂತದ ವಿರಕ್ತಿ ಬೋಧಕ ಹಾಡುಗಳು.

**ವಿಶೇಷ :** ಇದರ ಜೊತೆಯಲ್ಲಿ ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಪುರಾಣದ ಕಥೆಗಳು, ಬಸವ ಪುರಾಣ ಮತ್ತು ಭೈರವೇಶ್ವರ ಪುರಾಣದ ಕಥೆಗಳಿಗೆ ಸಂಸ್ಕೃತ ಆಧಾರ ಗ್ರಂಥ ಮತ್ತು ಸಪ್ತಕಾವ್ಯದ ಗುರುಬಸವನ ಕೃತಿಗಳಿವೆ.

—ಜಿಜಿಎಂ

## 122

| ಕೆ. ೧೩೭೨/೬ | **ಅವಧೂತ ಗೀತೆ** | ಹಾಡು |
|---|---|---|
| ೯" × ೨" | ಗುರುಬಸವ | ಸು. ೧೪೩೦ |
| ೬೨-೬೮ ಪತ್ರ | ೧೦ ಪಂಕ್ತಿ | ೪೨ ಅಕ್ಷರ |

**ಆದಿ:** ಶ್ರೀ ಗುರು ಬಸವಲಿಂಗಾಯ ನಮಃ|| ಅವಧೂತ ಗೀತೆ ||ಪದನೂ||
ಸ್ವಸ್ತಿ ಸಮಸ್ತ ಜಗಂ ನಿಜರೂಪ|
ಭಕ್ತ ಮನೋಮಂದಿರ ಚಿದ್ದೀಪಾ||
ನಿತ್ಯಂ ಗುರುಬಸವೇಶ ಪರಾಪ|
ಕೂರ್ತೆನ್ನೊಳು ನೆಲಸಿರು ನಿರ್ಲೇಪಾ ||೧||

**ಅಂತ್ಯ :** ಸ್ವಾನುಭವದ್ವಯದಿಂ ಗುರುಬಸವಾ
ತಾನವಧೂತನೆನಿಸಿ ಕೇಳ್ದಿರವಾ
ಜ್ಞಾನೋತ್ತರ ಮಾರ್ಗದ ಬಹುವಿಧವಾ
ಸಾನಂದದಿ ಪೇಳ್ದನು ನಿಜಮತವಾ ||೧೦೧||
ಗುರುಬಸವೇಶ್ವರ ನಿರೂಪಿಸಿದ ಅವಧೂತ ಗೀತೆ ಸಂಪೂರ್ನಂ ಮಂಗಳ ಮಹಾ ಶ್ರೀ ಶ್ರೀ||

**ವಿಷಯ :** ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು.

**ವಿಶೇಷ :** ಸಮಗ್ರ ಪ್ರತಿ. ಇದು ಗುರು ಬಸವೇಶನ ಷಟ್ಕಾವ್ಯಗಳಲ್ಲಿ ಒಂದು. ಇದರ ಜತೆಯಲ್ಲಿ 'ಕಲ್ಯಾಣೇಶ್ವರ' ಮೊದಲಾದ ಆರು ಕೃತಿಗಳಿವೆ. ಸುಂದರ ಬರೆವಣಿಗೆ.

—ಎಂಪಿಎಂ

## 123

| ಕೆ.ಎ. ೪೭೮/೫ | **ಅವಧೂತ ಗೀತೆ** | ಹಾಡು |
|---|---|---|
| ೧೨" × ೯.೮" | ಗುರುಬಸವ | ಸು. ೧೪೩೦ |
| ೧೪೮-೧೫೬ ಪತ್ರ | ೨೪ ಪಂಕ್ತಿ | ೨೫ ಅಕ್ಷರ |

**ಆದಿ :** ಅವಧೂತ ಗೀತೆ. ಶ್ರೀ ಗುರು ಸಿದ್ಧಲಿಂಗಾಯ ನಮಃ|
||ಪದ|| ಮಂದಾನಿಲರಗಳೆ||

ಸ್ವಸ್ತಿ ಸಮಸ್ತ ಜಗನ್ನಿಹರೂಪ
ಭಕ್ತಮನೋಮಂದಿರ ಚಿದ್ದೀಪ
ನಿತ್ಯಂ ಗುರುಬಸವೇಶ ಪರಾಪ
ಕೂರ್ತೆನ್ನೊಳು ನೆಲಸಿರು ನಿರ್ಲೇಪ ||೧||

**ಅಂತ್ಯ :** ....... ಳನುರಂ ಸದಿನವಧೂತ
ಗೀತಿಯ ನುನಯದಿಂ ಕೇಳ್ದಾತ
ರೇತದೊಳವತರಿಸದ........
....... ರಿಸಿದಗತ ಭೀತ ||೧೦೦||

ಸ್ವಾನುಭವದ್ವಯದಿಂ ಗುರುಬಸವ
ತಾನವಧೂತ............
........ರ ಮಾರ್ಗದ ಬಹುವಿಧವ
ಸಾನಂದದಿ ಪೇಳ್ದನು ನಿಜಮತವ ||೧೦೧||

ಅವಧೂತಗೀತೆ ಸಂಪೂರ್ಣಂ. ಶ್ರೀ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿ ವಾಹನ ಶಕ ... ... ದಲ್ಲಿ ಬರೆದ ಪುಸ್ತಕವು|| ಯೋಗಾಂಗ ವಿಭೂಷಣ ||೨೭೮|| ಸದ್ಗುರು ರಹಸ್ಯ ||೨೩೯|| ಕಲ್ಯಾಣೇಶ್ವರ ||೧೦೨|| ಸ್ವರೂಪಾಮೃತ ||೭೭|| ವೃಷಭಗೀತೆ ||೧೦೧|| ಅವಧೂತಗೀತೆ ||೧೦೧|| ಅಂತು ಪದ ೯೦೭ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತದ ವಿರಕ್ತಿಬೋಧಕ ಹಾಡುಗಳು.

**ವಿಶೇಷ :** ಇದನ್ನು ೧೯೫೨ರಲ್ಲಿ ಶ್ರೀ ಪಿ. ಗೋಪಾಲಕೃಷ್ಣ ಭಟ್ಟರು ಮದರಾಸು ಪ್ರಾಚ್ಯಕೋಶಾಗಾರದ ಡಿ. ೬೦೧ರಿಂದ ನಕಲು ಮಾಡಿದ್ದಾರೆ. ಇದರೊಂದಿಗೆ 'ಶಿವಯೋಗಾಂಗ ವಿಭೂಷಣ', 'ವೃಷಭಗೀತೆ' ಮೊದಲಾದ ಇತರ ನಾಲ್ಕು ಕೃತಿಗಳಿವೆ. ಮೂಲಪ್ರತಿಯ ಕೊನೆಯಲ್ಲಿ 'ಸದ್ಗುರು ರಹಸ್ಯ' ಎಂದಿದ್ದರೂ ಆ ಕೃತಿ ಈ ಪುಸ್ತಕದಲ್ಲಿ ಸೇರಿಲ್ಲ.

—ಬಿಎಸ್‌ಎಸ್

124

| ಕೆ.ಬಿ. ೭೦೨/೨ | **ಅಶ್ವಗಂಧಿ ಚೂರ್ಣ** | ಶ್ಲೋಕ, ಟೀಕು |
|---|---|---|
| ೬.೫" × ೮" | ? | ? |
| ೨ ಪತ್ರ | ೧೬ ಪಂಕ್ತಿ | ೨೦ ಅಕ್ಷರ |

**ಆದಿ :** ಅಶ್ವಗಂಧಿ ಚೂರ್ಣಂ||
ಅಶ್ವಗಂಧಿದಶಫಲಂ| ತತರ್ಧಂ ನಾಗರಾನ್ವಿತಂ| ಕತರ್ದಂ ತಣ ಸ್ಯೆಂ ಯುಕ್ತಂ| ಮರಿಚಂಚ ತಥರ್ದಕಂ| ಚಾತುರ್ಜಾಪರಾಳಂಚಾ| ಬಾರ್ಜಿತ್ತಾಳೀಶ ಪತ್ರಕಂ|

X X X

ಅಶ್ವಗಂಧಿ ಮಹಾಚೂರ್ಣ| ಅಶ್ವಿನಿ ನಾಮಸ ಪರಿಕೀರ್ತಿತಂ||

**ಅಂತ್ಯ :** ||ಟೀಕು|| ಹಿರಿಮದ್ದಿನ ಬೇರು| ೧೦ ಹಲಾ| ಶುಂಠಿ ೫ ಹಲಾ| ಹಿಪ್ಪಲಿ ೨ ಹಲಾ| ಮೆಣಸು ೧ ಹಲಾ| ಲವಂಗ್ಗ ಚಕ್ಕೆ ಲವಂಗ್ಗ ಪತ್ರೆ| ಯಾಲಕ್ಕಿ ನಾಗಕೇಸರಿ ಲವಂಗ್ಗಾ|

X X X

ಯಿಾ ದ್ರವ್ಯಂಗಳೂ ಬಗೆ ೧ಕ್ಕೆ ವಂದು ದುಗ್ಗಾಣಿ ತೂಕಾ| ಯಿವಂ ಚೂರ್ಣವಂ ಮಾಡಿ ಯಿಾ ಚೂರ್ಣಕ್ಕೆ ಸಮಾಂಶರಾಯಿಪುಡಿ ಸಕರೆ| ಯಿದಕ್ಕೆ ಅನುಪಾನ ಜೇನುತುಪ್ಪಾ| ಹಸುವಿನ ಬೆಂಣೆ ಹಸುವಿನ ಹಾಲು ಯಿದರಲ್ಲಿಕಲಶಿ ಸೇವನೆ ಮಾಡುವದೂ| ಯಿಾ ಗ್ರಂಥೋಕ್ತರೋಗಂಗ್ಗಳೆಲ್ಲಾ ಪರಿಹರಾ ||೧||

**ವಿಷಯ :** ಔಷಧಿ ವಿಚಾರ.

**ವಿಶೇಷ:** ಸಮಗ್ರ ಕೃತಿ. ಸುದೃಢ ಪ್ರತಿ. ಮೋಡಿ ಅಕ್ಷರ. ಇದರೊಂದಿಗೆ 'ಜೋತಿಷ ಶಾಸ್ತ್ರ' ಎಂಬ ಇನ್ನೊಂದು ಗ್ರಂಥವಿದೆ.

—ಎಂಪಿಎಂ

## 125

ಕೆ. ಎ. ೫೭೨ | **ಅಶ್ವಪರೀಕ್ಷೆ ಸಚಿತ್ರ** | ಗದ್ಯ

೧೧.೪″ × ೯″ | ? | ?

೪೫ ಪತ್ರ | ೧೨ ಪಂಕ್ತಿ | ೩೦ ಅಕ್ಷರ

**ಆದಿ :** ಶ್ರೀಗುರುಭ್ಯೋ ನಮಃ॥ ಅಶ್ವಪರೀಕ್ಷೆ ನೋಡತಕ್ಕ ಕ್ರಮ ಪ್ರಾರಂಭಾ ॥XX॥ ಪೂರ್ವದಲ್ಲಿ ಬ್ರಂಹದೇವರಿಂದ ಅಶ್ವವುತ್ಪತ್ತಿ॥ ಬ್ರಂಹ್ಮದೇವರ ಜಯ ಕಂಣುಬಿಂಧುಗಳಿಂದಾ ಹುಟ್ಟಿದವೂ। ಅನಂತರ ಅಗ್ನಿಯಿಂದಲೂ ಹುಟ್ಟಿದವೂ। ದೂರ್ವಾಸಋಷಿಗಳ ಶಾಪದಿಂದಾ। ಯಿಂದ್ರಪತ್ನಿ ಕೂಡೆ ಯಲಾ ಕುದುರೆಗಳು ಸಮುದ್ರದಲ್ಲಿ ಬಿದವೂ। ಆಮೇಲೆ ದೇವತೆಗಳೂ ರಾಕ್ಷಸರೂ ಸಮುದ್ರಮಥನೆ ಮಾಡುವಾಗಾ ಅಮೃತ ಹುಟ್ಟುವ ಸಮಯದಲ್ಲಿ॥

**ಅಂತ್ಯ :** ಜುಲಾಬು ಆಗುವದಕ್ಕೆ ನೀರುಗೋಣೀಸೊಪ್ಪು ೨-೩ ಹಿಡಿ ಅದಕಚ್ಚ ಜೀಯುಶಿ ೧ ತೊಲಾ ಸೈಂದಲವಣಾ ಪುಡಿಮಾಡಿ ಹಾಕಿ ೧ ಬ್ಯಾಲದ ಕಾಯಷ್ಟು ಉಂಡೆಮಾಡಿ ಕೊಟ್ಟರೆ ಜುಲಾಬು ಆಗುತ್ತೆ। ಬಂದಾಗ ಬೇಕಾದರೆ ಅದರ ಮೇರೆಗೆ ಕೊಡುವುದೂ ಕುದರೆ ಲಾಗರಿ ಆಗಿ ಯಿಪ್ಪಂಥೆ ತಾಜಾ ಆಗಕ್ಕದಕೆ ಅವುಷದಿ ಹಿರಾ ಗೊಗ್ಗಳ ೧ ತೊಲಾ ಬೆಲ್ಲಾ॥ ಸೇರಿಸಿ ಯಿದನೆಲ್ಲ ಮಿಲಾಯಿಶಿ ೨೧ ದಿನ್ಸಯಿಾ ಮೇರೆಗೆ ತಿಂನಿಸಬೇಕು. ಮಣಗದ ಹಸಿಗಡಲೆ ಹೊಟ್ಟೆ ತುಂಬಾ ತಿಂನಿಸಬೇಕು. ಹರಿಯೋ ನೀರು ಕುಡಿಸ ಕೂಡದು ಭಾವೀ ನೀರು ಕೊಡ್ಯಬೇಕೂ ಕುದುರೆ ಬುನತ್ತಾಗಿ ತಾಜಾ ಆಗುತ್ತೆ॥

**ವಿಷಯ:** ಅಶ್ವಶಾಸ್ತ್ರ ಮತ್ತು ಅಶ್ವವೈದ್ಯ ವಿಚಾರ.

**ವಿಶೇಷ :** ಸಮಗ್ರ ಗ್ರತಿ. ಮೋಡಿ ಬರೆವಣಿಗೆ. ಕುದುರೆಯ ಲಕ್ಷಣವನ್ನು ಚಿತ್ರಸಹಿತ ವಾಗಿ ವಿವರಿಸಲಾಗಿದೆ.

—ಎಂಪಿಎಂ

## 126

ಕೆ. ೧೦೩೭/೨ | **ಅಶ್ವವೈದ್ಯ** | ಕಂದ, ಪದ್ಯ, ಟೀಕು

೧೭.೫″ × ೧.೬″ | ಅಭಿನವಚಂದ್ರ | ಸು. ೧೪೦೦

೧-೧೬೩ ಪತ್ರ | ೭ ಪಂಕ್ತಿ | ೮೦ ಅಕ್ಷರ

**ಆದಿ :** ಅಶ್ವಶಾಸ್ತ್ರ ಅಶ್ವವೈದ್ಯ.
ಅನುಪಮ ಹಯಶಾಸ್ತ್ರಾಗಮ
ವನಧಿಯೊಳಾಂ ಸಿಂಹದತ್ತ ಕೃತಿಲಕ್ಷಣಮಂ
ದಿನಕರ ತನಯರೇವಂ
ತನಮತದಿಂ ಪೇಳ್ವೆನೆಸೆವ ಪೊಸಕಂನ್ನಡದಿಂ

ಟೀಕೂ॥ ಯಿಾ ಹೇಳಲ್ಪಟ್ಟಂಥಾ ಅಶ್ವಶಾಸ್ತ್ರವೆಂಬ ಸಮುದ್ರದಲ್ಲಿ ಸಿಂಹದತ್ತನು ಹೇಳಿದ ಕೃತಿಯ ಲಕ್ಷಣದಿಂದ ಸೂರ್ಯನ ಮಗನು ರೇವಂತ್ತನ ಮತದಿಂದ ಕಂನ್ನಡವಾಗಿ ಹೇಳಿಹೆನೂ ॥-॥

**ಅಂತ್ಯ :** ಜೇವಣಿಗೆಗೆ ಬೇವಿನ ಸೆಕ್ಕೆ ನೆಲಗುಂಬಳದ ಸಮೂಲ ಹುಲಗಿಲ ಸಮೂಲ ಆಡುಸೋಗೆ ಯಿವೆಲ್ಲಮಂ ತುಳಿದು ವೊಂದುಕೊಳಗ ನೀರ ಹೊಯಿದು ವೊಂದು ಬಳ್ಳವಾಗಿ ಕಾಸಿ, ಆ ನೀರಲ್ಲಿ ಹೆಸರ ಕುದಿಸಿಕೊಂಡು ತುಪ್ಪದಲ್ಲಿ ಕಲಸಿ ಯಿಕ್ಕುವದು. ಶುಂಠಿ ಮೆಣಸು ಕಾಡುಗುಂಬಳದ ಬೇರು ಸಾಸವೆ ಬಜೆ ಉಳ್ಳಿ ಸೈಂಧವ ಸದ್ಯಕ್ಷಾರ ಯಾವಕ್ಷಾರ ಹುತ್ತದ ಮಂಣು ಘಟ್ಟಿ ಮೊಸರು ಯಿ

**ವಿಷಯ :** ಕುದುರೆಯ ವೈದ್ಯವಿಚಾರ. ಔಷಧಿ ಮುಂತಾದುವು

**ವಿಶೇಷ :** ಬರಹ ಚೆನ್ನಾಗಿದೆ. ಶಕಟರೇಫವನ್ನು ಬಳಸಿದೆ. ಹದಿನಾರನೆಯ ಅಧ್ಯಾಯ ಪೂರ್ತವಿದ್ದು ಹದಿನೇಳನೆಯ ಅಧ್ಯಾಯದಲ್ಲಿ ಗ್ರಂಥ ಭಾಗವಿದ್ದು ಮುಂದೆ ಗ್ರಂಥಲೋಪವಾಗಿದೆ. ಇದೇ ಕಟ್ಟಿನಲ್ಲಿ ಅಶ್ವವೈದ್ಯದ ಸಂಗ್ರಹವೆಂಬ ಇನ್ನೊಂದು ಗ್ರಂಥವಿದೆ.

[ಕ. ಹ. ಪ್ರ. ವ. ಸೂ. ಪ್ರಥಮ ಸಂಪುಟ. ಕ್ರಮಾಂಕ ೧೦೩. ಪುಟ ೧೦೭ ನೋಡಿ]

—ಕೆಆರ್‌ಎಸ್

## 127

| ಕ. ೧೮೬೫ | **ಅಶ್ವವೈದ್ಯ** | ಗದ್ಯ |
|---|---|---|
| ೧೦″ × ೧.೬″ | ? | ? |
| ೧-೧೯ಳ ಪತ್ರ | ೮ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀ ಗುರುಭ್ಯೋ ನಮಃ॥ XXX ಅಶ್ವವೈದ್ಯ॥ ಯಿಾ ವಾಜಿಶಾಸ್ತ್ರಮಂ ನೆಱ... ಲ್ಲರ್ ಕಳಕ್ಕಂ ಮುಂಣಡೆ ತೊಲಗಿಪ್ಪರ್ದಾವರಿಸಿರ್ಪಗುಣೇಂದುವ ಕೈವಿಡಿದಾನುವುದು ಶಿ....ದಿಸನೊಲ್॥ ಶ್ರೀ ನಾರಾಯಣನಾಜ್ಞೆಯಿಂದ ರೇಸಂತ ಸಿಂಹ್ಯದತ್ತ ಶಾಲಿಹೋತ್ರ ಮೊದ....ಗಳು ಅಶ್ವಶಾಸ್ತ್ರಕ್ಕೆ....ತರ್ಗ

ಗಳು| ಅವರಲ್ಲಿ ಶಾಲಿಹೋತ್ರನು ಮಿಗಿಲಾದವನು ಆತನ ಸೂತ್ರವ.... ಡಿದು ಅಶ್ವಶಾಸ್ತ್ರವನು ಹೇಳಿಹನು.

**ಅಂತ್ಯ :** ಬೇರುಪಲಸು ೫೪ ಕೊಡಸೀಗೆ ೫೫ ಹುತ್ತದ ಮೇರಣ ತಂಡಸಿ ೫೬ ಹುತ್ತದ ಮೇರಣ ತಂಡಸ ೫೭ ಹುತ್ತದ ಮೇರಣ ಪಡವರ ೫೮ ಹಾವು ಮೆಕ್ಕೆ ೫೯ ಬಿಳಿಯ ಬದಣೆ ೬೦ ಸಿಚುಕ ಗೂಜಗ ಬಿಲಂ ಕಾಕಿ ನಲ್ಲ?ಲ್ಲಿ ಚಮರು ಕಾರಣಗದ್ದ

**ವಿಷಯ :** ಶಾಲಿಹೋತ್ರನ ಅಶ್ವವೈದ್ಯದ ಟೀಕು.

**ವಿಶೇಷ :** ಅಸಮಗ್ರ. ಶಕಟರೇಫವಿದೆ. ೧, ೨, ೩೭, ೮೯, ೧೩೯ನೆಯ ಕ್ರಮಾಂಕಗಳ ಪತ್ರಗಳ ಅಂಚುಗಳು ಮುರಿದಿವೆ. ೧೮೮ನೆಯ ಪತ್ರದಲ್ಲಿ ಒಂದು ಪಾರ್ಶ್ವದಲ್ಲಿ ಮಾತ್ರ ಬರಹವಿದೆ. ಕೊನೆಯ ಎರಡು ಪತ್ರಗಳಲ್ಲಿ ನೆಲಾವರಿಯ ಕಲ್ಪ ಗ್ರಂಥವಿದೆ. ಅದೂ ಅಸಮಗ್ರವಾಗಿದೆ.

—ಕೆಆರ್ಎಸ್

## 128

ಕೆ. ಎ. ೫೭೧ | **ಅಶ್ವವೈದ್ಯ (ಸಚಿತ್ರ)** | ಗದ್ಯ
೯″ × ೧೨″ | ? | ?
೨-೮೪ ಪತ್ರ | ೧೨ ಪಂಕ್ತಿ | ೨೪ ಅಕ್ಷರ

**ಆದಿ :** ಕುದರೆಗಳೊ ಸಬ್ಬು|| ಚೀಮಾರಿಯಿಂದಾ ಬಾಯಿ ಮುಚ್ಚಿಕೊಂಡು|| ಹಲ್ಲುಗಳು ಹೊತ್ತುಕೊಂಡು ಅವಷಧಿ ಶೀಷೆಯಲ್ಲಿ ಹಾಕಿ ಕುದುರೆ ಮೂಗಿನಿಂದಾ ಹೊಟ್ಟೆವಳಗೆ ಹೋಗುವಂತೆ ಕುಡಿಸಬೇಕು||

**ಅಂತ್ಯ :** ಲೇಪ ಮಾಡೊ ಯಿವಾಜು|| ಯಿಾರುಳ್ಳಿರಸ ಪಾವು ೧ ಹರಳೆರಸ ಪಾವು ೧ ....ಶ್ರೀಚೆಕ್ಕೆ ಶೇರು ೫ XXX ತಕ್ಕಾಳಿ ರಸ ೫ ಸಾಸ್ವೆಪುಡಿ ಶೇರು ೫ XXX ಬಿಳಿಸಾರ ಮೇಲೆ ಕಾಶಿ ೩ ದಿವ್ಸ.... ತೊಳೆಯುವುದು ಮಾಡ ತಕ್ಕದ್ದು ಲೇಪ್ರಾ ದಿವ್ಸ....

**ವಿಷಯ :** ಅಶ್ವವೈದ್ಯ.

**ವಿಶೇಷ :** ಅಸಮಗ್ರ ಪ್ರತಿ. ಶಿಥಿಲ ಪ್ರತಿ ಅತ್ಯಂತ ಮೋಡಿ ಅಕ್ಷರ. ಸಚಿತ್ರ

—ಎಂಪಿಎಂ

## 129

ಕೆ. ೧೦೭೭/೧ | **ಅಶ್ವವೈದ್ಯದ ಸಂಗ್ರಹ** | ಗದ್ಯ
೧೭.೫″ × ೧.೬″ | ? | ?
೧-೧೧೦ ಪತ್ರ | ೮ ಪಂಕ್ತಿ | ೭೨ ಅಕ್ಷರ

**ಆದಿ :** ಅಶ್ವವೈದ್ಯದ ಸಂಗ್ರಹಗಳು. ಕುದುರೆಗಳಿಗೆ ವರುಷರುತುವಿನಲ್ಲಿ ಬೇವಿನಯಲೆಯನೂ ಉಪ್ಪನೂ ಯಿಕ್ಕುವದು. ಹಿಮವಂತ್ತರುತುವಿನಲ್ಲಿ ಲೊಕ್ಕಿಯ ಯೆಲೆಯು ಉಪ್ಪನೂ ಯಿಕ್ಕುವದು. ಶಿಶಿರ ರುತುವಿನಲ್ಲಿ ಹಡಲವನೂ ಉಪ್ಪನೂ ಯಿಕ್ಕುವದು. ವಸಂತ ರುತುವಿನಲ್ಲಿ ತ್ರಿಕಟುಕವನೂ ಉಪ್ಪನೂ ಯಿಕ್ಕುವದು. ಶರದ್ರುತುವಿನಲ್ಲಿ ಸಖ್ಖರೆನೂ ಉಪ್ಪನೂ ಯಿಕ್ಕುವದು. ಗ್ರೀಷ್ಮರುತುವಿನಲ್ಲಿ ತುಪ್ಪವನೂ ಯಿಕ್ಕುವದು. ಯಿಾ ಆರು ರುತುವಿನಲ್ಲೂ ಯಿಾ ಪ್ರಕಾರದಲ್ಲಿ ಕುದುರೆಗೆ ಯಿಕ್ಕಿದರೆ ಲೇಸು.

**ಅಂತ್ಯ :** ಮತ್ತಂ ಬೊಕ್ಕಣಪಂನೂಯಿಕ್ತಿ ಆ ಬೊಕ್ಕಣ........ಸುಂಣದ ಕಲ್ಲು ಯಿನೆಲ್ಲವುಂ ಚೂರ್ನವುಂ ಮಾಡಿ ರಾತ್ರೆಯಲ್ಲಿ ಕಟ್ಟಿಯಿರಿಸಿ ಆ ಮದ್ದಂ ಹುಣಿಗೆ ತುಂಬಿಯು ರಸನಂ ಎರಡು ಬೊಕ್ಕಣವಂ ಕಟ್ಟಿಯಿರಿಸಿ ಉದಯಕ್ಕೆ ಬಿಟ್ಟು ಮೆತ್ತೆ ಆ .. ....ಕಾರದಿಂ ಹತ್ತುದಿನ ಹಗಲಿರುಳು ಕಟ್ಟಲು ಕೊಳಗಿನ ರೋಗ ತಳರೋಗಂ ಮಾಣ್ಬು ॥ಶ್ರೀ॥ ವ್ಯಯ ಸಂವತ್ಸರದ ಮಾರ್ಗಶಿರ ಶು ೧೫ ಶುಕ್ರವಾರದಲೂ ದೇವಾಂಡ ಹಳ್ಳಿಯ ರಾಯಸದ ಅಂಣಾಜಯ್ಯನ ಮಗ ಅಪ್ಪಾ.... ಅಶ್ವ ವೈದಗ್ರಂಥ ಸಂಗ್ರಹಕ್ಕೆ ಮಂಗಳ ಮಹಾ ಶ್ರೀ

**ವಿಷಯ :** ಕುದುರೆಗಳಿಗೆ ಬರುವ ರೋಗಾದಿಗಳಿಗೆ ನೀಡಬೇಕಾದ ಔಷಧೋಪಚಾರಗಳ ವಿವರಣೆ.

**ವಿಶೇಷ :** ಬರಹ ಚೆನ್ನಾಗಿದೆ. ಆದರೆ ಗರಿಗಳ ಒಂದು ಕಡೆಯ ಅಂಚುಗಳಲ್ಲಿ ಸ್ವಲ್ಪ ಭಾಗವನ್ನು ಹುಳು ಹೊಡೆದಿವೆ, ಅಲ್ಲಲ್ಲಿ ರಂಧ್ರಗಳಾಗಿವೆ. ೮೧, ೮೩, ೮೮, ೯೩, ೯೪, ೯೬, ೧೦೩, ೧೦೫, ೧೦೮ನೆಯ ಕ್ರಮಾಂಕದ ಗರಿಗಳಿಲ್ಲ. ಇದೇ ಕಟ್ಟಿನಲ್ಲಿ ಅಶ್ವವೈದ್ಯವೆಂಬ ಮತ್ತೊಂದು-ಟೀಕಿನ ಗ್ರಂಥವಿದೆ.

—ಕೆಆರ್‌ಎಸ್

## 130

| ಕೆ. ಎ. ೫೫೨ | **ಅಶ್ವವೈದ್ಯ ನಾನಾ ಸಂಗ್ರಹ ನಿರ್ಣಯ** | ಕಂದ |
|---|---|---|
| ೧೦.೧″ × ೯.೨″ | ಅಭಿನವಚಂದ್ರ | ಸು. ೧೪೦೦ |
| ೧-೯೦ ಪತ್ರ | ೨೦ ಪಂಕ್ತಿ | ೨೬ ಅಕ್ಷರ |

**ಆದಿ :** ಅಶ್ವವೈದ್ಯ ನಾನಾ ಸಂಗ್ರಹ ನಿರ್ಣಯ ಪ್ರಾರಂಭಃ
ಶ್ರೀಪತಿ ದಾನವ ಕುಲದ
ಪಾಪಹನಮದೇಂದ್ರ ವಂದಿತಂ ಸಕಲ ಜಗ

ದ್ವ್ಯಾಪಕನಯುಗೀಗೆ ಸುಖ
ವ್ಯಾಪಾರೋದಾರ ಮಹಿಮೆಯಂ ಚಕ್ರಧರಂ ||೧||
ವಿಪ್ರಕುಲಭೂಷಣಂ ಸುಜ
ನಪ್ರಣತಂ ಸೋಮಣ್ಣೈಯ್ಯನು ಜಂಹಯು ಶಾ
ಸ್ತ್ರಪ್ರೌಢ ಜನಮನೋನಯು
ನಪ್ರಿಯನಕಲಂಕಚರಿತನಭಿನವಚಂದ್ರಂ ||೬||

**ಅಂತ್ಯ :** ಸಕಲ ವಿಷಹರವನುಪಮ
ಸಕಲ ಕ್ಷಯರೋಗ ಹರಮನೆಸೆದಿರೆ ಪೇಳ್ದಂ
ಸಕಲ ಬುಧಸ್ತುತ್ಯಮನೊ
ಲ್ಬಕಳಂಕಪ್ಪೊಡಗೆ ಷೋಡಶಾಧ್ಯಾಯದಿಂದಂ||
ಅಂತು ಶಾಲಿಹೋತ್ರ ಗ್ರಂಥಂ ೨೩೦೦ ಮಂಗಲ ಮಹಾ
ಬಿಸಿಯ ಅಂಬಿಲದಲ್ಲಿ ಪಾದವ ಆರಿಸಿ ಪಾದಕ್ಕೆ ಔಷಧನ ತೊಡದು ೫
ಉಗನಿಯ ಎಲೆ ಸೌಡ ಮಾಡಿ ಹಾಕಿ ಪಾವುಡೆಯಲ್ಲಿ ಕಟ್ಟಿದು. ಅದಕ್ಕೆ
ಕವಳ ಕಾಡದೊಂಡೆಯ ಗೆಣಸ ತುಳಿದು ಅಂಬಿಲದಲ್ಲಿ ನೆನಯಿಸಿ ದಿನಂ
ಪ್ರ ಹೆರಳೆಯ ಕಾಯ ಪ್ರಮಾಣವಿಕ್ಕುದು (ವೀಪ ಸಂಪೂರ್ಣ) ಶ್ರೀ

**ವಿಷಯ :** ಕುದುರೆಯ ವೈದ್ಯ ವಿಚಾರ (ಔಷಧಿ ಮುಂತಾದುವು).

**ವಿಶೇಷ :** ಸಮಗ್ರ. ಆದರೆ ಆರಂಭದಲ್ಲಿ ಕೆಲವು ಕಡೆ ಲುಪ್ತವಾಗಿದೆ. ಅಂತ್ಯದ ಪತ್ರ ದಲ್ಲಿ ಕುದುರೆ ಮುಗ್ಗರಿಸಿ ಬಿದ್ದು ನೊಂದುದಕ್ಕೆ ಲೇಪದ ವಿಷಯವನ್ನು ತಿಳಿಸಿದೆ.

—ಕೆ ಆರ್ ಎಸ್

## 131

| ಕೆ. ೧೫೭೨/೧ | **ಅಶ್ವಶಾಸ್ತ್ರ** | ಕಂದ |
|---|---|---|
| ೮.೭" × "೧.೫ | ಅಭಿನವಚಂದ್ರ | ಸು. ೧೪೦೦ |
| ೧-೫೫ ಪತ್ರ | ೭ ಪಂಕ್ತಿ | ೪೦ ಅಕ್ಷರ |

**ಆದಿ :** ಶ್ರೀಪತಿ ದಾನವಕುಲದ
ಪ್ಪಾಪಹನಮರೇಂದ್ರವಂದಿತಂ ಸಕಲ ಜಗ
ದ್ವ್ಯಾಪಕನೆಮಗೀಗೆ ಸುಖ
ವ್ಯಾಪಾರೋದಾರ ಮಹಿಮೆಯಂ ಚಕ್ರಧರಂ ||೧||

**ಅಂತ್ಯ :** ಸಕಲ ವಿಷಹರಮನನುಪಮ
ಸಕಲ ಕ್ಷಯರೋಗ ಹರಮನೆಸೆದಿರೆ ಪೇಳ್ದಂ

ಸಕಳ ಬುಧ ಸ್ತುತ್ಯಮನೊ
ಲ್ಪಕಳಂಕರ್ಪೊಗಳೆ ಷೋಡಶಾಧ್ಯಾಯಮಿದಂ॥
ಅಂತು ಸಂಧಿ ೧೬ಕ್ಕಂ ಪದ ೮೮೮ಕ್ಕಂ ಮಂಗಳ ಮಹಾ ಶ್ರೀ
ಶಾಳೀ ಹೋತ್ರ ಸಮಾಪ್ತಃ॥ ಗ್ರಂಥಲೆಕ್ಕಕ್ಕೆ ೧೮೮೮ಕ್ಕಂ ಮಂಗಲ ಮಹಾ
ಶ್ರೀ

**ವಿಷಯ :** ಕುದುರೆಯ ವೈದ್ಯವಿಚಾರ (ಔಷಧಿ ಮುಂತಾದುವು).

**ವಿಶೇಷ :** ಸಮಗ್ರ. ಶಕಟರೇಫವಿದೆ. ಬರಹ ಸುಂದರವಾಗಿದೆ. ೫೬-೫೮ನೆಯ ಪತ್ರಗಳಲ್ಲಿ ಕುದುರೆಗಳ ಹಲ್ಲು, ಸುಳಿ, ಆಯುಷ್ಯ ಮೊದಲಾದ ವಿಷಯ ಗಳ ಅಶ್ವಶಾಸ್ತ್ರವೆಂಬ ಪ್ರತ್ಯೇಕ ಗ್ರಂಥವೊಂದಿದೆ.

—ಕೆಆರ್‌ಎಸ್

## 132

## ಅಶ್ವಶಾಸ್ತ್ರ

ಅಭಿನವಚಂದ್ರ

| | | |
|---|---|---|
| ಕೆ. ೬೯೧ | | ಕಂದ, ಟೀಕು |
| ೧೫.೯″ × ೧.೪″ | | ಸು. ೧೪೦೦ |
| ೧-೨೭ ಪತ್ರ | ೮ ಪಂಕ್ತಿ | ೯೦ ಅಕ್ಷರ |

**ಆದಿ :** ಅಶ್ವಶಾಸ್ತ್ರ॥ ಅಶ್ವವೈದ್ಯ॥
ಅನುಪಮಮಯ ಶಾಸ್ತ್ರಾಗಮ
ವನಧಿಯೊಳುಂ ಸಿಂಹದತ್ತ ಕೃತಿ ಲಕ್ಷಣಮಂ
ದಿನಕರತನಯ ರೆವಂತನ
ಮತದಿಂ ಪೇಳ್ವೆಸೆವ ಪೊಸಕಂನಡದಿಂ॥

ಟೀಕು॥ ಯಿಾ ಹೇಳಲ್ಪಟ್ಟಂಥಾ ಅಶ್ವಶಾಸ್ತ್ರವೆಂಬ ಸಮುದ್ರದಲ್ಲಿ ಸಿಂಹದತ್ತನು ಹೇಳಿದ ಕೃತಿಯ ಲಕ್ಷಣದಿಂದ ಸೂರ್ಯನ ಮಗನು ರೇವಂತನ ಮತದಿಂದ ಕಂನಡವಾಗಿ ಹೇಳಿಹೆನು ॥೧॥

**ಅಂತ್ಯ :** ಅಂಗಾಹಕ್ಕೆ ಸವಾಳ ಚ
ಯಂಗಳುಮಾದಂತಪಜ್ಜುಗಳು ದೂಕ್ಷ ಸ್ಥೂ
ಲಂಗಳು ನಳಿದೂರಿದಡೆ ಖು
ರಂಗಳು ಕುಬ್ಜಂಗಳಾದಡಲ್ಪಾಯುಷ್ಯಂ

ಟೀಕು॥ ಅಂಗಾಹಕ್ಕೆ ಸಮಾನ ಹಲ್ಲುಗಳು ಮೋನಾಗಿದ .. ದಡೆ ಆ ಕುದುರೆ ಅಲ್ಪಾ ಯುಷ್ಯವೆಂದರಿವುದೂ ॥೭೫॥

**ವಿಷಯ :** ಕುದುರೆಗಳ ರೋಗಾದಿ ಲಕ್ಷಣ

**ವಿಶೇಷ :** ಆರನೆಯ ಅಧ್ಯಾಯ ೭೫ನೆಯ ಪದ್ಯದವರೆಗೆ ಮಾತ್ರವಿದೆ. ಇದು ಸಿಂಹ

ದತ್ತನು ಬರೆದ ಅಶ್ವಶಾಸ್ತ್ರದ ಗದ್ಯದ ಟೀಕು. ಹಲವಾರು ಪತ್ರಗಳಿಗೆ ಹುಳುಹೊಡಿದಿವೆ.

—ಕೆಆರ್‌ಎಸ್

## 133

ಕೆ. ೧೫೬೨/೨ **ಅಶ್ವಶಾಸ್ತ್ರ** ಗದ್ಯ
೮.೭" × ೧.೫" ? ?
೫೬-೫೮ ಪತ್ರ ೭ ಪಂಕ್ತಿ ೪೦ ಅಕ್ಷರ

**ಆದಿ :** ಅಶ್ವಶಾಸ್ತ್ರ॥ ಕುದುರೆ ಹುಟ್ಟಿದ ತಿಂಗಳು ೧ಕ್ಕೆ ಮೇಲಣ ಹಲ್ಲು ಹುಟ್ಟುವವು....... ಯೆರಡು ಹಲ್ಲು ಹುಟ್ಟುವವು। ತಿಂಗಳು ೩ಕ್ಕೆ ಮೇಲಣ ಕೆಲದ ಹಲ್ಲು ಹುಟ್ಟುವಲು।

**ಅಂತ್ಯ :** ಯಿಾ ಪ್ರಕಾರದ ರೇಖೆ ದೊಡ್ಡಿತ್ತಾಗಿಯಿದ್ದಡೆ ಅದಕ್ಕೆ ೮ ವರುಷದಾಯುಷ್ಯ। ಕಂಣೊಳಗೆ ಕೆಂಪಿನ ರೇಖೆಯಿರೆ ೮ ವರುಷದಾಯುಷ್ಯ ಕಿವಿಯಲ್ಲೂ ದಾರೆಯನೆತ್ತೆ ಕೆಂಪಾಗಿ ಯಿದ್ದಡಂ ೮ ವರುಷದಾಯುಷ್ಯ। ಯಿಾ ಪ್ರಕಾರದಲೂ ನಾಲ್ಕು ವುಂಟಾದರೆ ೩೨ ವರುಷದಾಯುಷ್ಯವೆಂದು ಅಱುವುದು। ಹೊಕ್ಕುಳು ನಾಲಗೆ ಮೂಗು ಯಿಾ ೩ ಹೊಲಸುನಾತರೆ ೩ ವರುಷಕ್ಕೆ ಸಾವುಹೆಂದಱುವುದು. ಯಿದು ಆಯುಷ್ಯವನಱುವ ಕ್ರಮ॥ ಶ್ರೀ

**ವಿಷಯ :** ಕುದುರೆಯು ರೋಗಗಳಿಂದ ಅದರ ಆಯುಷ್ಯವನ್ನು ತಿಳಿವ ಬಗೆ.

**ವಿಶೇಷ :** ಮೂರು ಗರಿಗಳು ಮಾತ್ರ ಇವೆ, ಸಮಗ್ರವಾಗಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಅಶ್ವಶಾಸ್ತ್ರವೆಂಬ ಇನ್ನೊಂದು ಗ್ರಂಥವಿದೆ.

—ಕೆಆರ್‌ಎಸ್

## 134

ಕೆ. ೧೧೮೨/೫ **ಅಷ್ಟಕಗಳು** ಹಾಡುಗಳು
೧೦.೨" × ೧.೩" ? ?
೧-೧೨ ಪತ್ರ [illegible] ಪಂಕ್ತಿ ೨೮ ಅಕ್ಷರ

**ಆದಿ :** ಶ್ರೀ ಗಣಾದಿಪತಯಂ ನಮಃ॥ ದೊಡೇರಿ ವೀರಭದ್ರದೇವರ ಪಾದವೇ ಗತಿ॥
ಶ್ರೀ ಮದಗಜವಾರಲಿಂಗದ ಪ್ರೇಮದಿಂದ ತನುತ್ರಾಯಾದಿ
ಸಾಮವೇದವ ನೆಲೆಗೊಳಿಸಿ ತಾಮಸಂಗವನಳಿದೂ
ಯೋಮ ಮೂರುತ್ತಿ ವೊಳ ಹೊರಗೆಂಬ
ಆ ಮಹಾಗನಪಿದೂ ॥೧॥

**ಅಂತ್ಯ :** ಯಿಂತು ಶಿವಪೂಜೆಯ ಮಾಳ್ಪ ಪುಂಣ್ಯವನು
ಯಂತಕ್ಕೆ ಯಿಾ ಜಲ್ಮದೊಳಗೆ ನಾನು

ಶಂತತೆಂನಯುಗುಪ ಪ್ರಾಸಂನಶಂಕರಲಿಂಗ ನಿಂಮ ನಾನಾಂತ ಪರಿಯಲಿ
ಪೂಜಿಸುತಿರ್ಪೆನೂ ||೧೭||

**ವಿಷಯ :** ಶರಣರ ಸ್ತುತಿ.

**ವಿಶೇಷ :** ಶಿಥಿಲ ಪ್ರತಿ. ಇದೇ ಕಟ್ಟಿನಲ್ಲಿ ಮಹಾಮೇರುವಿನ ಸ್ತರ, ಸಂಸ್ಕೃತ ಶ್ಲೋಕಗಳು, ಶಿವನ ಕುರಿತ ಹಾಡುಗಳು, ಉರಿಲಿಂಗ ಪೆದ್ದಿಯ ವಚನ, ಶಿವಸ್ತುತಿ ಈ ಗ್ರಂಥಗಳಿವೆ.

—ವೈಸಿಬಿ

## 135

| ಕೆ.ಬಿ. ೫೩೨/೪ | ಅಷ್ಟಕಗಳು | ವೃತ್ತ, ಪದ |
|---|---|---|
| ೭.೯" × ೫.೭" | ? | ? |
| ೭೯-೮೧ ಪತ್ರ | ೧೪ ಪಂಕ್ತಿ | ೧೮ ಅಕ್ಷರ |

**ಆದಿ :** ಅಷ್ಟಕ,
ಶ್ರೀಮತ್ಸುರಾಸುರ ನರೇಶ್ವರ ಸೇವಿತಾಯ
ಚಾಮೀಕರಾಚಲ ಸಮಾನ ಕಲೇವರಾಯ
ಕಾಮಾಂತಕಾಯ ಕಮನೀಯ ಗುಣಾಕರಾಯ
ರಾಮಾದಿ ಬೋಧ ಹರನಾಯ ನಮೋಜಿನಾಯ ||೧||
ಶ್ರೀ ನಾಭಿರಾಜ ತನುಜಾಯ ವೃಷಧ್ವಜಾಯ
ಭೂನಾಥ ಲಾಲಿತ ಪದಾದ್ವಯ ಬಂಧುರಾಯ
ಜ್ಞಾನಪ್ರಕಾಸಿತ ಮಹಾವಿಭವಾನ್ವಿತಾಯ
ಶ್ರೀ ನಾಭಿ ವಂದ್ಯನಮಿತಾಯ ನಮೋ ಜಿನಾಯ ||೨||

**ಅಂತ್ಯ :** ಪ್ರಾತಿಹರ್ಯ್ಯೋಶ ಜಿನಷ್ಟಗುಣ ಸಿದ್ಧ ವಿ
ಖ್ಯಾತಿ ಆಚಾರ್ಯ್ಯ ಪಾಠಕ ಸರ್ವ್ವ ಸಾದು
ಮಾತೆಗು ನಿಂನ ಪದಸ್ಮರಣೆ ಸಂತತವಿರಲು
ಯತಕ್ಕೆಲ್ಲರ ನೋಡಿ ಮರಗುತಿಹುದೆನಗೆ ||ಶ್ರೀ||

**ವಿಷಯ :** ಜಿನ ಸ್ತುತಿ.

**ವಿಶೇಷ :** ಸಮಗ್ರ. ಈ ಅಷ್ಟಕದೊಂದಿಗೆ ಕೆಲವು ಹಾಡುಗಳೂ ಇವೆ. ಇದೇ ಪುಸ್ತಕದಲ್ಲಿ ಜೈನ ಕ್ರಿಯಾಸಾರ, ದೇವರಾಜಾಷ್ಟಕ, ತೀರ್ಥಂಕರರ ಚರಿತ್ರೆ ಎಂಬುದಾಗಿ ಒಟ್ಟು ೧೪ ಕೃತಿಗಳಿವೆ.

—ಕೆಆರ್ಎಸ್

## 136

ಕೆ. ೭೪೬ | ಅಷ್ಟಕವರ್ಗ (ಸಟೀಕು) | ಶ್ಲೋಕ, ಟೀಕು
೧೭" × ೧.೫" | ? | ?
೧೩೪-೧೫೦ ಪತ್ರ | ೮ ಪಂಕ್ತಿ | ೫೪ ಅಕ್ಷರ

**ಆದಿ:** ಶುಭಮಸ್ತು। ಅಷ್ಟಕವರ್ಗ ರಾಶಿಚಕ್ರಂ

ಶ್ಲೋಕ॥ ವಿಬೇದ್ಭೂವನೌ ಸಂಯೋಜ್ಯಾಕ್ಷರ ಸಂಖ್ಯಯಾ
ಶೂನ್ಯಾಕ್ಷರೇಣ ದಶಮಂ ನಿದಿರ್ಶೇದ್ವಿಧಿವತ್ತಮಃ
ಸೂರ್ಯಾದಿ ಲಗ್ನ ಪರ್ಯಂತಂಯೆತೈರ್ವಾ
ತ್ರ್ಯೈರ್ವಿ ನಿಕ್ಷಿಪೇತ್ ಸ್ವಷುಸ್ವಷ್ಟಕವರ್ಗೇಷು ಗ್ರಹಾಣಾಂಚ
ಪೃಥಕ ಪೃಥಕ್ ಅಷ್ಟಕ ವರ್ಗಸ್ಯ ವಾಕ್ಯಾಗಿ ಸೂರ್ಯಾದಿ
ನಾಂ ಯಥಾ ಕ್ರಮಂ ಗ್ರಹಾಪ್ರಭೃತಿ ಸಂಸ್ಥಾನಂ
ನಿರ್ದಿಶೆ ದಕ್ಷರೈಕ್ರಮಾ

ಟೀಕು: ಭೂರಿಂ ಮೇಲೆ ಮೇಹಾದಿಯಾಗಿ ಮೀನ ಪರ್ಯಂತರ ದ್ವಾದಶ ರಾಶಿ ಚಕ್ರವ ಬರದು ಜನ್ಮ ಸಮಯ ತತ್ಕಾಲಿಕ ಸ್ಪುಟಗ್ರಹಗಳನ್ನು ತದ್ರಾಶಿ ಯಲ್ಲಿ ಬರದು ಅಕ್ಷರ ನಿಘಂಟಿನ ಸಂಖ್ಯಾ ಪ್ರಕಾರಕೆ ಬಿಂದುಗಳ ಹಾಕೂದು ರ್ನ। ಜ್ಞಾ। ಅ। ಯಿಾ ಮೂರು ಅಕ್ಷರ ಬಂದ ಬಳಿಯಲ್ಲಿ ಹತ್ತು ಎಂದು ತಿಳಿವದು। ೧೦ನೇ ಸ್ಥಾನದಲ್ಲಿ ಬಂದು ಹತ್ತರ ಮೇಲೆ ೧ ಬಂದರೆ ೧೧ ಸ್ಥಾನಕ್ಕೆ ಬಿಂದು ಹಾಕೂದು। ೨ ಕ್ಕೆ ಹನ್ನೆರಡನೆ ಸ್ಥಾನಾ ಯಂದು ತಿಳಿ ವದೂ ಸೂರ್ಯಾಷ್ಟಕವರ್ಗದಲಿ ಸೂರ್ಯ ಆದಿಯಾಗಿ ಬಿಂದು ಹಾಕೂದು। ಸೂರ್ಯಾಷ್ಟಕವರ್ಗದಲ್ಲಿ। ೨ನೇ ವಾಕ್ಯ ಚೆಂದ್ರಯಿದ್ದ ಸ್ಥಾನಾದಿಯಾಗಿ ಬಿಂದುಗಳ ಹಾಕುವದೂ। ೩ನೇ ವಾಕ್ಯ ಅಂಗಾರಕ ಇದ್ದ ಸ್ಥಾನಾದಿಯಾಗಿ ಹಾಕೂವದೂ ನಾಲ್ಕನೇ ವಾಕ್ಯಕೆ ಬುದ ಇದ್ದ ಸ್ಥಾನಾದಿಯಾಗಿ ಹಾಕೂದು ೫ನೇ ವಾಕ್ಯಕೆ ಗುರು ಇದ್ದ ಸ್ಥಾನಾದಿಯಾಗಿ ಹಾಕೂದು ೬ನೇ ವಾಕ್ಯಕೆ ಶುಕ್ರ ಇದ್ದ ರಾಶಿ ಮೊದಲಾಗಿ ಬಿಂದುಗಳ ಹಾಕೂದು ೭ನೇ ವಾಕ್ಯಕೆ ಶನಿಯಿದ್ದ ರಾಶಿ ಮೊದಲಾಗಿ ಬಿಂದುಗಳ ಹಾಕೂದು ೮ನೇ ವಾಕ್ಯಕೆ ಜನ್ಮಲಗ್ನ ಮೊದಲಾಗಿ ಬಿಂದುಗಳ ಹಾಕೂದು ಸೂರ್ಯಾದಿಯಾಗಿ ಸಪ್ತ ಗ್ರಹಗಳಿಗು ಅವರವರ ಅಷ್ಟಕವರ್ಗಗಳಲ್ಲಿ ವಾಕ್ಯದ ಮೇಲೆ ಬಿಂದುಗಳ ಸೂರ್ಯಾದಿಯಾಗಿ ಶನಿಪರ್ಯಂತರ ವಂದು ವಂದೂ ಗ್ರಹಕೆ ವಾಕ್ಯ ೮ ಮೇರೆಗೆ ೭ ಗ್ರಹಕ್ಕೂ ವಾಕ್ಯ ೫, ೬ ಲಗ್ನಸಹಿತ ಬಿಂದುಗಳ ಹಾಕೂದು॥

**ಅಂತ್ಯ :** ಚತ್ವಾರಿಂಶಪ್ಪಲೆ ಸೌಖ್ಯಂ ಪ್ರುಥಿರೆ ಚಾರ್ಕಮೋಷಗೆವಿತ್ತ ಭಾಗ್ಯೆ ಭೃಗೌ ಸ್ವಾಂಶೆ ಜಾತೆಗಜಪತಿರ್ಭವೇನ। ವಾಹನಸ್ತಿ ಗುಕಾತುಂಗೆ ಚತ್ವಾರಿಂಶ ತ್ಪಲ್ಯೈರ್ಸ್ವತೆ। ಮೋಷಲಗ್ನೇರ್ಶ ಸಂಯುಕ್ತೆ ಹಯಲಕ್ಷಾಧಿಪೆ ೧। ಭರ್ರೇ ಚತ್ವಾರಿಂಶೆ ತ್ಪಲೆ ಲಗ್ನೇಗುರೌ ಚಾಪಿ ಭೃಗೌಷ್ಯಷೆ ನಕ್ರೆರಕ್ತೆ ಘಂಟೆ ಕೃಷ್ಣಿ ತ್ರಯು ಸಿಂಹಾಸನಾಧಿಪಃ। ದೇಹೇಚ ಚಂದ್ರಿ ಗುಣಕಾರ ಬಂದವಃ ಶತ ಶತದ್ವ್ರಯು ಭೂಮಿಸುತ ಚ ಕರ್ಮಣಿಃ ಸಿಂಹಾಸನೇ ಶಃಬಲು ಪೂರ್ವ ಖಂಡೇ ಶತದ್ವಯೆ ಯೋಜನ ಭೂಮಿಕರ್ತ್ರಾ ಲಗ್ನೇಚ ಕೃಷ್ಣಿ ಗುಣಕಾರ ಬಿಂಧವಃ ಶ। ತ। ದ್ವ। ಯೆ। ಗುರೌಚ ಚಂದ್ರಿಯದಿಲಾಭಸಂಸ್ಥಿ। ಸಿಂಹಾ ಸನೆಶಃ ಬಲು ಮಂದ್ಯ ಖಂಕ ತದ್ವಯೆ ಯೋಜನ ಭೂಮಿತರ್ಕಾ। ಲಗ್ನೇಚ ಜೀವೆ ಗುಣಕಾರ ಬಿಂದವಃ ಪಷ್ಟದ್ವಯೆ ಯೋಜನೆ ಭೂಮಿ ಕರ್ತ್ರಾ ಸೂರ್ಯೆ ಬುಧಾಚ ಪಷ್ಟಸ್ಥಿ ಸಿಂಹಾಸನೆ .ಶಃಬಲು ಪೂರ್ವ ಖಂಡೆ ಶತತ್ರ ಯೋಜನೆ ಭೂಮಿ ಕರ್ತಾ। ಕೇಂದ್ರ ಭೃಗೌಜ್ಞಾ ಗುಣಕಾರ ಬಿಂದವಃ ಸದಾತ್ರಿ ಸಂಖ್ಯೆ ಮಗೌಚಲಾಬೇ ಗಜಾನಾಥಃ ಬಲು ಮಧ್ಯ ಖಂಡೆ ಶತ ತ್ರಯೆ ಯೋಜನ ಭೂಮಿಕರ್ತಾ ಇತಿ ಅಷ್ಟಾಕರ್ವ ಫಲಂ ಸಂಪೂರ್ಣಂ ಛಾಯಾ ಸಮೇತ ಶ್ರೀ ಸೂರ್ಯನಾರಾಯಣಾಯ ನಮಃ

**ಟೀಕು:** ನಕ್ಷತ್ರ ಅದ್ಯಂತ ಪರಮಗಳಿಗೆ ನಿಪಳಿ ಕೊಂಡು ಸಂದ ಗತಗಳಿಗೆಯನ್ನು ಅದರಲ್ಲಿ ಕಳೆದು ನಿಂತ ಶೇಷವಿ ಯೇಷ್ಯಗಳಿಗೆ। ಗತಗಳಿಗೆಯನ್ನು ಯಿಾ ಯೇಷ್ಯಗಳಿಗೆಯನ್ನು ಯಿಾ ಯವಡಂ ಪ್ರತಿಯನ್ನು ಇರಿಸಿಕೊಂಡು ಯಾವ ನಕ್ಷತ್ರಕೆ ಯಾವ ಮಹಾ ದೆಶೆಯೋ ಆದಶಾವದೃಷಾ ನಿಹಳಿಕೊಂಡು ಗತಗಳಿಗೆಯಿಂದಾ ಚ ಗುಣಿಸಿಪರಮಂ ಗಳಿಗೆಯಿಂದಾ ಭಾಗಿಸಲು ಬಂದ ಲಬ್ಧಿಯಷ್ಟು ಅಷ್ಟು ದಶಾಮರ್ಷದಲ್ಲಿ ಸಂದವರ್ಷ। ಯಿಾ ಈ ವರ್ಷ ಶೇಷಾ ನಿಪಳಿಕೊಂಡು ೧೨ ಹನ್ನೆರಡರಿಂದಾ ಗುಣಿಸಿ ಪರಮಗಳಿಗೆಯಿಂದಾ ಭಾಗಿ ಸಲು ಬಂದ ಲಬ್ಧವು ಮಾಸಾ ಈ ಮಾಸ ಶೇಷವನ್ನು ೩೦ ರಿಂದ ಗುಣಿಸಿ ಪರಮಗಳಿಗೆಯಿಂದಾ ಭಾಗಿಸಲು ಬಂದ ಲಬ್ಧಗಳು ತಿಥಿಗಳೂ XXX ಈ ಪ್ರಕಾರದಲ್ಲಿ ಸೂರ್ಯಾದಿ ನವಗ್ರಹಗಳಿಗು ೩೬೦ ದಿನಕ್ಕೆ ಯಿಾ ಗ್ರಹಗಳ ಭುಕ್ತಿ ದಿನಘಳಿಗೆಗೆ ಸಹಾ ಫಲಾಫಲಗಳ ಕಂಡುಕೊಳುವುದು.

**ವಿಷಯ :** ಜ್ಯೋತಿಷ್ಯ ವಿಚಾರ

**ವಿಶೇಷ :** ಅಲ್ಲಲ್ಲಿ ಗ್ರಂಥ ತ್ರುಟಿತ. ಸಮಗ್ರ.

—ಎಂಎನ್‌ಎಲ್

## 137

| ಕೆ. ೧೧೩೮/೬ | **ಅಷ್ಟಕ ಸಂಗ್ರಹ** | ಕಂದ, ವೃತ್ತ |
|---|---|---|
| ೭.೪" × ೨" | ವಿವಿಧಕರ್ತೃಕ | ? |
| ೧೪-೨೬ ಪತ್ರ | ೯೪ ಪಂಕ್ತಿ | ೫೦ ಅಕ್ಷರ |

**ಆದಿ:** ಶ್ರೀ ಗುರುವೆ ಗತಿ॥ ಶತಗಣನಾಮ ಸ್ತೋತ್ರ ಮಂಗಳಷ್ಟಕ॥
ಶ್ರೀ ಮದ್ವೀರಕ ವೀರಭದ್ರ ವಿಜಯಂ ಶ್ರೀ ನಂದಿನಾಥಾಹ್ವಯೋ
ಭೂಮಾಕ್ಷಂ ವರಶಂಕುಕರ್ನ ಶರಭಾ ಶ್ರೀ ಭೃಂಗಿನಾಥೋವಿಭುಂ
ಸೋಮಾಕ್ಷಂ ಸುಮನೋಪಮನ್ಯು ಮಹಿಮಾ ಶ್ರೀ ವಾಮದೇವೋಮಹ್ಯ
ಭೀಮಾಕ್ಷಂ ಪ್ರಮುಖ ಪ್ರಸನ್ನ ಹೃದಯಂ ಕುರ್ವಂತುತೇ ಮಂಗಳಂ ॥೧॥

**ಅಂತ್ಯ:** ಸರ್ವಾಷ್ಟಕಮಿದಂ ಪುಣ್ಯಂ
ವಶಿಷ್ಠೇನ ಸಮಿಾರಿತಂ
ಯಃ ಪಠ್ಯೇತ್ಪೃಣಾಯದ್ವಾಪಿ
ಶಿವಲೋಕೇ ಮಹೀಯತೇ ॥೯॥

**ವಿಷಯ:** ಶಿವನ, ಶಿವಶರಣರ ಸ್ತೋತ್ರಗಳು.

**ವಿಶೇಷ:** ಈ ಸಂಗ್ರಹದಲ್ಲಿ ಶತಗಣನಾಮ ಸ್ತೋತ್ರ ಮಂಗಳಾಷ್ಟಕ, ಅಷ್ಟಾವರಣದ ಮಂಗಳಾಷ್ಟಕ, ಮಂಗಳಾಷ್ಟಕ, ವಿವಾಹ ಮಂಗಳಾಷ್ಟಕ, ನೂರೆಂಟು ಶರಣೆಯರ ಮಂಗಳಾಷ್ಟಕ, ವೀರಶೈವ ಮಂಗಳಾಷ್ಟಕ, ಲಗ್ನಾಷ್ಟಕ ಸಿದ್ಧಾಷ್ಟಕ, ದಕ್ಷಿಣಾಮೂರ್ತಿಯಷ್ಟಕ, ಮಹಿಮಾಷ್ಟಕ, ವಿರೂಪಾಕ್ಷ ಲಿಂಗಾಷ್ಟಕ, ಲಿಂಗಾಷ್ಟಕ, ವೀರಭದ್ರನ ಅಷ್ಟಕ, ವೃಷಭಾಷ್ಟಕ, ಗ್ರಂಥಾಷ್ಟಕ, ಸರ್ವಾಷ್ಟಕಗಳೆಂಬ ಸಂಸ್ಕೃತ ಮತ್ತು ಕನ್ನಡ ಅಷ್ಟಕಗಳಿವೆ. ಅಲ್ಲದೆ ಗುರು ರಗಳೆ, ಷಡಕ್ಷರಿಯ ರಗಳೆ ಮೊದಲಾದ ೨೯ ಕೃತಿಗಳಿವೆ.

—ಜಿಜಿಎಂ

## 138

| ಕೆ. ೧೭೫೩/೩೭ | **ಅಷ್ಟಕಸಂಗ್ರಹ** | ಕಂದ, ವೃತ್ತ |
|---|---|---|
| ೮" × ೨.೪" | ವಿವಿಧಕರ್ತೃಕ | ? |
| ೨೦೬-೨೧೪ ಪತ್ರ | ೧೨ ಪಂಕ್ತಿ | ೪೨ ಅಕ್ಷರ |

**ಆದಿ:** ಶ್ರೀ ಮಹಿಮಾಷ್ಟಕದ ಕಂದ॥
ಆವನ ಚರಣದೊಳಂಬಕ
ಆವಾವನ ನೇತ್ರದೊಳು ಹವಿತ್ರಶೂಲದಿ ಪೆಣ ಮ
ತ್ತಾವನ ಶಿರದೊಳು ಸುರನಧಿ
ದೇವವಿರೂಪಾಕ್ಷರಲ್ಲದುಳಿದರ್ಗುಂಟೇ ॥೧॥

**ಅಂತ್ಯ :** ಮುದದಿ ಪ್ರಭುದೇವರ ಅಷ್ಟಕವನೋಜಿಸಿದೊಡಂ ಕೇಳಲೊಡಂ ಪದುಳದಿಂ ಮನದ ಪ್ರಭಾವಿಸಿ ಮುಕ್ತಿಯಂ। ಸದಮಲಾತ್ಮಕನೆನಿಸಿ ತೋಱುವ ಭಕ್ತಿಯಂ ...ಸುವ ಅಲ್ಲಯ್ಯನೋದುವರಿಷ್ಟಮಂ ಬಹುಶ್ರೇಷ್ಟಮಂ॥

**ವಿಷಯ :** ಶಿವಸ್ತುತಿ.

**ವಿಶೇಷ :** ಈ ಸಂಗ್ರಹದಲ್ಲಿ ಪ್ರೇಮಾಷ್ಟಕ, ಲಿಂಗಾಷ್ಟಕ, ಪರಮೇಶ್ವರಿ ನಾಮ, ವೀರಭದ್ರಾಷ್ಟಕ, ಬಸವಾಷ್ಟಕ, ಗಣಾಷ್ಟಕ, ಸಿದ್ಧೇಶ್ವರನ ಅಷ್ಟಕ, ಬಸವಾಷ್ಟಕ, ವೃಷಭಾಷ್ಟಕಗಳಿವೆ. ಅಲ್ಲದೆ ಇದರ ಜೊತೆಗೆ ಮಿಶ್ರಸ್ತೋತ್ರ ಮೊದಲಾದ ೯೭ ಕೃತಿಗಳಿವೆ.

—ಜಿಜಿಎಂ

## 139

ಕೆ.ಎ. ೩೫೯/೧ — **ಅಷ್ಟಗ್ರಾಮಗಳ ಕೈಫಿಯತ್ತು** — ಗದ್ಯ

೧೩ ೫" × ೮.೬" — ? — ?

೧-೨೪ ಪತ್ರ — ೨೬ ಪಂಕ್ತಿ — ೨೩ ಅಕ್ಷರ

**ಆದಿ :** ಅಷ್ಟಗ್ರಾಮಗಳ ಕೈಫಿಯತ್ತು.

ಸ್ವಾಮಿಯವರ ಪಾದಕ್ಕೆ ಕಿರಂಗೂರು ತಿಮ್ಮರಸ ಹೆಬ್ಬಾರರ ಮಗ ರಾಮಾನುಜಾಚಾರ್ಯರು ಮೇಲೆ ನಾಡಿಗೆ [?] ಚಿತ್ತೈಸುವಾಗ್ಗೆ ನಡೆದ ಶಾಲೀವಾಹನ ಶಕ ವರುಷ ೮೪೪ ಈಚೆಗೆ ವಿಷ್ಣುವರ್ಧನರಾಯರು ೯೧೨ ರಾಯರು ಅಪ್ಪವಣೆವಿಡಿದು ಕಾವೇರಿ ಉಭಯ ಪಾರ್ಶ್ವದಲ್ಲು ಅಷ್ಟಗ್ರಾಮ ಕಟ್ಟಿ ಕಾಲುವೆಗಳು ಸಹ ಕಟ್ಟಿ ಬ್ರಾಹ್ಮಣ ಪ್ರಭುಪಳತ್ರವಾಗಿ (?) ನಡೆದು ಬಂದಂಥ ವರುಷ ೫೩೨. ತಿಮ್ಮಣ್ಣ ಡಣಾಯಕರವರಿಗೆ ಶಿಥಿಮುಲ್ಲಿಕಾ ಪ್ರಯೋಗಾ ಶಿಥಿಲದ (?) ತರುವಾಯದಲ್ಲಿ

**ಅಂತ್ಯ :** ನಂದನ ಸಂವತ್ಸರದಲ್ಲಿ ಅಗ್ರಹಾರ ಪಾಳುಭೂಮಿಯಲ್ಲಿ ಆದ ಗದ್ದೆ ಖ೪೭॥ ಅಂತು ಆದ ಗದ್ದೆ ಖ೯೫ ॥೪, ನೀರು ಮಣ್ಣಿಗೆ ಸೇರಿದ ಭೂಮಿ ಕಂದಾಯ ಗ೧೩೯೫೪ ಕಾಲುವೆ ಕೆಲಸಕ್ಕೆ ಮುಟ್ಟಿದ್ದು, ಸರ್ವಜಿತು ಸಂವತ್ಸರಾರಭ್ಯ ವರ್ಷ ೯ಕ್ಕೆ ಮುಟ್ಟಿದ್ದು ಖ೧೦೦೭ ೫ ೩ |||, ಪಾರುಪತ್ಯದ ಹೋಬಳಿ ಸ್ಥಳ. ಕಂದಾಚಾರ ಗ೧೦೮೦, ಹಳೆ ಆದ ಮೆ (?) ಹುಟ್ಟುವಳಿಗ ೬೫೦॥೨, ಅಂತು ವರ್ಷ ೯ಕ್ಕೆ ಉತ್ತಾರ ಗ೮೦೯೯೧೪||| ೪ |||=ಗೆ ಹುಟ್ಟಿದ್ದು ಗ ೩೬೩೬೮೩ ಶುದ್ಧ ಲಾಭ ಕಂಡು ಬಂದದ್ದು :-

**ವಿಷಯ :** ವಿಷ್ಣುವರ್ಧನರಾಯರು ಕಾವೇರೀ ವಲಯಕ್ಕೆ ಬಂದು ಕೆಲವು ಗ್ರಾಮಗಳಲ್ಲಿ ಮಾಡಿದ ಕೆಲಸದ ವಿವರ

**ವಿಶೇಷ :** ಇದನ್ನು ೧೯೫೬ರಲ್ಲಿ ಮದ್ರಾಸಿನ D.1966 ಹಸ್ತಪ್ರತಿಯಿಂದ ನಕಲು ಮಾಡಿದೆ. ಇದರೊಡನೆ ಮೈಸೂರು ನಗರದ ಪೂರ್ವೋತ್ತರ ಸಂಗತಿ ಮತ್ತು ಸೋಗಾನಿ ಅಗ್ರಹಾರದ ಕೈಫಿಯತ್ತುಗಳಿವೆ. ಪತ್ರದ ಒಂದು ಕಡೆ ಮಾತ್ರ ಬರವಣಿಗೆಯಿದೆ.

—ಬಿಎಸ್‌ಎಸ್

## 140

ಕೆ.ಎ ೫೦೦/೩ | **ಅಷ್ಟಮಠಗಳ ಕೈಫಿಯತ್ತು** | ಗದ್ಯ
೧೨.೫" × ೮.೫" | ? | ?
೧೦೦ ಪತ್ರ | ೨೫ ಪಂಕ್ತಿ | ೩೦ ಅಕ್ಷರ

**ಆದಿ :** ಅಷ್ಟಮಠಗಳ ಕೈಫಿಯತ್ತು।

೧. ಕಾಣ್ಯೂರು ಮಠದ ಕೈಫಿಯತ್ತು. ಕ್ಷಯ ಸಂವತ್ಸರದ ಜೇಷ್ಠ ಶು ೫ ಲ್ಲು। ಕಾಣೂರು ಮಠದ ನರಸಿಂಭಲ್ಲನೂ। ಬರಸಿದವ ಉಡಾವಳಿ ನಂಮ ಮೂಲ ಗುರು ಮಧ್ವಾಚಾರ್ಯರು ಅವತ್ತರ ಮಾಡಿದೂ। ಚತುಸ್ಸಹಸೆ ತ್ರಿಶತ್ರ್ಯೋತ್ತರೆ ಗತಿ ಸಂವತ್ಸರಣಾಂ XXX ಪ್ರಾತಃಕಾಲದಿ ಕ್ರಮದಿಂದಾ। ತ್ತಾವೆ ಸರ್ವದಾ ಪೂಜೆಗಳಂನ್ನೂ ಮಾಡುತ್ತಾ ಕೆಲವು ದಿವಸಯಿದ್ದರು।

**ಅಂತ್ಯ :** ೮. ಅಧಮಾರು ಮಠದ ಕೈಫಿಯತ್ತು.
ಅಕ್ಷಯ ಸಂವತ್ಸರದ ಜೇಷ್ಠ ಶುದ್ಧ ೫ ಲ್ಲು। ಅಧಮಾರ ಮಠದ ಕೈಫಿಯತ್ತನ್ನು ಬರಸಿದಸಂಶಾವಳಿ ನಂಮ ಮೂಲ ಗುರು ಮಧ್ವಾಚಾರ್ಯರು ಮುಂದೆ ಸ ಉಸ್ತಾವತ್ತೆ। ಕವಲೆ ಕ್ಷಣ XXX ಮೇಲೆ ಕಮಲೇಕ್ಷಣತ್ತಿಥಾ

**ವಿಷಯ :** ಆದಮಾರು ಮಠ ಮುಂತಾದ ಮಠಗಳ ಚರಿತ್ರೆ.

**ವಿಶೇಷ :** ಅತ್ಯಂತ ಶಿಥಿಲ ಪ್ರತಿ. ಮೋಡಿ ಅಕ್ಷರ. ಇದರಲ್ಲಿ ಇತರೆ ಕೃತಿಗಳಿಗೂ ಸಂಬಂಧಿಸಿದ ಕೆಲವು ಹಾಳೆಗಳಿವೆ.

—ಎಂಪಿಎಂ

## 141

ಕೆ. ೧೩೯೬/೩ | **ಅಷ್ಟವಿಧಾರ್ಚನೆ** | ಪದ್ಯ, ಶ್ಲೋಕ, ಟೀಕು
೮.೯" × ೨.೧" | ಬೋಳಬಸವರಾಜದೇವರು | ?
೧೬೪-೧೭೦ ಪತ್ರ | ೧೦ ಪಂಕ್ತಿ | ೩೫ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಬೋಳ ಬಸವರಾಜದೇವರು ಶೇರಿಸಿದ ಅಷ್ಟವಿದಾರ್ಚನೆ ಕ್ರಮವೆಂತೆಂದೊಡೆ॥

ಜಲಗಂಧಾಕ್ಷತ್ಯೈಃ ಪುಷ್ಪೈ। ದೂಪೈರ್ದೀಪಸ್ತ ಥೈವಚ। ನೈವೇದ್ಯರಪಿ ತಾಂಬೂಲೈ। ರ್ಭವೇದಷ್ಟವಿಧಾರ್ಚನಂ॥

ಟೀಕು॥ ಉದಕದಿಂದೆ। ಗಂಧಂಗಳಿಂದೆ। ಅಕ್ಷತೆಗಳಿಂದೆ। ಪುಷ್ಪಂಗಳಿಂದೆ। ಧೂಪಂಗಳಿಂದೆ। ದೀಪಂಗಳಿಂದೆ। ನೈವೇದ್ಯಂಗಳಿಂದೆ। ವೀಳ್ಯೆಗಳಿಂದವು। ಎಂಟು ಬಗೆಯಾದ ಪೂಜೆಯು। ಅಹುದು ॥೧॥

**ಅಂತ್ಯ :** ಬ್ರಹ್ಮತ್ಯಾದಿ ಮಹಾದೋಷಿಃ। ನಃ ಪ್ರಯಚ್ಚಿತ್ತ ಕರ್ಮಣಾತ್। ಕ್ಷಯಂತೆ ಸರ್ವಪಾಪಾನಿ। ಚರಪಾದಾಂಬು ಶತತಂ ಭಕ್ತ್ಯಾ। ಪಿತ್ವಾನಾಂಚ ಮಮ ಭರ್ಜಂ ಪುನರ್ಜನ್ಮ ವಿನಾಸಸ್ಯ। ತಸ್ಮಾಂ ಪಾದಾಂಬು ಶೇವನಾತ್ ॥೨॥

**ವಿಷಯ :** ಅಷ್ಟವಿಧವಾದ ಅರ್ಚನೆಯ ಕ್ರಮ.

**ವಿಶೇಷ :** ಇದೇ ಕಟ್ಟಿನಲ್ಲಿ ವಿವೇಕ ಚಿಂತಾಮಣಿ, ಗಣಸಹಸ್ರನಾಮ, ರಾಜಅಘೋರ ಸ್ತೋತ್ರ (ಸಂ), ಶ್ರೀ ರುದ್ರಕವಚ ಸ್ತೋತ್ರ, ಶಿವಕವಚ ಸ್ತೋತ್ರ ಎಂಬ ಗ್ರಂಥಗಳಿವೆ.

—ವೈಸಿಬಿ

## 142

ಕೆ.ಬಿ. ೬೯೭/೧೦ **ಅಷ್ಟವಿಧಾರ್ಚನೆಯ ಅಷ್ಟಕ** ವಚನ

೬" × ೮.೫" ? ?

೨ ಪತ್ರ ೨೨ ಪಂಕ್ತಿ ೨೩ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ। ಅಷ್ಟವಿದಾರ್ಚನೆಯ ಅಷ್ಟಕ। ಜಯಜಯ ನಿರಂಜನ ನಿರ್ಗ್ಗುಣ। ಜಯಜಯ ನಿರುಪಮ। ನಿರ್ಮ್ಮಲ ನಿರ್ವ್ವಯ ಜಯಜಯ॥ ॥ಪಲ॥ ಯಮನಿಯಮಾಸಣ ಪ್ರಣಮ ಸಮಾದಿಯ ಸುಮನೋದ್ಭವದ ಸುನ್ನೇನಂದದ। ಗಮನಿಸಿ ಮೆಲಣ ಕನಕ ದ್ವರದ ತ್ರಿಕೂಟ ಗಿರಿಯೊಳಗೆ। XXX। ನಿತ್ಯಕರ್ತ್ರ್ತ ನಿಜವಸ್ತು ಸುಗಂಧವಾ। ಸೂಚಿತ್ತದೊಳು ಧರಿಸೈಯ್ಯ ಜಯಜಯ ॥೨॥

**ಅಂತ್ಯ :** ಲಲಿಸುಖ ಶದ್ಭಾವದ। ಸಮರಸ ಸುಮತಿಯಿಂದ। ಪಲಕಾಕ್ಷದ ಲಾಲಂದ ಕ್ರಮುಖ। ಉಲುವಡಗಿದ। ನಿಜ ಪ್ರಭಲತೆ ಪರ್ನ್ನದ। XXX। ಯಂಮ್ಮಯ್ಯ ಗುರುಪ್ರಯ್ಯ ಜೆಂನ್ನ ಸೋಮೇಶ್ವರ ಲಿಂಗವೆ ಅವಧರಿಸೈಯ್ಯ ಜಯಜಯಾ ॥೮॥ ಶ್ರೀ ಶ್ರೀ॥ ಅಷ್ಟವಿದಾರ್ಚನೆಯ ಅಷ್ಟಕ ಸಮಸ್ತ ಮಂಗಳ ಮಹಾ ಶ್ರೀ ಶ್ರೀ॥ ಯಿಂತ್ತು ವಚನತ್ತ್ರಉ॥ X॥ ಯಿವಸಮ ಸಂಉತ್ಸರದ। ಮಾಘ, ಸುದ್ದ ದಿನ ದಶಮಿಾ। ಗುರುವಾರದಲ್ಲೂ ಮುಗಿಯಿತ್ತು॥ ಶ್ರೀ ಶ್ರೀ॥ ಶ್ರೀ ಗುರು ಮುರಿಗಾ ಶಂತವೀರೇಶ್ವರಾಯ ನಮಃ॥ XX॥ ಶ್ರೀ ಗುರು ಸಂಗಮೇಶ್ವರಾಯ ನಮಃ॥

**ವಿಷಯ :** ಲಿಂಗಪೂಜಾ ವಿಧಾನದ ವಿವರಣೆ.

**ವಿಶೇಷ :** ಕೃತಿ ಸಮಗ್ರವಾಗಿದೆ. ಪ್ರತಿ ಚೆನ್ನಾಗಿದೆ. ಬರೆವಣಿಗೆ ಚೆನ್ನಾಗಿದೆ. ಇದರೊಂದಿಗೆ ಲಿಂಗಸ್ತೋತ್ರ ಮುಂತಾದ ಕೃತಿಗಳಿವೆ.

—ಎಂಪಿಎ

## 143

ಕೆ. ೧೭೫೩/೩ | **ಅಷ್ಟವಿಧಾರ್ಚನೆಯ ಪದ** | ಷಟ್ಪದಿ
೪" × ೨.೪" | ? | ?
೪-೫ ಪತ್ರ | ೧೩ ಪಂಕ್ತಿ | ೪೬ ಅಕ್ಷರ

**ಆದಿ :** ಜಯ ಜಯ ನಿತ್ಯ ನಿರಂಜನ ನಿರ್ಗುಣ
ಜಯ ಜಯ ನಿರ್ಮಳ ನಿರುಪಮ ನಿರವಯ
ಜಯ ಜಯ ಗುರುಪ್ರಿಯಚೆಂನಸೋಮೇಶ್ವರಲಿಂಗವಯ್ಯ ಧರಿಸಿಯಯ್ಯಾ ||೧||

**ಅಂತ್ಯ :** ಸಮಗ್ನಾನದ ಸಹಜ ಸಮಾಧಿಯ
ನಿರ್ಮಳಯೋಗದ ನಿರುಪಮ ಚರಿತೆಯ
ಹಂಮನಳದು ಮಹ ಘನಲಿಂಗದ ಬೆಳಗಿನ ಪೂಜೆಯ ನೋಡುತಲಿ||
ಮರ್ಮವನಱಿದನುಭಾವದ ಕರದೊಳು
ಗಂಮ್ಯದಷ್ಟಪದಾರ್ಚನೆಯವಸರಗಳ
ಯಂಮಯ ಗುರು ಪ್ರಿಯ ಚೆಂನ ಸೋಮೇಶ್ವರ ಲಿಂಗಪಿಯಮಧರಿಸಿಯಯ್ಯ ||೯||

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಗುರುರಗಳೆ ಮೊದಲಾದ ೪೭ ಕೃತಿಗಳಿವೆ.

—ಜಿಜಿಎಂ

## 144

ಕೆ.ಎ. ೪೯೨/೧ | **ಅಷ್ಟ ಶ್ಲೋಕೀ** | ಶ್ಲೋಕ, ಟೀಕು
೧೨" × ೯.೬" | ? | ?
೧-೮ ಪುಟ | ೨೪ ಪಂಕ್ತಿ | ೨೪ ಅಕ್ಷರ

**ಆದಿ :** ಅಷ್ಟಶ್ಲೋಕೀ ಶ್ರೀ ಪರಾಶರಭಟ್ಟಾರ್ಯಃ ಶ್ರೀ ರಂಗೇಶ ಪುರೋಹಿತಃ।
ಶ್ರೀ ವತ್ಸಾಂಗ ಸುತಃ ಶ್ರೀಮಾನ್ ಶ್ರೇಯಸೇ ಮೇಸ್ತು ಭೂಯಸೇ।
(ಟೀಕು) ಸಕಲ ವೇದಾಂತ ಸಾರಾರ್ಥಂಗಳಂ ತಿಳಿದವರಾಗಿ ಪರಮ

ಕಾರುಣಿಕರಾಗಿರ್ಪ ಶ್ರೀ ಪರಾಶರಭಟ್ಟಾರ್ಯರು ಸರ್ವಲೋಕಾನುಗ್ರಹಾರ್ಥಮಾಗಿ ಸರ್ವೋಪನಿಷತ್ಸಾರಭೂತಮಾದ ರಹಸ್ಯತ್ರಯಾರ್ಥಂಗಳಂ ಅಷ್ಟಶ್ಲೋಕಿಯೆಂಬ ಪ್ರಬಂಧದಿಂದಂ ಸಂಗ್ರಹಿಸಿ ಪ್ರಕಾಶನಮಂ ಮಾಳ್ಪರು

**ಅಂತ್ಯ :** ರಹಸ್ಯತ್ರಯ ವ್ಯಾಖ್ಯಾನಮಾದ ಅಷ್ಟಶ್ಲೋಕ್ಯರ್ಥಂ ಕುಶಲಬುದ್ಧಿಗಳಿಂ ಮಂತ್ರಂ ಯತ್ನೇನ ಗೋಪಯತು ಎಂಬ ಮರಿಯಾದೆಯುಂ ಶ್ರೀ ರಹಸ್ಯತ್ರಯಮೆಂಬ ಸಮಾಖ್ಯೆಯಿಂದೆಯುಂ ಅತಿಗುಪ್ತಮಾಗಿ ನಿಯಮದಿಂ ತಿಳಿದು ಪ್ರಪನ್ನರಿಂದ ಗೋಪ್ಯನಮಂ ಮಾಡಲ್ತಕ್ಕುದೆಂಬುದು ಸಿದ್ಧಂ ಅಷ್ಟಶ್ಲೋಕೀ ವಿವರಣಂ ಕೃತಂ ಕರ್ನಾಟಕ ಭಾಷಯಾ ಶ್ರೀ.

**ವಿಷಯ :** ವೇದಾಂತ

**ವಿಶೇಷ :** ಎಂಟು ಶ್ಲೋಕಗಳನ್ನೂ ಅವುಗಳ ತಾತ್ಪರ್ಯಾರ್ಥಗಳನ್ನೂ ಕೊಡಲಾಗಿದೆ. ಬರಹ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಚತುಶ್ಲೋಕೀ, ಮುಕುಂದ ಮಾಲಾ ಎಂಬೆರಡು ಇತರ ಗ್ರಂಥಗಳಿವೆ.

—ಕೆಆರ್ಎಸ್

## 145

ಕೆ. ೧೦೭೪/೬ | **ಅಷ್ಟಾಂಗಯೋಗದ ವಚನ** | ವಚನ

೪″ × ೧.೯″ | ? | ?

೨೭-೩೪ ಪತ್ರ | ೧೦ ಪಂಕ್ತಿ | ೧೭ ಅಕ್ಷರ

**ಆದಿ:** ಶ್ರೀ ಗುರು ಬಸವಲಿಂಗಾಯ ನಮಃ||
ಯಮ ನಿಯಮ ಆಸನ ಪ್ರಾಣಯಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಯೆಂದು ಯಿಾಯೆಂಟೂ ಅಷ್ಟಾಂಗ ಯೋಗಂಗಳು| ಯಿಾ ಯೋಗಂಗಳೊಳಗೆ ಉತ್ತರಭಾಗೆ ಪೂರ್ವ ಭಾಗೆಯೆಂದು ಯರಡು ಪ್ರಕಾರವಾಗಿಹವು| ಯಾಮಾದಿ ಪಂಚಕವೈದು ಪೂರ್ವಯೋಗ ಧ್ಯಾನಧಾರಣ ಸಮಾಧಿಯೆಂದು

**ಅಂತ್ಯ :** ಪ್ರಾಣಲಿಂಗವ ಮನಜ್ಞಾನವದಿಂದ ನಿಗ್ರಹಿಸಿ
ತೃಪ್ತಿಲಿಂಗವ ಭಾವ ಜ್ಞಾನದಿಂದ ಗ್ರಹಿಸಿ
ಯಿಾ ಲಿಂಗತ್ರಯವಿಡಿದ ಆಚರಿಸಿ
ಲಿಂಗದೊಡನೆ ಕೂಡಿ
ಲಿಂಗವೆ ತಾನು ತಾನಾಗಿ ವಿರಾಜಿಸುತ್ತಿಪ್ಪುದೀಗ
ಶಿವಯೋಗ ನೋಡಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||೧||

**ವಿಷಯ :** ಯೋಗಸಿದ್ಧಾಂತ.

**ವಿಶೇಷ :** ಇದರ ಜೊತೆಯಲ್ಲಿ ಕೊಟ್ಟೂರಯ್ಯನ ಕಂದ, ವಚನಗಳು, ಪ್ರಣವ ಸಂಬಂಧದ ವಚನಗಳು ಇತ್ಯಾದಿ ಕೃತಿಗಳಿವೆ.

—ಜಿಜಿಎಂ

## 146

ಕೆ. ೯೯೪/೨೫ **ಅಷ್ಟಾವಧಾನ** ವಾರ್ಧಕ ಷಟ್ಪದಿ

೮" × ೨.೨" ? ?

೧೩೨-೧೩೩ ಪತ್ರ ೧೪ ಪಂಕ್ತಿ ೪೪ ಅಕ್ಷರ

**ಆದಿ :** ಶ್ರೀರಾಗ ಧನ್ಯಾಸಿ|| ಪಲ್ಲ
ಅಷ್ಟಾವಧಾನ ತಾನೆಂತೆನಲು ಪೇಳೆನವ
ಅಷ್ಟತನ ವಿನ ಹಂಗನಳಿದು ಹೇವೊಳ ಹೊರಗೆ
ಅಷ್ಟವರಣದ ಭಕ್ತಿ ಪೂರ್ಣಮಾಗಳವಡಲು ಅಷ್ಟಾವಧಾನಿ ಶರಣಾ||

**ಅಂತ್ಯ :** ಅಷ್ಟಾವಧಾನ ತನಗುಳ್ಳ ರಾಜನ ತೆರದಿ
ಯಿಷ್ಟಲಿಂಗದ ಪೂಜೆ ಗುರು ಭಕ್ತಿ ಜಂಗಮಕೆ
ಕೊಟ್ಟ ದ್ರವ್ಯಾದಿಗಳ ವಿಭೂತಿ ರುದ್ರಾಕ್ಷೆ ತೀರ್ಥಪ್ರಸಾದಂಗಳ
ನಿಷ್ಠೆಯಿಂದಂ ಧರಿಸಿ ಮಂತ್ರಮಂ ಜಪಿಸುತ್ತ
ಅಷ್ಟತನುವರ್ತನೆಯನಳಿದುಳಿವ ಶರಣಂಗೆ
ಅಷ್ಟಾಂಗ ಪೂರ್ವಕದಿ ನಮಿಸುತಿಹ ಭಕ್ತಿಯನೆ ಕೊಡುಯುಮಗೆ ಬಸವ ಲಿಂಗಾ ||೯||

**ವಿಷಯ :** ಇಷ್ಟಲಿಂಗ, ಗುರುಭಕ್ತಿ, ಜಂಗಮ ಸೇವೆ, ವಿಭೂತಿ, ರುದ್ರಾಕ್ಷಿ, ತೀರ್ಥ, ಪ್ರಸಾದ, ಪಂಚಾಕ್ಷರಿ ಮಂತ್ರಗಳ ವರ್ಣನೆ.

**ವಿಶೇಷ :** ಇದೇ ಕಟ್ಟನಲ್ಲಿ ಬಸವ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ.

—ಜಿಜಿಎಂ

## 147

ಕೆ.ಬಿ. ೬೬೭ **ಅಷ್ಟಾವರಣ ತಿಲಕ** ವಾರ್ಧಕ ಷಟ್ಪದಿ

೭.೯" × ೬.೪" ಮಹಾಮೂರ್ತಿ ೧೭೭೨

೧-೨೪೭ ಪುಟ ೧೯ ಪಂಕ್ತಿ ೪೦ ಅಕ್ಷರ

**ಆದಿ :** ಅಷ್ಟಾವರಣ ತಿಲಕ ಬರೆಯುವುದಕ್ಕೆ ಶುಭಮಸ್ತು. ಶೋಭನಮಸ್ತು
ವಾರ್ಧಿಕ ಷಟ್ಪದಿ||
ಶ್ರೀ ಗುರುವಿನೊರ ಕರುಣದಿಂ ಮಹಲಿಂಗ ದೊರ
ವಾಗಿ ಪ್ರತಿಬಿಂಬಮಂ ಪಡದು ಮಧು ಮಾನು
ನೀಗಿ ಕ್ಷತ್ರಿಯ ಧರ್ಮ ಹರಿಮಥವ ಕೆಡೆಮೆಟ್ಟ ಅಷ್ಟವರ್ನವ ಜೋಧಿಸೆ

ಪದನೂ|| ಶ್ರೀ ಗುರು ಪರಬ್ರಹ್ಮ ಪಂಚಾಸ್ಯ ಪರಶಿವನೆ
ಯೋಗಿ ಹೃದ್ಬಿಸಜಭಾನುವೆ ಚಂದ್ರಶೇಖರ
ನಾಗರಿಪುರಗಮನಮಸಂ ಮರಾಳ ವಾಹನವಶಿತನಾಗಶರೆಯು ಸುರ
ವಂದ್ಯನೇ||

ಆಗಮ ಸ್ಮೃತಿಗಗಣಿತನೆ ಅಪ್ರಮಾಣಮಹಿ
ಮಾಗರಿಮ ವಾಂಘ್ರಿವಾದ್ರಿಜ ವರದ ಶಿತಕಂಠ
ಭೋಗಿಭೂಷಣ ಭೂತನಾಥ ಭುವನಾಧಾರ ಗುರುವೆ ದಯ ಕಲ್ಪ
ತರುವೇ ||೧||

X X X

ವಪ್ಪಡು ವಿಡಿಯ ಹುಚ್ಚಯಸಣ್ಣಗ ಗುರುಸಿದ್ಧ
ನೊಪ್ಪಿದಾತ್ಮಜನು ಕರಿವೀರಯ್ಯನಣ್ಣಗನ್ನೆ
ಯ್ಯಪ್ಪನುದರಾಬ್ಧಿ ನಿಶಿಪರದ ಮಹಮೂರ್ತಿ ವಿರಚಿಸಿದ ಕಾವ್ಯ ಗುರು
ಬಲದಲೀ ||೦||

ತಪ್ಪದಿಳೆಯೊಳು ಶರಣ ಜನರು ಶಿವಕವಿಗಳಿಗೆ
ವಪ್ಪದಿಂದೆರಗುವೆನು ತಪ್ಪು ತಿದ್ದಿದವರಿಗೆ
ಅಪ್ಪುವೆನು ಚರಣಕಿಂಕರರ ಕಿಂಕರ ಲೆಂಕನಪ್ಪೆ ನಾನು ||೩೮||

ದೇವರಾಜನ ಕಾವ್ಯಕೆ ಮೊದಲು ಪೇಳ್ವೆ ಪಾ
ರಾವಾರ ತನಗೆ ಸರಿಯಿಲ್ಲೆಂಬುದೆಂತೆನೆ
ಸಾವಿಲ್ಲದಂತೆ ತ್ರಿದಶ ತ್ರಿತಯ ಕೋಟಿದೇವತೆಗಳಿಗೆ ಸುಧೆಯನಿತ್ತೆ ||೦||

ಅಂತ್ಯ : ಜಯ ಶಂಭು ಜಯ ಶಿವನೆ ಜಯದೀಶ ಗೌರೀಶ
ಜಯದೇವ ಮಹದೇವ ಜಯಪರನೆ ಜಯಹರನೆ
ಜಯಕರುಣ ನಿರವರಣ ಜಯ ಭೀಮಮಭಿರಾಮ ಜಯ ಪರಾತ್ಪರ
ಪಾವನಾ ||೦||

ಜಯನಿತ್ಯ ಜಯಸತ್ಯ ಜಯ ಅಪಣಾರ್ಯ್ಯ ಜಯ
ಜಯ ವಾಮದೇವ ಮೃಡ ಜಯ ಸದಾಶಿವ ಮೃತ್ಯು
ಜಯ ಅಭವ ಜಯ ವಿಭವ ಜಯ ಮಹೇಶ್ವರ ಪರಮ ಗುರುವೆ ಮಂಗಳ
ಜಯ ಜಯಾ ||೨೩||

ಅಂತು ೧೩ ಕ್ಕಂ ಪದನೂ ೧೮೫೧ ಕ್ಕಂ ಮಂಗಳ ಮಹಾ ಶ್ರೀ
ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ಶ್ರೀ ೧೮೫೬ ನೇ ಭಾವ
ಸಂವತ್ಸರ ನಿಜ ವೈಶಾಖ ಶು ೧೨ ಯೆಲ್ಲಿ ಯಿಾ ಅಷ್ಟಾವರ್ನ ತಿಲಕದ
ಮಹತ್ವಂ ಸಂಪೂರ್ಣವಾಗಿ ಮುಗಿದುದು—ಪ್ರಾರಂಭ ಶಾಲಿವಾಹನ ಶಕ

ಶ್ರೀ ೧೮೫೬ನೇ ಭಾವನಾಂ ಸಂವತ್ಸರದ ಅಧಿಕ ವೈಶಾಖ ಶು|| ತ್ರಯೋ ದಶಿಯಲ್ಲಿ.

**ವಿಷಯ :** ನವಿಲಪುರದರಸು ದೇವರಾಜನಿಗೆ ಆತನ ಪತಿ ಮಧುಮಾನುಣಿಯು ಅಷ್ಟಾವರಣವನ್ನು ಬೋಧಿಸಿ ಲಿಂಗಧಾರಣೆ ಮಾಡಿಸಿದ ಕಥೆ.

**ವಿಶೇಷ :** ಸಮಗ್ರವಾಗಿದೆ. ಬರಹವು ಚೆನ್ನಾಗಿದೆ. ಪತ್ರದ ಎರಡು ಪಾರ್ಶ್ವಗಳಲ್ಲಿಯೂ ಬರಹವಿದೆ. ಆದರೆ ೨೪೫ ರಿಂದ ೨೪೭ ನೆಯ ಪತ್ರಗಳ ಒಂದು ಕಡೆ ಮಾತ್ರ ಬರೆಯಲ್ಪಟ್ಟಿವೆ. ಅಂತ್ಯದಲ್ಲಿ ಬರುವ ಕಾಲ ವಿಚಾರವು ಪ್ರತಿ ಮಾಡಿಕೊಂಡ ಕಾಲವಾಗಿದ್ದಿರಬೇಕು.

—ಕೆಆರ್‌ಎಸ್

## 148

ಕೆ.ಬಿ. ೬೯೮ | **ಅಷ್ಟಾವರಣ ತಿಲಕ** | ವಾರ್ಧಕ ಷಟ್ಪದಿ

೮" × ೬.೫" | ಮಹಾಮೂರ್ತಿ | ೧೭೭೨

೧-೧೬೨ ಪತ್ರ | ೧೯ ಪಂಕ್ತಿ | ೨೪ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ|| ಅಷ್ಟಾವರ್ನ ತಿಲಕ ಬರವದಕ್ಕೆ ಶುಭಮಸ್ತು| ಶೋಭನಮಸ್ತು|| ವಾರ್ಧಿಕ ಷಟ್ಪದಿ||
ಶ್ರೀ ಗುರು ವಿನೋದ ಕರುಣದಿಂದೆ ಮಹಾಲಾಲಿಂದ ದೂರ
ವಾಗಿ ಪ್ರತಿಬಿಂಬಮಂ ಪಡದು ಮಧುಮಾನುಣಿಯು
ನೀಗಿ ಕ್ಷತ್ರಿಯಧರ್ಮ ನೀಗಿಹರಿಮಥವ ಕಡೆಮೆಟ್ಟಿ ಅಷ್ಟವರ್ನವ ಭೋಧಿಸಿ||

ಪದನು|| ಶ್ರೀ ಗುರು ಪರಬ್ರಂಹ್ಮ ಪಂಚಾಸ್ಯ ಪರಶಿವನೆ
ಯೋಗಿ ಹೃದಿಸಜ ಭಾನುವೇ ಚಂದ್ರಶೇಖರ
ನಾಗಾರಿ ಗಮನಂ ಮರಾಳವಾಹನ ವ್ಯತ ನಾಗಾರ್ಯರೆ ಸುರವಂದ್ಯರೆ
ಆಗಮ ಶೃತಿಗಗಣಿತನೆ ಅಷ್ಟಮಾಣಮಹೀ
ಮಾಗರಿ ಮಾವಾಂಘ್ರಿ ವಾದ್ರಿಜಾವರದ ಶಿತಿಕಂಠ
ಭೋಗಿಭೂಷಣ ಭೂತನಾಥ ಭುವನಾಧಾರ ಗುರುವೇ ದಯಕಲ್ಪತರುವೆ ||೧||

**ಅಂತ್ಯ :** ವರನ್ರುಪತಿ ಶಚಿಯು ಪದಿನಾರ್ನು
ರುರಂದ್ರ ದಶಶತಕೋಟಿದುಕಂಪ್ರಸತ್ಮಾನಸಂದನಾಮ ಸಂವತ್ಸರ ದಕ್ಷಿಣಾಯನೆ| ಹಿಮಂತ್ರತಾ ಮಾರ್ಗಶಿರ ಆ ಸಿತ ಪಕ್ಷೇಕಾದಶಿ ಅರುಣ ದಿವಸದಿ ಸ್ವಾತಿನಕ್ಷತ್ರ ವಿರಪರಣ ಜಕರಣ ಸುಕರ್ಮನಾಮ ಯೋಗ ಧನುರ್ಲಗ್ನಾ ಗುರುವಾರ್ಯದಿಯಷ್ಟ ವರ್ನ ತಿಲಕವನು ನಿರ್ಮಿತವಾಯ್ತು ಗುರುಕರುಣದಿ|| XXX|| ಅಂತು ಸಂಧಿ ೧೩ಕ್ಕಂ ಪದನು ೧.೪೫೨ಕ್ಕಂ ಮಂಗಳಂ ಮಹಾಶ್ರೀ||

**ವಿಷಯ:** ನವಿಲಪುರದರಸು ದೇವರಾಜನನ್ನು ಆತನ ಪತ್ನಿ ಮಧುಮಾನುಣಿಯು ಅಷ್ಟಾವರಣವನ್ನು ಬೋಧಿಸಿ ಲಿಂಗಧಾರಣೆ ಮಾಡಿಸಿದ ಕಥೆ.

**ವಿಶೇಷ:** ಸಮಗ್ರ ಕೃತಿ. ಸುದೃಢ ಪ್ರತಿ. ಮೋಡಿ ಅಕ್ಷರ.

—ಎಂಪಿಎಂ

## 149

ಕೆ. ೯೯೭/೨ **ಅಷ್ಟಾವರಣದ ಕಥೆ** ಗದ್ಯ

೯-೩" × ೧.೯" ಮರಿಸಿದ್ಧಲಿಂಗ ?

೪೫ ಪತ್ರ ೧೨ ಪಂಕ್ತಿ ೪೮ ಅಕ್ಷರ

**ಆದಿ:** ಶ್ರೀ ಗುರು ಬಸವಲಿಂಗಾಯ ನಮಃ|| ಅಷ್ಟಾವರಣದ ಕಥೆ

ಕಂದ|| ಶ್ರೀಮದ್ಗುರುವೆ ನಿಮ್ಮಯ
ಪ್ರೇಮದೊಳನುಪಮ ಮಹಾಪುರಾತರ ವಚನ
ಸ್ತೋಮಾಭಿದೊಳಾದರದಿ
ಮಹಿಮಾಷ್ಟಾವರಣ ಕಥೆಯ ಸೇರಿಸಿದಂ||

ಗ್ರಂಥ|| ದೇಶಿಕಂ ಶಿವಲಿಂಗಚ ಚರಶೇಷೋದಕಸ್ತಥಾ
ಭೂತಿರುದ್ರಾಕ್ಷೆ ಮಂತ್ರಸ್ಯ ಧಾರಣಾಷ್ಟಕಂ ಭವೇತ್||

X X X

ಶಿವಶರಣರಣುಗನೆನಿಪ ಮರಿಸಿದ್ಧಲಿಂಗೇಶ್ವರಾಚಾರ್ಯರೂ ನಿರೂಪಣಂಗೆಯಿ ದರೀಯಷ್ಟಾವರಣ ಕಥಾಪ್ರಸಕ್ತಿಯಾದಿಯೊಳ್ಗುರುಸ್ಥಲ ವೆಂತೆಂದೊಡೆ

**ಅಂತ್ಯ:** ವುರಗಂ ವ್ಯೋಗ್ರಮದೇಭವೃಷ್ಚಿಕ ವಿಷಾಪ್ಮಸ್ಮಾರ ಪೈಶಾಚಿಕಾ
ಸುರ ಬೇತಾಳ ಮಹದ್ಗ್ರಹೋಗ್ರತರ ಭೂತ ಬ್ರಹ್ಮ ಬಾಲಾಗ್ರಹ
ಶರಿದಾರಿದ್ರರುಜೌಘ ದುಃಖ ದುರಿತಾಖಿಲ ಪ್ರಾಣಶಂಕರಂ
ವರಸದ್ಭಕ್ತಿ ವಿರಕ್ತಿಮುಕ್ತಿ ಪದಸುಜ್ಞಾನಪ್ರದಂ ಸಂತತಂ ||೩||
ಅಷ್ಟಾವರಣದ ಕಥೆ ಗ್ರಂಥಗಳು ಸಮಾಪ್ತ ಮಂಗಳ ಮಹಾಶ್ರೀ ಶ್ರೀ

**ವಿಷಯ:** ವೀರಶೈವ ತತ್ವದ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪ್ರಸಾದ, ಪಾದೋದಕ ಇವುಗಳ ಮಹಿಮೆ.

**ವಿಶೇಷ:** ೩೦ನೆಯ ಗರಿ ಮುರಿದಿದೆ. ಇದರ ಜೊತೆಯಲ್ಲಿ ಚತುರ್ವಿಧಪಾದ ಲಕ್ಷಣ, ಶತಕತ್ರಯದ ವ್ಯಾಖ್ಯಾನ ಇತ್ಯಾದಿ ೮ ಕೃತಿಗಳಿವೆ.

—ಜಿಜಿಎಂ

## 150

ಕೆ. ೧೪೨೦ **ಅಷ್ಟಾವರಣದ ಕಥೆ** ಪದ್ಯ, ಶ್ಲೋಕ, ಗದ್ಯ

೧೧.೪″ × ೨″ ಮರಿಸಿದ್ಧಲಿಂಗ ?

೧೨೬-೧೬೨ ಪತ್ರ ೧೧ ಪಂಕ್ತಿ ೫೪ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಅಷ್ಟಾವರಣದ ಕಥೆ॥ ಶ್ರೀಮದ್ಗು ರುವೆ ನಿಂಮುಯ ಪ್ರೇಮದೊಳನುಪಮ ಮಹಾಪುರಾತರ ವಚನ ಸ್ತ್ರೋಮಾ ಭಿಧಾನದಿಂದೆ ಮಹಿಮಾಷ್ಟಾವರಣ ಕಥೆಯ ಸೇರಿಸಿದಂ XX ಬಸ ವೇಶ್ವರ ಚೆಂನಬಸವೇಶ್ವರ ಪ್ರಭುಸ್ವಾಮಿ ಮುಂತಾದ ಸಕಲ ಪುರಾತನಂ ಚರಣೆವಿಡಿದಾಚರಿಸಿದ ಗುರುಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಪಂಚಾಕ್ಷರಿಮಂತ್ರಸ್ಥಲವೆಂಬಷ್ಟಾವರಣ ಪ್ರಸಸ್ತಿಯ ನನುಪಮ ಶ್ರೀ ಗುರುನಾಥನನುಗ್ಣೆಯಿಂದೆ ಧರಣಿಯ ನೂತನ ಪುರಾತನ ರರಿವಂತಗಣಿತ ವೇದಶಾಸ್ತ್ರಾಗಮ ಪೌರಾಣೋಕ್ತಿಯಿಂದಾದ್ಯರುಗಳ ವಚನ ಗೀತಂಗಳಿಂದಷ್ಟಾವರಣ ಪ್ರಸಸ್ತಿಯೆಂದು ಸೇರಿಸಿದರು ಶಿವಶರಣರಣುಗ ನೆನಿಪ ಮರಿಸಿದ್ಧಲಿಂಗೇಶ್ವರಾಚಾರ್ಯಗುರುನಿರೂಪಣಂಗೆಯಿದರ್ದೀಯಷ್ಟಾ ವರಣ ಕಥಾಪ್ರಸಸ್ತಿಯೊಳ್ಗುರುಸ್ಥಲವದೆಂತೆಂದೊಡೆ

**ಅಂತ್ಯ :** ಬಿಂದುಕಳ್ಳೆಕನಾದ ಗುರುನಾದಕಳಾನ್ವಿತ ಬಿಂದು ಲಿಂಗ ಸ
ದ್ಬಿಂದು ಸುನಾದ ಸಂಯುತ ಕಳಾತ್ಮಕ ಜಂಗಮ ಪ್ರೀತಿಲಿಂಗ ಸಂ
ಮಂದಿಸಿ ತೋರ್ಪ ನಿತ್ಯ ಪರಿಪೂರ್ಣವೆನಿಪ್ಪ ಪದಾಂಬುಶೇಷದಿಂ
ಮುಂದೆ ನಮಃಶಿವಾಯ ಭಸಿತಾಕ್ಷವಿ ವೆಂಟಲಂಕೃತೋನ್ನತಾ
ನಂದ ಕಥಾಪ್ರಸಸ್ತಿಯನು ಕೇಳ್ದರಿಗಪ್ಪುದು ಮುಕ್ತಿ ನಿಶ್ಚಯಂ ॥೧॥

ವರದೇಶಿಕ ವರೇಣಾಚಾರ್ಯ ಸಿದ್ದೇಶನೊ
ಲ್ದೊರೆದಷ್ಟಾವರಣ ಪ್ರಸಸ್ತಿಯನು ಕೇಳ್ದೋದುತ್ತಮಾನಂದದೊಳ್
ಬರೆದುಂ ಪಾಡವ ಮಾಳ್ಪವರ್ಗೆ ಸಕಲೈಶ್ವರ್ಯಾಯುರಾರೋಗ್ಯಮುಂ
ದೊರಕೊಳ್ಗಂತುಮದಲ್ಲದೇಪ್ಸಿತ ಲಸನ್ಮೋಕ್ಷಾರ್ಥಮುಂ ಸಾರುಗುಂ ॥೨॥

ಅಷ್ಟಾವರಣದ ಕಥೆ॥ ಗ್ರಂಥಂಗಳು ಸಮಾಪ್ತ ಮಂಗಳ

**ವಿಷಯ :** ವೀರಶೈವತತ್ವದ ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಮಂತ್ರ ಪ್ರಸಾದ ಪಾದೋದಕ ಇವುಗಳ ಮಹಿಮೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

— ಜಜಿಎಂ

ತ್ಪರ್ಯದಿನರ್ಹತ್ಸಿದ್ಧಾ
ಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ ||೬||

**ಅಂತ್ಯ :** ........ಕೋಟಿವಿಭುವಪ್ಪ ಮಹರ್ದ್ಧಿಕನಪ್ರವಾಸವಂ
ಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತು ನಪ್ಪರಾ
ವಾಸಮನೆಯ್ದಿ ಸಲ್ಕಿದುವೆ ಷೋಡಶ ಭಾ..............
........................... ......................

**ವಿಷಯ :** ಆದಿತೀರ್ಥಂಕರನಾದ ವೃಷಭನಾಥನ ಚರಿತ್ರೆ.

**ವಿಶೇಷ :** ಪತ್ರಗಳು ತ್ರುಟಿತ. ಸಮಗ್ರವಾಗಿದ್ದರೂ ಆದಿ ಅಂತ್ಯಗಳು ದೊರೆಯುವುದಿಲ್ಲ.

—ಎಂಸಿಪಿ

## 206

ಕೆ.ಎ. ೪೬೯ — **ಆನಂದಕಲ್ಲೋಲ** — ಶ್ಲೋಕ, ಗದ್ಯ
೧೦″ × ೪.೨″ — ಶಿವಯೋಗೀಂದ್ರ — ?
೨-೧೨೨ ಪತ್ರ — ೯ ಪಂಕ್ತಿ — ೨೫ ಅಕ್ಷರ

**ಆದಿ :** ಶ್ರೀ ಗುರು ನಿರಂಜನ ಕಲ್ಲೇಶ ಕಾಸಿಪತಿ ಪ್ರಸಂನ ಪಾಹಿಮಾ|| ಶುಭ ಮಸ್ತು| ವೇದಾಂತ ನಿರ್ಣಯ|| ಆನಂದ ಕಲ್ಲೋಲ| ಓಂ| ವಚಃ| ಪಾರಾ ವಾರಃ| ಪ್ರಪಂಧನಮುಥ್ಯಂಮತಿಶೃತಿತತೆಃ ಪ್ರಶಿದ್ಧಂ ಯದ್ವಸ್ತು ಪ್ರಥಿತ ನವನಿತೊಪಮಮುಭೂತ್| ತದಾಡ್ವ್ಯತಾಶ್ರಾಂತಪ್ರತಿಪದವಧೂತಾಪ ಪ್ರಭೂ ಶಿವಸ್ವ ಚಿನ್ಮಯಾ| ಶಕ್ತ್ಯಾಜನ ಯತಿಜಗಂ ನಿಸ್ಕೃತಿಕರಂ ||೧|| XXX ಯಂಬ ಸಾಸ್ತ್ರಸಮಯ ಉಂಟಾಗಿ| ಯಿ ಮಹಾಗ್ರಂಥಾರಂಬ ದಲ್ಲಿ ವಸ್ತು ನಿರ್ದೇಶ ಹೇಳಲ್ಪಟ್ಟಿತು| ಯಾವದಾಯುಶ್ಯಾಯೊ ವಂದ್ಯಾ ವೇದಾಂತೊ ಗುರುರೀಶ್ವರಃ| ಆದೌ ಬೋಧಾ ಪ್ರಸ್ಸಿದ್ಯಾ ತಂನ ಕೃತ ಯದ್ಯಖ ನಿಶ್ಚಯಂ ಸಮಯ ಉಂಟಾಗಿ| ಗುರುದೇವತಾ ನಮಸ್ಕಾರ ಪೂರ್ವಕದಿಂ

**ಅಂತ್ಯ :** ಯಿಾ ವೇದಾಂತ ಪ್ರಕರಣ ನಿಕ್ಶಿಕೆ ಯಂಬ ಮಹಾಗ್ರಂಥದಲ್ಲಿ ಪೂರ್ವದ ಶಕ ಉತ್ತರದ ಶಕವೆಂದು ಅಧಿಕಾರ ಭೇದದಿಂ ದ್ವಿವಿಧವಾಗಿ ಇಹುದು| ಅಲ್ಲಿ ಪ್ರಥಮಾ ಪ್ರಕರಣದಲ್ಲಿ ಉದ್ದೇಶಕ್ರಮ| ಯೆರಡನೆಯಲ್ಲಿ ಕಲ್ಪಿತ ಪುರುಷನ ಉತ್ಪತ್ತಿ| XXX ಕೈವಲ್ಯಾಸ್ವಮು ಪ್ರವರ್ತಕ ಶ್ರೀಸುತ್ಪರಮಹಂಪ ಪಂಚಕಾಚಾಯವಾರ್ಯ ಪರಶಿವ ಪಾದಯುಗಳೆ ಕಮಲ ಸಿರಾಜ ಹಸಾವ ಥೂತ ಶಿವಯೋಗೀಂದ್ರ ವಿರಚಿತವಾಕ್ಯ ಪ್ರಕರಣ ವಿಂಶಿಕಾ ಸಂಪೂರ್ನಂ| ಮಸ್ತು ಮಹಾ ಶ್ರೀ

ಶೆಕ್ಯ ಸೊ ಶಕ್ಯ ಹೆ ೧೬॥ ೧೩ ವರುಶ್। ಪ್ರವರ್ತ-ಮಾಸೆ। ಪ್ರಜಾಪತಿ ನಾಮ ಸಂವಸರೆ ವೈಶಾಖವದಿ। ಶ್ರಷ್ಟಿ ಶುಕ್ರವಾರ ಘಟಿಕಾ ೧೩। ಪಳಿ ೩೦। ಶ್ರವಣ ನಕ್ಷತ್ರ। ಘಟಿಕಾ ೯೬। ಪಳಿ ೫೫। ಬ್ರಂಹ್ಮನಾವ:ಯ್ಯಗೆ ಘಟಿಕಾ ೯೭। ಪಳಿ ೫೬। ಗರಜಾಕರಣೆ ಘಟಿಕಾ ೬॥ ಲಿಖಿತ ಆನಂದ ಕಲ್ಲೋಲಗ್ರಂಥ ಸಮಾಪ್ತ ಮಂಗಳಮಸ್ತು॥ ಶ್ರೀ॥

**ವಿಷಯ :** ವೇದಾಂತ ವಿಚಾರ.

**ವಿಶೇಷ :** ಮೋಡಿ ಅಕ್ಷರ. ಗ್ರಂಥ ಸ್ವಲ್ಪಮಟ್ಟಿಗೆ ಶಿಥಿಲ.

—ವೈಸಿಬಿ

## 207

| ಕೆ. ೭೧೨ | **ಆನಂದರಾಮಾಯಣ** | ಭಾಮಿನೀಷಟ್ಪದಿ |
|---|---|---|
| ೧೮.೨" × ೧.೬" | ತಿಮ್ಮಾಮಾತ್ಯ | ಸು. ೧೭೫೦ |
| ೧-೨೮೭ ಪತ್ರ | ೬ ಪಂಕ್ತಿ | ೬೦ ಅಕ್ಷರ |

**ಆದಿ :** ..............................

ತಿಮ್ಮರಾಯಸ್ವಾಮಿ ಪಾದಾರವಿಂದವೆ ಗತಿ
ಶ್ರೀಕಲಶ ವಾರಾಶಿ ಕನ್ಯಾ
ಸ್ತೋಕ ನಯನಾಂಭೋಜ ಭಾಸ್ಕರ
ಪಾಕಶಾಸನ ಮುಖ್ಯ ಸುರಗಣ ಪೂಜಿತಾಂಘ್ರಿಯುಗ
ಲೋಕ ರಕ್ಷಾನಿಪುಣ ಕರುಣಾ
ಲೋಕನೈಕದುರೀಣ ಸಿತನಾ
ಳೀಕ ಲೋಚನ ರಕ್ಷಿಪುದು ಸಹದೇವಪುರಿರಮಣಾ ॥೧॥

**ಅಂತ್ಯ :** ಚಿತ್ತಜನಪಿತನಡಿಗೆ ಮನವನು
ತೆತ್ತು ಸಾರೋಪ್ಯದಲಿ ಜಾಗ್ರತೆ
ಪೆತ್ತು ಮಿಗೆ ಶಂಖನಿಧಿ ಪದ್ಮನಿಧಿ ಪ್ರಸಿದ್ಧಕರೂ
ಅತ್ತ ಮಣಿಗಣ ಖಚಿತ ಚಿತ್ರದೊ
ಳುತ್ತಮೋತ್ತಮಮಾಗಿ ರಾಜಿಪ
ಉತ್ತರದ್ವಾರಾಭಿರಕ್ಷಕರೆನಿಸಿ ಕಾದಿಹರೂ

**ವಿಷಯ :** ರಾಮಾಯಣದ ಕಥೆ.

**ವಿಶೇಷ :** ಅಸಮಗ್ರ. ಶಿಥಿಲ.

—ಎಂಎಸ್ಎಲ್

## 208

ಕೆ. ೧೨೫೯/೨ **ಆಯುರ್ವೇದ ಚಿಕಿತ್ಸೆ (ವೈದ್ಯ)** ಗದ್ಯ

೬.೩" × ೧.೩" ? ?

೩೦-೭೩ ಪತ್ರ ೭ ಪಂಕ್ತಿ ೩೮ ಅಕ್ಷರ

**ಆದಿ :** ....ದ್ಧನದೇವೇ ಮೂರುಜಾವಟವಟ ಭಯಕ್ಕಾರಿವು ಟೋವು ಟೋಜಾ॥ ದ್ರಾಕ್ಷಾದಿ ಚೂರ್ನ॥ ದ್ರಾಕ್ಷೆ। ರಾಜನದ ಆರಳು। ಬಿಳೆ ಸೈದಲೆಗೆಡ್ಡೆ। ಕರ್ಜುರಾ। ತನಕ್ಷೀರಾ। ನಪ್ಪಮದುಕ। ನಾಮಂಚ್ಯ ಸೆಲ್ಲಿ ಚೆಟ್ಟು। ಭದ್ರ ಮುಸ್ತೆ। ಶ್ರೀಗಂಧXX ಯಿವ ಸಮಾನಂಗ್ಗೊಂಡ್ಡು। ಚೂರ್ನಮಂ ಮಾಡಿ। ವಸ್ತ್ರಗಾಟಕನಂ ಮಾಡಿ। ಸಮಸಕ್ಕರೆಯ್ಯರಸಿ। ಆಕಳ ತುಪ್ಪ ಹಾಲಲ್ಲಾದರು।

**ಅಂತ್ಯ :** ಪಿಪ್ಪಲಿಮದುಮಿಶ್ರಿತ ಡಿಕು। ಪ್ರಾಂಕಲಂಡು॥ ಹಿಪ್ಪಲಿ ಆಟ್ಟಸರ ಮಯಿನೆಮ। ಮುಲ್ಲು

**ವಿಷಯ :** ವೈದ್ಯ.

**ವಿಶೇಷ :** ಅಸಮಗ್ರ. ಇದೇ ಕಟ್ಟಿನಲ್ಲಿ ಯಂತ್ರಮಂತ್ರಗಳಿಗೆ ಸಂಬಂಧಿಸಿದ ತೆಲುಗು ಗ್ರಂಥವಿದೆ.

—ಕೆಆರ್‌ಎಸ್

## 209

ಕೆ. ೧೭೮೨ **ಆರತಿ ಪದಗಳು** ತ್ರಿವಿಧಿ

೬.೩" × ೧.೩" ? ?

೩೦ ಪತ್ರ ೫ ಪಂಕ್ತಿ ೨೬ ಅಕ್ಷರ

**ಆದಿ :** ಶ್ರೀಗುರುವೆ ನಮಃ।
ಆರತಿ ಬೆಳಗುವೆ ಅಖಂಡ ಗುರುವಿಗೆ
ಪಾರ್ವತದೇವಿಯ ರಮಣನಿಗೆ॥ ಪಲ್ಲ।
ಪಂಚೇಂದ್ರಿಯ ಪಂಚಾರತಿ ಮಾಡಿ।
ಸಂಚರಿಸುವ ಮನಗಿಮಣ ಮಾಡಿ।
ಪಂಚಾಕ್ಷರಿಯು ಸ್ಮರಣೆಯು ಮಾಡಿ
ಪಂಚವರ್ನದ ದೇವನಿಗೇ ॥-॥

**ಅಂತ್ಯ :** ಕುಂಬುಕೋಣಯ್ಯ ಲಿಂಗ ಚೀ
ಲಾಂಬರೇಶ್ವರಗೆ। ಜಾಂಬಾರಿ ವಂದಿತ
ಜಂಬುಗಿಂಗ್ಯೆಯ್ಯಗೆ। ತುಂಬೂರ
....................................

**ವಿಷಯ :** ಶಿವ, ಪಾರ್ವತಿಯರ ಸ್ತುತಿ.

**ವಿಶೇಷ :** ಕೃತಿ ಅಸಮಗ್ರ. ಪತ್ರಗಳು ಅಸ್ತವ್ಯಸ್ತವಾಗಿವೆ.

—ಎಂಪಿಎಂ

## 210

ಕೆ.ಬಿ. ೭೪೬ | **ಆರಾಧ್ಯರ ಕೈಪಿಡಿ** | ಗದ್ಯ, ಪದ್ಯ

೮ ೫″ × ೬.೮″ | ಕೆ. ಸಿ. ನಂಜುಂಡಾರಾಧ್ಯ | ೧೯೪೦

೧-೧೬೦ ಪತ್ರ | ೨೬ ಪಂಕ್ತಿ | ೨೮ ಅಕ್ಷರ

**ಆದಿ :** ಶ್ರೀಮದಾರಾಧ್ಯ ಬ್ರಾಹ್ಮಣ ಮತಾದರ್ಶವೆಂಬ ಆರಾಧ್ಯರ ಕೈಪಿಡಿ.
ನಿರಾಕಾರಂ ನಿರಾಧಾರಂ ನಿರಂಜನಂ ನಿರ್ಗುಣಂ।
ಸಚ್ಚಿತಾನಂದಂ ಚೈತನ್ಯಂ ಸದ್ಗುರುಂ ಭಜೇ॥
ಅನಾಚಾತ್ಮಶ್ಚ ರೂಪಾಯ ಶಿವ ಭಾವ ಪ್ರದಾಯಿನೆ
ನಮಃ ಸದ್ಗುರುನಾಥಾಯ ಚೈತನ್ಯಾಯ ನಮೋ ನಮಃ॥
ಚೈತನ್ಯಂ ಶಾಶ್ವಿತಂ ಶಾಂತವ್ಯೋಮಾತೀತ ನಿರಂಜನಂ
ನಾದಬಿಂದುಕಳಾತೀತಂ ತಸ್ಮೈ ಶ್ರೀ ಗುರುವೇ ನಮಃ॥
ಗುರುಬ್ರಹ್ಮ ಗುರುವಿಷ್ಣು ಗುರುದೇವ ಮಹೇಶ್ವರಃ
ಗುರುಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ॥

**ಅಂತ್ಯ :** 15ನೇ ಶತಮಾನದ ಗುರುರಾಜ ನೀಲಕಂಠರು 16ನೇ ಶತಮಾನದ ಸಿದ್ಧ ನಂಜೇಶನು ಈತನ ಚರಿತ್ರೆಯನ್ನು ಕಾವ್ಯರೂಪವಾಗಿ ಬರೆದಿದ್ದಾನೆ. ಈತನು ಶಿವತತ್ವಸಾರ. ಸಹಸ್ರನಾಮ, ಇಷ್ಟಲಿಂಗ ಸ್ತೋತ್ರ, ಬಸವ ನೀತಿಗಳನ್ನೂ ಬರೆದಿದ್ದಾನೆ. ಇವನು (ಶ್ರೀಶೈಲ ಸಿಂಹಾಸನ)ದ ಮಠಕ್ಕೆ ಮೂಲಪುರುಷ ನೆಂಬುದಕ್ಕೆ ಸೋಮನಾಥ ಕೃತ ದ್ವಿಪದಿ ಕಾವ್ಯದಿಂದ ತಿಳಿದು ಬರುತ್ತೆ.

**ವಿಷಯ :** ವೀರಶೈವ ಹಾಗೂ ಸಂಕೀರ್ಣ ವಿಚಾರಗಳ ಸಂಗ್ರಹ.

**ವಿಶೇಷ :** ಅಲ್ಲಲ್ಲಿ ಖಾಲಿ ಪುಟಗಳಿವೆ. ಬರಹ ಚೆನ್ನಾಗಿದೆ; ಅಕ್ಷರಗಳು ಸಣ್ಣಗಿವೆ.

—ಕೆಆರ್‌ಎಸ್

## 211

ಕೆ. ೯೮೫ | **ಆರೋಗ್ಯಾಮೃತ** | ಗದ್ಯ

೨೦.೫″ × ೨″ | ಚಿಕ್ಕುಪಾಧ್ಯಾಯ | ೧೬೭೨

೧-೧೨೭ ಪತ್ರ | ೧೫ ಪಂಕ್ತಿ | ೧೧೫ ಅಕ್ಷರ

**ಆದಿ :** ಶ್ರೀ ಶ್ರೀ ಸದಾಶಿವಾಯ ನಮಃ ಶುಭಮಸ್ತು ನಿರ್ವಿಘ್ನಮಸ್ತು ಶ್ರೀ ಸಾಸಲ ಸೋಮೇಶ್ವರ ಸ್ವಾಮಿಯ ಪಾದವೆ ಗತಿ ಆರೋಗ್ಯಮಸ್ತು ಆರೋಗ್ಯಾ

ವೃತವೆಂಬ ಕರ್ನಾಟ ವೈದ್ಯಸಾರ ಸಂಗ್ರಹ ಬರೆಯುದಕ್ಕೆ ನಿರ್ವಿಘ್ನಮಸ್ತು ಶುಭಮಸ್ತು ಆಯುರಾರೋಗ್ಯಮಸ್ತು ಜ್ವರೋತ್ಪತ್ತಿ. ಜ್ವರವು ಸಕಲ ರೋಗಂಗಳಿಗು ಅರಸು, ಪಾಪಸ್ವರೂಪವಾಗಿಹುದು. ಮೃತ್ಯುಸ್ವರೂಪ ಶರೀರದ ಬಲವೆ ಆಹಾರವಾಗಿ ಉಳ್ಳದು, ನಾಶನವ ಮಾಡುವುದು ದಕ್ಷಾಧ್ವರ ಧ್ವಂಸಿಯಾದ ರುದ್ರನ ಫಣೆಗಂಣಿನಲ್ಲಿ ಹುಟ್ಟಿ ಕೋಪ ಜ್ವರವೆನಿಸಿ ಕೊಂಬುದು. ಮತಾಂತರದಲ್ಲಿ ಆ ರುದ್ರನ ನಿಸ್ವಾಸದಲ್ಲಿ ಹುಟ್ಟಿತು ಯಂದು ಹೇಳುವರು.

**ಅಂತ್ಯ:** ಬೈರಿಗೆಯ ಕಿರಿದಾಗಿ ಉಳಿಯ ಬಾಇನಹಾಗೆ ಬಾಯಮಾಡಿ ಆ ಕೊಳವೆಗೆ ಅಳತೆ ಮಾಡಿದ ಕಡ್ಡಿಯ ಮೇಲೆ ಇ ಬೈರಿಗೆಯ ಬಾಯ ಮಡುಗಿ ಅಳತೆ ಮಾಡಿದರೆ ಆ ಕಡ್ಡಿ ಆರು ಬೈರಿಗೆ ಬಾಇ ಅಳತೆಯಾದರೆ ಅದ ಕಡ್ಡಿ ಉದ್ದ ....ಸರಿಬಂದರೆ ಆ ಬೈರಿಗೆಯ ಇ ಕೊಳವೆಗಿಂಣ ಮಧ್ಯ ಸರಿಯಾಗಿ ಮಧ್ಯ ಯಜ್ಞನ ಮಾಡಿ ಹತ್ತಿಸುವುದೂ|| ಬಾಣದ ಕಟ್ಟಿಗೆ ಮಂತ್ರ|| ಉರಿ ಉರಿ ಉತಂಪಡುಮಡು ಉರಿ ಪುಟ್ಟಿ ಮರಿಲೊನ ಪುತ್ರಪುಟ್ಟಿ.

**ವಿಷಯ:** ರೋಗನಿದಾನ.

**ವಿಶೇಷ:** 9-19, 40-43, 112 ಮತ್ತು 113ನೆಯ ಪತ್ರಗಳಿಲ್ಲ. ಶ್ರೀ ಚಿಕ್ಕದೇವ ರಾಯ ಕರುಣಾವಲೋಕನ ಮುದಿತ ಚಿಕುಪಾಧ್ಯಾಯ ವಿರಚಿತಮಪ್ಪ ಆರೋಗ್ಯಾಮೃತವೆಂಬ ಕರ್ನಾಟಕ ಸಾರಸಂಗ್ರಹದೊಳು ಜ್ವರೋತ್ಪತ್ತಿ ಜ್ವರ ನಿದಾನ ಸಂನಿಪಾತೋತ್ಪತ್ತಿ ಸಂನಿಪಾತ ನಿದಾನ ಚಿಕಿತ್ಸಾ ನಾಮಾ ಪ್ರಥಮಾಸ್ವಾಸ ಸಮಾಪ್ತಃ ಎನ್ನುವ ಅಶ್ವಾಸಾಂತ್ಯ ಗದ್ಯವಿದೆ.

—ಜಿಜಿಎಂ

## 212

| ಕೆ. ೧೦೨೩ | **ಆರೋಗ್ಯಾಮೃತ** | ಗದ್ಯ |
|---|---|---|
| ೧೦.೫" × ೧.೫" | ಚಿಕ್ಕುಪಾಧ್ಯಾಯ | ೧೬೭೨ |
| ೫೬-೭೯ ಪತ್ರ | ೭ ಪಂಕ್ತಿ | ೫೪ ಅಕ್ಷರ |

**ಆದಿ:** ಚತುರ್ಭಾಗನ ಶೇಷವಾಗಿ ಕಾಸಿ ಸೋದಿಸಿಕೊಂಡು ಆ ಕಷಾಯದಲ್ಲಿ ಪಂದು ಕೊಳಗ ಚಿಟ್ಟೌಡಲದ ಯುಣ್ಣೆಯನು ಹನಿಸಿ.... ವೈಚಿತ್ರಮೂಲ ಶುಂಠಿ ಯಿಂಗು ಸೈಂಧವ ಯಿಘೃಪ್ತತೆಕನಂದು ಹಲ ಬಿಳಿಸಾಸುವೆ ಯವ ಕ್ಷಾರ ವಾದಕ್ಕಿ ಜೀರಿಗೆ... ರಂಗಿ ಕುರುಟಿಗೆ ಬೇರು ಹೆಬ್ಬೇವಿನ ಬೇರು ಕಿರು ಯಲಿಕಿವಿಯನ ಗೆಡ್ಡೆ ವಾಯು ವಿಳಂಗ ನಾರುಂಬೇಳೆ.... ರೇಣುಕ ಕೊಡ ಸಿಗನ ಚಕೆ ಅತಿಬಜೆ ಯಾಲಕ್ಕಿ ದೇವದಾರು ಬಜೆ ನುಗ್ಗೆಬೇರು ಪಂಚ

ಲವಣ ಗಜಹಿಫಲಿ.... ವರಹತುಕ ಮುಂಡಗಳಿ ಹಾಲು ಯರಡು ಫಲ ಆಡಿನ ಹಾಲು ಯರಡು ಕೊಳಗ ಯಿಷ್ಟುಗೂಡಿ ತೈಲವ ಸುಪಾರXನ ವುದಯ ಕಾಲದಲಿ ನಾಲ್ಕುವರಹ ತೂಕ ಸೇವಿಸಲು ಗುಲ್ಮಶೂಲೆ ವುದಾವರ್ತ ಆದಾಗ ವುದರರೋಗ ಅಂತ್ರವೃದ್ಧಿXX ವಾತಶೂಲೆ ಯಿಷ್ಟನು ಪರಿಹರಿಸುವದು ಯಿದು ಮಹಾಲಶುನಾದ್ಯೆರಂಡತೈಲವೆನಿಸಿಕೊಂಬುದು XXX

ಶ್ರೀ ಚಿಕ್ಕದೇವರಾಯ ಕರುಣಾವಲೋಕನಮುದಿತ ಚಿಕುಪಾಧ್ಯಾಯ ವಿರಚಿತಮಪ್ಪ ಆರೋಗ್ಯಾಮೃತವೆಂಬ ಕರ್ನಾಟ ಸಾರಸಂಗ್ರಹದೊಳು ಮೂತ್ರ ಕಚ್ಛ್ರ ಪ್ರಮೇಹ ಸೋಮರೋಗ ಅಂತ್ರವೃದ್ಧಿ ಗುಲ್ಮ ಶೂಲ ಪ್ಲೀಹ ಜಲಕೂರ್ಮ ಆಧ್ಮಾನ ಅಷ್ಠೀಲ ಮಹೋದರ ಚಿಕಿತ್ಸಾನಾಮ ಷಷ್ಟಮಾಶ್ವಾಸ ಸಮಾಪ್ತXX

**ಅಂತ್ಯ :** ಯೋಗಾಮೃತದಲ್ಲಿ ತ್ರಿಫಲೆXX ಆಡುಸೋಗೆ ಕಟುಕರೋಹಿಣಿ ನೆಲಬೇವು ಬೇವು ಯಿವರ ಕಷಾಯವ ಜೇನುತುಪ್ಪವೆರಸಿ ಸೇವಿಸಲು ಪಾಂಡುರೋಗ ಕಾಮಾಲೆಗಳು ಪರಿಹರವಹುದು ||೪೮||

**ವಿಷಯ :** ವೈದ್ಯ.

**ವಿಶೇಷ :** ಅಸಮಗ್ರ. ಪ್ರತಿಯಲ್ಲಿ ಅಲ್ಲಲ್ಲಿ ಹುಳುಗಳು ಹೊಡೆದಿವೆ.

—ಜಿಜಿಎಂ

## 213

ಕೆ.ಬಿ. ೭೩೦/೧ | **ಆಹ್ನಿಕ ಕ್ರಮ** | ಶ್ಲೋಕ, ಗದ್ಯ

೫.೨" × ೮.೧" | ? | ?

೧-೧೪ ಪತ್ರ | ೨೧ ಪಂಕ್ತಿ | ೧೬ ಅಕ್ಷರ

**ಆದಿ :** ಶ್ರೀ ಶಿವಾಯ ಗುರುಮೂರ್ತಯೆ ನಮಃ|| ಅಹ್ನೀಕಕ್ರಮ|| ಬ್ರಾಹ್ಮ ಮುಹುರ್ತದಲ್ಲಿ ಯೆದ್ದು– ಹಸ್ತಪಾದಮುಖಪ್ರಕ್ಷಾಳನಂಗೈದು ಭೂತಿ ಧಾರಣನಿಷ್ಠನಾಗಿ ಶಿವಧ್ಯಾನಯುಕ್ತನಾಗಿ ಶ್ರೀ ಗುರುಮುಖದಿಂ ಪಡೆದ ಇಷ್ಟಲಿಂಗದರ್ಶನವಂ ಮಾಡಿ ಹಾಗೇಗೆ ಶ್ರೀಗುರುಚರಣಕ್ಕೆ ನಮಸ್ಕರಿಸಿ

**ಅಂತ್ಯ :** ನಮಸ್ತೆ ಅಸ್ತು ಭಗವಾನ್ವಿಶ್ವೇಶ್ವರಾಯ ಮಹಾದೇವಾಯ ತ್ರಿಯಂಬಕಾಯ ತ್ರಿಪುರಾಂತಕಾಯ ತ್ರಿಕಾಲಾಗ್ನಿ ಕಾಲಾಗ್ನಿರುದ್ರಾಯ ನೀಲಕಂಠಾಯ ಸರ್ವೇಶ್ವರಾಯ ಸದಾಶಿವಾಯ ಶ್ರೀ ಮನ್ಮಹಾದೇವಾಯ ನಮೋನಮಃ|| ಓಂ ಲಿಂಗರೂಪಿಣೆ ಶಿವಲಿಂಗಾಯ ನಮಃ ನಾನಾವಿಧ ಮಂತ್ರಪುಷ್ಪಂ ಸಮರ್ಪಯಾಮಿ|| ಪೂರ್ವೋಕ್ತ ತರ್ಪಣಂ ಕೃತ್ವಾ|| ಇತಿ ನಿತ್ಯಾರ್ಚನ ವಿಧಿಯು ಶ್ರೀ ಶ್ರೀ.

**ವಿಷಯ :** ನಿತ್ಯಾರ್ಚನ ವಿಧಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಷಡುಸ್ಥಲ ನಿರ್ಣಯ ಮೊದಲಾದ ೨ ಕೃತಿಗಳಿವೆ.

—ಜಿಜಿಎಂ

## 214

ಕೆ. ೭೩೩ **ಆಳುವಂದಾರ ಸ್ತೋತ್ರ (ಸಟೀಕು)** ಶ್ಲೋಕ, ಟೀಕು

೧೪.೬" × ೧.೪" ಚಿಕ್ಕುಪಾಧ್ಯಾಯ ೧೬೭೨

೭೪-೧೧೨ ಪತ್ರ ೬ ಪಂಕ್ತಿ ೫೪ ಅಕ್ಷರ

**ಆದಿ :** ಶ್ರೀ ರಾಮಾಯ ನಮಃ XX ಆಳುವಂದಾರ ಸ್ತೋತ್ರದ ವ್ಯಾಖ್ಯಾನ ಬರಯುಂದಕ್ಕೆ ನಿರ್ವಿಘ್ನಮಸ್ತು.
ಸ್ವಾದಯನ್ನಿಹ ಸರ್ವೇಷಾಂ ತ್ರಯಂತಾರ್ಥಂ ಸುದುರ್ಗ್ರಹಂ
ಸ್ತೋತ್ರಯಾಮಾಸ ಯೋಗೀಂದ್ರ ಸಂವಂದೇ ಯಾಮುನಾಹ್ವಯಂ

ಟೀಕು: ಅಕಾರಣ ಸುಹೃತ್ಪರಮಕಾರುಣಿಕತ್ವ ಲೋಕಾಧಾರತ್ವಾದಿ ಗುಣ ಪ್ರಸಿದ ನಾದಂಥಾ ಮೊಬ್ಬಾನೊಬ್ಬ ಯೋಗೀಂದ್ರಂ ಕರ್ಮಲಬ್ಧ ತಪೋಲಬ್ಧ ಸಾಕ್ಷಾದ್ಭಗವತ್ಪ್ರಸಾದಲಬ್ಧ ಜ್ಞಾನಿಗಳಾದ ಶೌನಕ ವಿಶ್ವಾಮಿತ್ರಾರ್ಜುನಾದಿ ಗಳ ದೆಸೆಯಿಂದ ಶ್ರೇಷ್ಠರಾದಂಥಾ ಯಾಮುನಾಚಾರ್ಯರಂ

**ಅಂತ್ಯ :** ಹಿತಮಪ್ಪಂತ ರಮೇಶ ಭಕ್ತಿಜನದೊಳ್ ಶ್ರೀಯಾಳುವಂದಾರರ್ಸಂ ಸ್ತುತಿಯುಂ ಪ್ರಾಕೃತ ಭಾಷೆಯಿಂದೆ ತಿಳಿದರ್ಥ ಸ್ವರೂಪಂಗಳಂ ಕೃತಿಗೈದಂತ ವೆ ಟೀಕವೆಂಬ ಪೆಸರಿಂ ಸುವ್ಯಕ್ತ ತಾತ್ಪರ್ಯದಿಂ ಶ್ರಕವಾಗಲ್ವಿಬುಧರ್ಕ ಳಿಂದೆ ಚಿಕುಪಾಧ್ಯಾಯಂ ಮುದಿಷಪ್ರಿಯಂ XXX ಯಿದು ಬರದವನು ಹರಹಿನಗರುಡ್ಡೈಯ್ಯನ ಮಗ ಅಂಣ್ಣೈಯ್ಯ

**ವಿಷಯ :** ವಿಷ್ಣುವಿನ ಸ್ತುತಿ.

**ವಿಶೇಷ :** ಸಮಗ್ರ. ಇದರ ಜೊತೆಯಲ್ಲಿ ಪದ್ಮಪುರಾಣ, ಹರಪೂಜಾ ಪ್ರಕರಣ, ಸಂಕ್ಷೇಪರಾಮಾಯಣ ಸಟೀಕು, ಮುಕುಂದಮಾಲಾ ಸ್ತೋತ್ರದ ಟೀಕು, ರಂಗನಾಥ ಪಾದುಕಾ ಸಹಸ್ರ ಸಟೀಕು ಕೃತಿಗಳಿವೆ.

—ಜಿಜಿಎಂ

## 215

ಕೆ.ಬಿ. ೭೧೫/೧ **ಇಂದ್ರಕೀಲ** ಯಕ್ಷಗಾನ

೧೦.೧" × ೭.೮" ಅಜಪುರದ ಕೃಷ್ಣ ೧೯ನೆಯ ಶತಕ

೧-೩೨ ಪತ್ರ ೨೦ ಪಂಕ್ತಿ ೨೨ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆ ನಮಃ॥ XXX ರುಧಿರೋದ್ಗಾರಿ ಸಂವತ್ಸರದ ಅಧಿಕಶ್ರಾವಣ ಬ ೧೨ಲ್ಲು ಭಾರತದೊಳಗೆ ಯಿಂದ್ರಕೀಲ ಬರಿಯುವದಕ್ಕೆ ಶುಭಮಸ್ತು॥ ಶ್ರೀ ಗಂಗಾಧರನೆಂಬುಜಾಪ್ತ ಶತಭಾಸಂ ತ್ರೈಜಗತ್ಪಾಲನಂ
ನಾಗಾರೂಢ ಮುಖಾಮರೌಘವಿನುತಂ ಕೈಲಾಸವಾಸಂ ಹರಂ
ನಾಗಾರಾಥಿವರೂಥ ಮಿತ್ರನಭನಂ ನಾನ್ಯಾಸುವಿದ್ಯಪ್ರದಂ
ವಾಗೀಶಾಖ್ಯ ಪುರೇಶ ನೀವುದೆನುಗಂ ಸುಗ್ನಾನ ಸೌಭಾಗ್ಯನುಂ ॥೧॥

**ಅಂತ್ಯ :** ಕಂದಪದ್ಯಾ॥ ದ್ವಿಜಕುಲಜಾತಂ ರಾಮಾ
ತ್ಮಜಕ್ರಿಷ್ಣನೆನಿಪಂನಜಪುರೇಶನ ಭಜಕಂ
ಶೃಜಿಸಿದ ಕಾವ್ಯವನಾಲಿಸಿ
ಸುಜನರ್ ಮುದವೆತ್ತು ಮೆರಸಿ ಪೇಳ್ವುದು ಧರಿತ್ರಿಯೊಳು॥
XXXಗಜಚರ್ಮಾಂಬರಧರನಿಗೆ ಮಂಗಳ
ತ್ರಿಜಗತ್ಪಾಲಗೆ ಮಂಗಳ
ಭಜಕರ ಭವಭಯನಾಶಗೆ ಮಂಗಳ
ಅಜಪುರವಾಸಗೆ ಮಂಗಳ ಪರಮೇಶ್ವರನಿಗೆ ಮಂಗಳಂ ॥೩॥
ಅಂತು ಸಂಧಿ ೧ಕಾಂ ಪದನು ೪೬೭ಕಾಂ ಪದನು ಮಂಗಳ ಮಹಾ ಶ್ರೀಶ್ರೀ

**ವಿಷಯ :** ಈಶ್ವರನನ್ನು ಸೋಲಿಸಿ ಅರ್ಜುನ ಪಾಶುಪತವನ್ನು ಪಡೆದದ್ದು.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಸಾರಂಗಧರನ ಕಥೆ ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 216

| ಕೆ. ೧೫೩೪/೨ | **ಇಂದ್ರಜಿತುವಿನ ಕಾಳಗ** | ಯಕ್ಷಗಾನ |
|---|---|---|
| ೮.೬" × ೧.೮" | ? | ? |
| ೧-೧೫ ಪತ್ರ | ೬ ಪಂಕ್ತಿ | ೩೦ ಅಕ್ಷರ |

**ಆದಿ :** ಶ್ರೀ ನರಸಿಂಹ್ವಾಯ ನಮಃ। ಶ್ರೀ ರಾಮಾಯ ನಮಃ XXX ರಾಮಾಯಣದಲ್ಲಿ ಯಿಂದ್ರಜಿತುವಿನ ಕಾಳಗ ಬರವದಕ್ಕೆ ಸುಬಮಸ್ತು ವಾರ್ದಿಕ್ಯ॥
ಗುರುಹರರ ನೆನದು ವಿಗ್ನೇಶಗಂ ಯಿಶಗಂ
ವರ ಶಾರದಾಂಬೆ ವಾಣೀಶಗಂ ವ್ಯಾಸಗಂ
ಸುರಮುನಿಪದಿವಿಜಾಳಿ ಶೇಷಸರ್ವೇಶಗಂ ಯರಗಿ ಸಂಮ್ಮತಿ ಬೇಡುವೆ॥
ಪರಮ ವಾಲ್ಮೀಕಿ ಮುಖ್ಯ ಕವಿಗಳ್ಗೆ ಕೈಮುಗಿದು

ವರವೆ ರಾಮಾಯಣಾಂಮೃತ ಯಕ್ಷಗಾನದಿಂ
ಧರೆಯೊಳುತ್ತಮ ವೆನಿಪ ಉಡುಪುರದಿ ನೆಲಶಿರುವ
ಶ್ರೀಕೃಷ್ಣನ ಕಟಾಕ್ಷದಿಂದಾ ||೧||

**ಅಂತ್ಯ :** ರಾಗ|| ಕಾಂಬೋದಿ| ಆದಿತಾಳಾ
ತರುಣಿಮಣಿಯೆ ಕೇಳೀಗಾ
ಸವುಮಿತ್ರಿಯು ಪರಿಯ ಪೇಳುವೆ ನಾನೀಗಾ||
ಯಿರುವ ವ್ರತದಿನಿಷ್ಠಾನು
ದ್ವಾದಶ ದ್ವಾದಶವರುಷ ನಿರುತಭೋಜನನ ಬಿಟ್ಟನೂ ||೧೦೪||
ಬಾಲಬ್ರಹ್ಮಚಾರಿ ವ್ರತಾ ಮಾಡಿವನಿಂತು
ಲಾಲಿಸು ತರುಣಿಯತ್ತಾ
ಯೆಲೆ ನಿದ್ರೆಯ ಮರತಾಯಿಂತಾ ತಪಶೀಗೆ||

**ವಿಷಯ :** ರಾಮಾಯಣದ ಇಂದ್ರಜಿತುವಿನ ಕಾಳಗ.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಪಾರಿಜಾತ ಎನ್ನುವ ಕೃತಿಯೂ ಇದೆ.

—ಜಿಜಿಎಂ

## 217

ಕೆ. ೧೦೦೦/೧೪ **ಇಪ್ಪತ್ತೊಂದುಸಾವಿರದನೂರತೆರದ ಸ್ವರಜಪ ಉದ್ಧರಣೆ** ವಚನ
೧೨.೮" × ೨" ತೋಂಟದ ಸಿದ್ಧಲಿಂಗ ?
೧೬೪-೧೬೭ ಪತ್ರ ೧೩ ಪಂಕ್ತಿ ೬೮ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ|| ಯಿಪ್ಪತ್ತೊಂದು ಸಾವಿರದರುನೂರ ತೆರೆದಸ್ವರ ಜಪವುದ್ಧರಣೆಯ ಬರವುದಕ್ಕೆ ಶುಭಮಸ್ತು||
ಶ್ರೀ ಗುರುಕರುಣದಿಂದ ನಿರೂಪಿಸಿದ ವಚನ||
ಸೂರ್ಯೋದಯ ಸೂರ್ಯಾಂತ್ಯಮಾದದಿನವೊಂದಕ್ಕೆ ತಾಸು ೨೪
ಆ ಒಂದು ತಾಸಿಗೆ ಗಳಿಗೆಯರಡುವರೆ ೧ ದಿನಕ್ಕೆ ಗಳಿಗೆ ೬೦
೧ ಗಳಿಗೆಗೆ ಪಾನಿವಳ ೬೦ ೧ ದಿನಕ್ಕೆ ಪಾನಿವಳ ಮೂರುಸಾವಿರದನೂರು
೧ ಪಾನಿವಳಕ್ಕೆ ಹಂಸಸ್ವರ ಆರು ದಿನವೊಂದಕ್ಕೆ ಸ್ವರ ೨೧೬೦೦| ನೇಮದ ಕಟ್ಟಳೆXX

**ಅಂತ್ಯ :** Xನಿತ್ಯಯಚ್ಚರದಲ್ಲಿ ಸ್ಮರಿಸುವ ಮಹಾಶರಣನ ವಿಧಿ ಯೆಂತಾಯಿತೆಂದಡೆ ಸತಊ ಚಿತ್ತಾನಂದ ನಿತ್ಯಪರಿಪೂರ್ನ ಅಖಂಡ ಪರಬ್ರಹ್ಮ ಪರತರಪರಂಜ್ಯೋತಿ ಪರಮಾನಂದ ಪರಮ ಚಿದ್ಘನ ಗುರುತೋಂಟದ ಸಿದ್ಧಲಿಂಗಸ್ವಾಮಿಗಳ ಶ್ರೀ ಚರಣಾರವಿಂದದಲ್ಲಿ ಬೆರದಿರ್ಪ ಮಹಾಮಹಿಮರ್ಗೆ ಶರಣು ಶರಣಾರ್ಥಿ||

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಈ ಕಟ್ಟಿನಲ್ಲಿ ಹಂಸ ಪವನಲಕ್ಷಣ, ಬಿರುದಾವಳಿ ಗದ್ಯ, ಹಾಡುಗಳು ಇತ್ಯಾದಿ ೧೫ ಕೃತಿಗಳಿವೆ. ೧–೮೬ ಪತ್ರಗಳಲ್ಲಿ ವೃದ್ಧರಣೆಯ ಪಟಲದ ಚಿತ್ರಗಳಿವೆ. ೬–೫೮ ಪತ್ರಗಳಿಲ್ಲ. ೧೬೬ ನೆಯ ಪತ್ರವಿಲ್ಲ.

—ಜಿಜಿಎಂ

## 218

| ಕೆ. ೮೪೫/೨ | **ಇಮ್ಮಡಿಯ ಕೆಂಪರಾಯನ ಪದಗಳು** | ಹಾಡು |
|---|---|---|
| ೫.೮″ × ೦.೮″ | ? | ? |
| ೧-೧೫ ಪತ್ರ | ೫ ಪಂಕ್ತಿ | ೨೪ ಅಕ್ಷರ |

**ಆದಿ :** ಶುಭನುಸ್ತು|| ರಾಗ ಕಂನಡ ಕಾಂಬೋಜಿ|
ದಕ್ಕಿತೋ ನಿನಗೆ ಪಂಥ
ದಕ್ಕಿತೋ ನಿನಗೆ ಪಂ....ಥ ಭಿರುತಿರೂಪ ಜ....ಂತ್ತದಿಕೆಂಟರಲಿನು ಸಗಂಪ
ಯಿಂಮ್ಮ.... ಕೆಂಪ ದಕ್ಕಿತೋ ನಿನಗೆ ಪಂಥ|| ಪಲ್ಲ||
ಮಂಡಲಪತಿ ವೆಂಕಟರಾಯ....
ದಂಡ ಸ್ವಾಮಿದ್ರೋಹರ ಗಂಡನೆನಿಪ ಕಾ
ಲ್ಪೆಂಡೆಯವನು ಯಿಟ್ಟು.... ರಾಯನೆನಿಸಿ
ಕೊಂಡು ಯಿಂಮ್ಮಡಿ ಕಂಮ್ಮ ಭೂಪ ಸುಖದೊಳಿರ್ದು ಖ....

**ಅಂತ್ಯ :** ನೆರೆ ಸಂಸ್ಥಾನವನುಂಟು ಮಾಡಲು ಕಕೋದ್ಗಿರಿಯ ಗಂಗಾಧರೇಶನ ಕಂಡು ಬಲಗೊಂಡು ವರ ಮೂರ್ತಿ ಹಲಸೂರ ಸೋಮೇಶ್ವರನ ದಯವೆರಸಿ ಶ್ರೀ ಗುಂಮ್ಮಳಾಪುರದ ಸದ್ಗುರು ನಂಜೇಶ್ವರನ ಕೃಪೆಯನು ಮಾಪಾ|| ಪಡದು ಸೌಖ್ಯಕರ ವಿರಾಜಿಪ ಕಲಾಪ ಯೆಲಹಕ ನಾಡೆರೆಯ ಮೋಹಂನ್ನರೂಪಾ| ಸುಖದಿ ಸುಸ್ಥಿರ ಬಾಳು ಸುಪ್ರತಾಪ ನಾಚಯ ಕೆಂಪ ಧರಣೀಶನಣುಗ ಯಿಂಮ್ಮಡಿ ಕೆಂಪಭೂಪಾ ||೧೯||

**ವಿಷಯ :** ಇಮ್ಮಡಿಯ ಕೆಂಪರಾಜನನ್ನು ಕುರಿತ ಹಾಡುಗಳು.

**ವಿಶೇಷ :** ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ಅಲ್ಲಮಪ್ರಭುವಿನ ಪದಗಳು, ಕೆಂಪರಾಯನ ಪದಗಳು ಎಂಬ ಎರಡು ಕೃತಿಗಳಿವೆ.

—ವೈಸಿಬಿ

## 219

| ಕೆ.ಎ. ೩೭೪/೨ | **ಇಮ್ಮಡಿ ಕೆಂಪರಾಯನ ಪದಗಳು** | ಹಾಡು |
|---|---|---|
| ೧೦.೨″ × ೯.೪″ | ? | ? |
| ೩-೧೭ ಪತ್ರ | ೨೦ ಪಾಕ್ತಿ | ೩೩ ಅಕ್ಷರ |

ಆದಿ : ರಾಗ ಕನ್ನಡ ಕಾಂಬೋದಿ||
ದಕ್ಕಿತೋ ನಿನಗೆ ಪಂಥ ಧಿರುತಿರೂಪ ಜಯಂತರಿಕೆಂಟರಲಿ ಝುಸಗಂಪ ಇಮ್ಮಡಿ.... ಪದಕ್ಕಿತೋ ನಿನಗೆ ಪಂಥ ||ಪಲ್ಲ||
ಮಂಡಲಪತಿ ವೆಂಕಟರಾಯಗ ಭುಜದಂಡ ಸ್ವಾಮಿದ್ರೋಹಗಂಡನೆನಿಸಿ ಕಾಲ್ಪೆಂಡೆಯವನನು ಇಟ್ಟು ಚಿಕ್ಕರಾಯನೆನಿಸಿಯೆಕೊಂಡು ಯಿಮ್ಮಡಿ ತಮ್ಮ ಭೋಗಸುಖದೊಳಿರ್ದು ಖಂಡೇಂದುಧರನೆಡೆಗೈದಲಾತನ ರಾಜ್ಯಭಂಡಾರ ಬೊಕ್ಕಸವಧಿಕಾನೆ ಕುದುರೆಯ ತಂಡ ಮುಂತಾಗಿ ಎಲ್ಲವನು ಅಯ್ಯಮ ಗೌಡ ಲಂಡತನದಿ ಗ್ರಹಿಸಿ ದುರ್ಗಗಳ ಪ್ರಚಂಡತೆಯಂ ಬರಿಸಿ ತಾನಲ್ಲದೆ ಗಂಡುಗಲಿಯು ಇಲ್ಲೆನಿಸಿ ಇರಲು ಅದ ಕಂಡು ಕಡುಮೆರಿಸಿ ಆ ಕ್ಷಣದಿ ಮುಂ ಕೊಂಡೆ ನೀ ರಾಜ್ಯಕಾರ್ಯಕೆ ಮನವೆಳಸಿ ||೧||

ಅಂತ್ಯ : ಧರಣಿ ತರಣಿ ತಾರಶಿಯು ಚಂದ್ರರುಳ್ಳನಕರರ ಮೇರುಗಿರಿ ಸಪ್ತವಾರುಧಿ ಗಳುಳ್ಳನಕ ಮೆರೆವ ನವನಿಧಿ ಕನಕ ರಜತಾದ್ರಿಯುಳ್ಳನಕಸುರರು ದಿಕ್ಪಾಲ ರುಳ್ಳನಕ| ಸ್ಥಿರದಿ ರಾಯರ ಸಿಂಹಾಸನವ ನಿಲಿಸಿದೆ ಕೆಂಪ ಧೊರೆರಾಯ ನಿಮ್ಮ ಚಾರಿತ್ರವನು ಹರುಷದಲಿ ಬರೆದೋದಿ ಕೇಳ ಜಾಣರಿಗೆ ಇಹಪರ ಸುಖವ ಪರಮೇಶನೀವ ಕರುಣದಲಿ ಕೆಂಪ ಧೊರೆರಾಯ ಬಾಳು ಸಾಮ್ರಾಜ್ಯ ಪದವಿಯಲ್ಲಿ ||೩|| ಮಂಗಳ ಮಹಾಶ್ರೀ.

ವಿಷಯ : ಇಮ್ಮಡಿ ಕೆಂಪರಾಯನ ಸ್ತುತಿ.

ವಿಶೇಷ : ಪ್ರತಿಯ ಕೊನೆಯಲ್ಲಿ ಯುವಸಂವತ್ಸರದ ಬಹುಳ ೩ ದಲ್ಲು ಪೊರಮುವ ತಿಮ್ಮಪ್ಪಯ್ಯನ ಮಗ ವೆಂಕಟಯ್ಯನು ಬೆಕ್ಕಕುಪ್ಪಕ್ಕಗೆ ಆಯುರಾರೋಗ್ಯೈಶ್ವರ್ಯ ಧನಕನಕ ವಸ್ತುವಾಹನ ಪುತ್ರ ಪೌತ್ರಾಭಿವೃದ್ಧಿಯಾಗಿ ಶೀಘ್ರದಲಿ ಗಂಡುಸಂತಾನವಾಗಲಿ ಯೆಂದು ತ್ರಿಸಂಧ್ಯಾಕಾಲದಲ್ಲಿಯೂ ಹರಸಿ ಬರೆದುಕೊಟ್ಟ ಬಿಡು ಪದದ ಪುಸ್ತಕ ಎಂದಿದೆ. ಇದರೊಡನೆ ಅಲ್ಲಮಪ್ರಭು ಸಂಗೀತ ಪದ ಎಂಬ ಮತ್ತೊಂದು ಕೃತಿಯಿದೆ.

—ಬಿಎಸ್ಎಸ್

## 220

ಕೆ.ಎ ೫೧೪/೨ **ಇಮ್ಮಡಿ ತಮ್ಮರಾಯ ಕೆಂಪರಾಯ ಪದಗಳು** ಹಾಡು
೧೦.೪" × ೬" ? ?
೪-೨೩ ಪುಟ ೨೦ ಪಂಕ್ತಿ ೨೪ ಅಕ್ಷರ

ಆದಿ : ಶುಭಮಸ್ತು|| ರಾಗ|| ಕನ್ನಡ ಕಾಂಬೋಧಿ
ದಕ್ಕಿತೋ ನಿನಗೆ ಪಂಥಾ| ದಕ್ಕಿತೋ ನಿನಗೆ ಪಂಥಾ
ಧೀರರಿಪು ಜಯಂತ ವಿಕೋಟರಲಿ ಝುಸಗಂಪಯಿಂಮ್ಮಡಿಯೆ

ದಕ್ಕಿತೋ ನಿನಗೆ ಪಥಾ ||ಪಲ್ಲ||
ಮಂಡಲಪತಿ ವೆಂಕಟರಾಯರ ಭುಜದಂಡ
ಸ್ವಾಮಿದ್ರೋಹರ ಗಂಡ
ನೆನಿಪ ಕಾಲ್ಪೆಂಡೆಯುವನೂಯಿಟ್ಟು ಬೇತರಾಯನೆನಿಶಿಯೆಕ್ಕೊಂಡು
ಯಿಮ್ಮಡಿ ತಮ್ಮ ಭೂಪ ಸುಖದೊಳಿರ್ದು

ಅಂತ್ಯ : ಧರೆಯು ತರಣಿಯು ತಾರಕಿಯು ಚಂದ್ರರುಳ್ಳನಕು
ವರ ಮೇರುಗಿರಿ ಸಪ್ತವಾರುಧಿಗಳುಳ್ಳನಕ XXX
ಸ್ಥಿರವಿರಾಯರ ಸಿಂಹಾಸನವ ನಿಲಿಶಿದೆ
ಕೆಂಪದೊರೆರಾಯ ನಿಮ್ಮ ಚಾರಿತ್ರವನು||
ಯುವಸಂವತ್ಸರದ ಶ್ರಾವಣ ಬಹುಳ ಇಲ್ಲು ಪೊರಮಾದ ತಿಂಮ್ಮಪ್ಪಯ್ಯನ ಮಗ ವೆಂಕಟೈಯನು ಚಿಕ್ಕ ಕುಪ್ಪಕ್ಕಗೆ ಆಯುರಾರೋಗ್ಯ ಐಶ್ವರ್ಯ ಧನ ಕನಕ ವಸ್ತುವಾಹನ ಪುತ್ರ ಪೌತ್ರಾಭಿವೃದ್ಧಿಯಾಗ ಸೀಘ್ರದಲಿ ಗಂಡು ಸಂತಾನವಾಗಲಿಯಂದು ತ್ರಿಸಂಧ್ಯಾ ಕಾಲದಲ್ಲು ಹರಸಿ ಬರದು ಕೊಟ್ಟ ಬಿಡು ಪದದ ಪುಸ್ತಕ ಶ್ರೀ ಶ್ರೀ.

ವಿಷಯ : ಯಲಹಂಕ ನಾಡಪ್ರಭು ಕೆಂಪರಾಯನ ಸ್ತುತಿ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಅಲ್ಲಮಪ್ರಭು ಸಂಗೀತ, ವೈಭೋಗರಾಜಾಸ್ಥಾನ ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 221

| ಕೆ. ೯೯೪/೨೦ | ಇಷ್ಟಲಿಂಗ ಚಾರಿತ್ರ | ವಾರ್ಧಕಷಟ್ಪದಿ |
|---|---|---|
| ೮″ × ೨.೨″ | ಶಂಕರದೇವ ? | ? |
| ೧೧೯-೧೨೪ ಪತ್ರ | ೧೨ ಪಂಕ್ತಿ | ೩೫ ಅಕ್ಷರ |

ಆದಿ : ಶ್ರೀ ಯಿಷ್ಟಲಿಂಗ ಚಾರಿತ್ರ
ಆಹಮಹಾದೇವನಾನೇಂ ಕೃತಾರ್ಥನೊ
ನಾಹಂ ಕೋಹಂ ಸೋಹಂಮೆಂಬ ಮೂರು ಭ್ರಮೆಯ
ತೋಹಿದೊಳು ತೊಡಕದ ಷಡುಸ್ಥಲ ಬ್ರಹ್ಮಮಂ ಕಂಡೆ ಕರಸ್ಥಲದೊಳು||
||ಪದ||

ಶ್ರೀಮನ್ಮಹಾಸಿದ್ಧ ಶಿವಮೂರ್ತಿ ವರ ಗುರುಸ್ವಾಮಿ
ಸಂನ್ಯಾಸಿ ಶರಣಪ್ರೇಮಿ ಕರುಣದಿಂ
ಭೂಮಿ ಚಂದ್ರಾರ್ಕರುಳ್ಳನಕ ಭವದೊಳು ಬಂದಪಂಕನೆಂದು ಮರುಗಿ||
ನಾಮ ರೂಪು ಕ್ರಿಯಾರಹಿತನೆನಿಸುವ ವುಮಾ

ಕಾಮಿನಿಯ ಕಾಂತನಂ ಶಾಂತನಂ ನಿಜಕರತ
ಳಾಮಳಕವಾಗಿ ಕಾಣಿಸಿದೊಡಾಂ ನಿಂಪು ಕಂಡಂ ಪರಮ ಸುಖಿಯಾಡೆನು ||೧||

ಅಂತ್ಯ : ಗುರುವೆ ಶರಣಾರ್ತಿ ಶಂಕರಲಿಂಗ ಕಾರುಂಣ್ಯ
ದಿರುವೆ ಶರಣಾರ್ತಿ ಶಂಕರಲಿಂಗ ಭಕ್ತಿಸುರ
ತರುವೆ ಶರಣಾರ್ತಿ ಶಂಕರಲಿಂಗ ಶರಣಂಶರಣಾ ಶಂಕರಲಿಂಗವೆ
ತರಳನೊಳು ತಪ್ಪನರಸದಿರು ಶಿವ ಶಿವ ನಾಸು
ನರಜನ್ಮದೇಹಿ ನಾ ನಡವುದೆಲ್ಲಂ ತಪ್ಪು ನುಡಿವುದೆಲ್ಲಂ ತಪ್ಪು
ಧರಣಿಯೊಳಗಿಂತಪ್ಪನೊಪ್ಪಸಿಡು ನಿಂಪು ಧರ್ಮ ||೪೭||
ಯಿಷ್ಟಲಿಂಗ ಚಾರಿತ್ರ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಇಷ್ಟಲಿಂಗಸ್ತೋತ್ರ.

ವಿಶೇಷ : ಬಸವ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ.

—ಜಿಜಿಎಂ

## 222

ಕೆ. ೧೫೫೯/೨ **ಇಷ್ಟಲಿಂಗ ಚಾರಿತ್ರ** ವಾರ್ಧಕಷಟ್ಪದಿ
೮.೨" × ೧.೫" ? ?
೨೦-೨೬ ಪತ್ರ ೮ ಪಂಕ್ತಿ ೩೦ ಅಕ್ಷರ

ಆದಿ: ಶ್ರೀ ಗುರುಬಸವಲಿಂಗವೆ ನಮಃ|| ಯಿಷ್ಟಲಿಂಗಚಾರಿತ್ರ||
ಆಹಾ ಮಹಾದೇವನಾಂ ಕೃತಾರ್ಥನೊ
ನಾಹಂಮು ಕೋಹಂಮು ಸೋಹಂಮೇಹಿ ಬ್ರಮೆಯು
ತೋಹಿನೊಳು ತೊಡಕಡೆ ಷಡುಸ್ಥಲದ ಬ್ರಂಹ್ಮಮಂ ಕಂಡೆ ಕರಸ್ಥಲದೊಳೂ

ಪದನು|| ಶ್ರೀಮಂನ್ಮಹಾ ಸಿದ್ಧಶಿವಮೂರ್ತಿ ವರಗುರು
ಸ್ವಾಮಿಸಂನ್ಮಾನಿ ಶರಣಪ್ರೇಮಿ ಕರುಣದಿಂ
ಭೂಮಿ ಚಂದ್ರಾರ್ಕರುಳ್ಳನಕು ಭವದೊಳು ಬಂದಪಂ ಕಂದನೆಂದು ಮಣಿಗಿ
ನಾಮರೂಪಕ್ರಿಯಾರಹಿತನೆನಿಸುವ ಉಮಾ
ಕಾಮಿನೀ ಕಾಂತನಂ ಶಾಂತನಂ ನಿಜಕರತ
ಳಾಮಳಕವಾಗಿ ಕಾಣಿಸಿದನಿಂನೇನು ಕಂಡೆಂ ಪರಮಸುಖಿಯಾದೆನು ||೧||

ಅಂತ್ಯ : ಗುರುವೆ ಶರಣು ಶರಣಾರ್ತಿ ಶಂಕರಲಿಂಗ ಭಕ್ತ
ಸುರತರುವೆ ಶರಣು ಶರಣಾರ್ತಿ ಶಂಖರಲಿಂಗ ಕಾರಣದ
ಕರುವೆ ಶರಣು ಶರಣಾರ್ತಿ ಶಂಖರಲಿಂಗ ಶರಣು ಶರಣಾರ್ತಿ ಶಂಖರಲಿಂಗವೆ

ತರುಣನೊಳು ತಪ್ಪನರಸದಿರು ನೀನರಸುವರೆ
ನರಜಲ್ಮದೇಹಿನಾಂ ನಡಉುದೆಲ್ಲಂತಪ್ಪು
ಧರಣಿಯೊಳು ನುಡಿಉುದೆಲ್ಲಂ ತಪ್ಪುತಪ್ಪ ನೀವೊಪ್ಪವಿಡು ನಿಂಮ ಧರ್ನ್ಮ॥೪೭॥
ಯಿಷ್ಟಲಿಂಗಚಾರಿತ್ರ ನಾಲ್ವತಯೇಳಕಂ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಇಷ್ಟಲಿಂಗ ಸ್ತೋತ್ರ.

**ವಿಶೇಷ :** ಇದೇ ಕಟ್ಟನಲ್ಲಿ ಬಸವಪವಾಡದ ಸಂಧಿ ಮೊದಲಾದ ೮ ಕೃತಿಗಳಿವೆ.

—ಜಿಜಿಎಂ

## 223

ಕೆ. ೧೭೦೧/೧ — **ಇಷ್ಟಲಿಂಗ ಚಾರಿತ್ರ** — ಶಾರ್ಧಕಷಟ್ಪದಿ

೧೫.೧" × ೧.೯" — ? — ?

೧ ಪತ್ರ — ೧೦ ಪಂಕ್ತಿ — ೭೦ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಯಿಷ್ಟಲಿಂಗ ಚಾರಿತ್ರ॥

ಪಲ್ಲವ॥ ಆಹಾ ಮಹಾದೇವ ನಾನೆಂ ಕೃತಾರ್ತ್ಥನೊ
ನಾಹಂ ಕೋಹಂ ಸೋಹಂಮೆಂಬ ಮೂಱು ಭ್ರಮೆಯ
ತೋಹಿನೊಳು ತೊಡಕದ ಷಡುಸ್ಥಲದ ಬ್ರಹ್ಮವಂ ಕಂಡೆಂ ಕರಸ್ಥಲದೊಳು

ಪದ॥ ಶ್ರೀಮನ್ಮಹಾಸಿದ್ಧ ಶಿವಮೂರ್ತಿ ವರಗುರು
ಸ್ವಾಮಿ ಸನ್ಮಾನಿ ಶರಣಪ್ರೇಮಿ ಕರುಣದಿಂ
ಭೂಮಿ ಚಂದ್ರಾರ್ಕ್ಕರುಳ್ಳಂನಕ್ಕ ಭವಂಗಳೊಳ್ಬಂದಪಂ ಕಂದನೆಂದು
ಮಱಗಿ
ನಾಮರೂಪು ಕ್ರಿಯರಹಿತನೆನಿಸುವವುನಾ
ಕಾಮಿನಿಯ ಕಾಂತನಂ ಶಾಂತನಂ ನಿಜಕರತ
ಳಾಮಳಕವಾಗಿ ತೋಱಿಸಿದ ಗುರುಲಿಂಗಮಂ ಕಂಡೆಂ ಕರಸ್ಥಲದೊಳೂ ೧॥

**ಅಂತ್ಯ :** ಮಾಡಿತೆಲ್ಲಂ ಶಿವಾರಾಧನೆ ನಿರಂತರ
ನೋಡಿತೆಲ್ಲಂ ಮಹೇಶ್ವರ ನೀರೀಕ್ಷಣೆ ವೊಲಿದು
ಕೂಡಿತೆಲ್ಲಂ ಶಿವಾನಂದ ಸುಖರತಿ ಸರಸಗತಿ ತಾಳಮೇಳಂ....
ಪಾಡಿದಿತೆಲ್ಲಂ ಷಡಕ್ಷರಿಲೀಲೆ ಬಂದಂತೆ
ಯಾಡಿತೆಲ್ಲಂ ಪುರಾಣಾಗಮದ ಶೃತಿಮತಂ
ಬೇಡಿಲ್ಲಂ ಪರಮಭಕ್ತಿ ಶಿವಲಿಂಗಂ ಕರಸ್ಥಲಕೆ ಬಂದುದಾಗಿ ॥೧೪॥
ಸರ್ವೇಂದ್ರಿಯ ಲಿಂಗಭಕ್ತರಾದುದಱಿಂದ
ಸರ್ವಮುಖದಲಿ ತೋಱುತಿಹ ತನುಗುಣಾದಿ

**ವಿಷಯ :** ಇಷ್ಟಲಿಂಗ ಸ್ತೋತ್ರ.

**ವಿಶೇಷ :** ಅಸಮಗ್ರ. ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ಷಟ್ಸ್ಥಲತಿಲಕ ಎಂಬ ಗ್ರಂಥವಿದೆ ಮತ್ತು ಕೆಲವು ಮಿಶ್ರಗರಿಗಳಿವೆ.

—ವೈಸಿಬಿ

## 224

ಕೆ. ೭೮೨ | **ಇಷ್ಟಲಿಂಗಪೂಜಾ ಸಂಕಲ್ಪ** | ಶ್ಲೋಕ, ಗದ್ಯ

೧೨.೩" × ೧.೯" | ? | ?

೧ ಪತ್ರ | ೧೧ ಪಂಕ್ತಿ | ೫೪ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ। ಸಂಕಲ್ಪವ ಬರವುದಕೆ ಶುಭಮಸ್ತು॥ ಸಿವ ಸಿವ ಶಂಭೋರಾಜ್ಞೆಯಾ ಪ್ರವರ್ತಮಾನಸ್ಯದ್ಯಾ ಬ್ರಂಹಣೋ ದ್ವಿತೀಯೋ ಪರಾರ್ದೆ ಸ್ವೇತವರಃಹ ಕಲ್ಪೆವೈವಶ್ವತ ಮನ್ಮಂತರೆ ವೀರಭದ್ರಾವತ್ತಾರೆ ಕಲಿಯುಗೆ ಶಾಲಿವಾಹನಶಖೆ ಜಂಭುದ್ವೀಪೆ ಮೇರೋರ್ದಕ್ಷಣ ದಿಗ್ಭಾಗೇ....

**ಅಂತ್ಯ :** ಸರ್ವೆ।ಗ್ರಹ ಶುಭಯೇಕಾದಶಸ್ತಾನ ಫಲಾವಾಪ್ತೈರ್ಥಂ ಶ್ರೀ ಯಿಷ್ಟಲಿಂಗ ಪೂಜಾಂ ಕರಷ್ಯೆ ॥೧॥

ಶ್ರೀ ಬಸವಲಿಂಗಾಯನ ಪಾದಪೂಜಾವಿಧಿಯು ಬರವುದಕ್ಕೆ ಶುಭಮಸ್ತು.... ಸಾಮಾರ್ಜನ ದ್ರವ್ಯಂಗಳು॥ ಗ್ರಂಥ॥ ಗೋಮಯಂ ಗೋಮಾತ್ರಂ ಚ್ಚೈವ ಗೋಕ್ಷೀರಂ ಗೋದಧಿಸ್ತಥಾ। ಗೋಘುಸ್ರತಂ ಗೋರೋಜನಂ ಚ್ಚೈವ ಯಿತಿ ಸಾಮಾರ್ಜನಂ ಕ್ರಮಾತ್॥ ಭೂಶುದ್ಧಿ ಗೋಸ್ಪರಮಿಾದ್ರವ್ಯಂಗಳ ಕೂಡಿಸಿ ಮೂಲಮಂತ್ರದಿಂದ ಸಾಮಾರ್ಜನೆಯ ಮಾಡುವದೂ। ಯಿಂನ್ನುಪಾದ್ಯ ದ್ರವ್ಯಂಗಳು॥ ಬಿಳಿ ಸಾಸುವೆ। ಕುಂಕುಮದ ಹೂವೂ। ದೂರ್ವೆ। ಕೋಷ್ಟ। ಲಾಮಂಚ। ಪಚ್ಚೆಕರ್ಪೂರ। ವೇದಾಂತಮಸ್ತಕನಿವಾಸ ಧುರಂಧರಾಯ। ವೇದಾಂತಕಾಯ ಜಗತಾಂತವ ನೀಲಕಂಠಾ। ಪಾಪಳಿಪಾವನ ವಿಷಾಕಪಟು ವ್ರತಾಯಾ ಪಾದಾರವಿಂದಯುಗಳಾದದಾಮಿಪಾದ್ಯಂ॥ ಇತಿ ಪಾದ್ಯಂ ಸ್ರುಹ॥ ಪೂಜೆ॥ ಯರವಾ ಗುರು॥ ಶ್ರೀ ಗಣೇಶಾಯ ನಮಃ

**ವಿಷಯ :** ಪೂಜಾಸಂಕಲ್ಪ ವಿಧಾನ

**ವಿಶೇಷ :** ಪೂಜಾಕ್ರಮವನ್ನು ಬರೆಯಲು ಪ್ರಾರಂಭಿಸಿ ನಿಂತಿರುವುದರಿಂದ ಕೃತಿ ಅಪೂರ್ಣ. ಇದೇ ಕಟ್ಟಿನಲ್ಲಿ ಶಬರಶಂಕರ ವಿಳಾಸ, ರಾಜಶೇಖರ ವಿಳಾಸ, ಎಂಬ ಎರಡು ಗ್ರಂಥಗಳಿವೆ. ಕಟ್ಟಿನ ಆದಿಯಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಪಟ್ಟ ಒಂದು ಗರಿಯೂ ಬೇತಾಳನ ಕಟ್ಟ (ಮಂತ್ರಶಾಸ್ತ್ರ)ಗೆ ಸಂಬಂಧಪಟ್ಟ ಒಂದು ಓಲೆ ಗರಿಯೂ ಇವೆ. ಕಟ್ಟಿನ ಕೊನೆಯಲ್ಲಿ ಬರೆಯು ವಾಗ ಕೆಟ್ಟುಹೋದ ಕೆಲವು ಓಲೆಗಳಿವೆ

—ಎಸ್‌ಎನ್‌ಕೆ

## 225

ಕೆ. ೧೩೭೬/೮ **ಇಷ್ಟಲಿಂಗರಗಳೆ** ರಗಳೆ
೨.೧" × ೮.೮" ? ?
೨೧-೨೨ ಪತ್ರ ೧೦ ಪಂಕ್ತಿ ೩೮ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ॥ ಯಿಷ್ಟಲಿಂಗ ರಗಳೆ॥
ಜಯ ಜಯ ಸೋಮ ಭೀಮ ಭವಭರ್ಗ ಮಹೇಶ್ವರ ಮಾರಹರ್ತ್ರಂನಿರಾ
ಮಯ ಭವಭಂಗ ಭಾಸುರ ಸಭಸ್ಮಕಲೇವರ ಕರ್ಮನಾಶನಿ
ರ್ಮಯೆ ಜಿತಹೋಮಶರ್ವ ಶಿವಶಂಕರ ಶಾಶ್ವತ ಶಂಭುಸತ್ಯಪಾ
ಮಯ ವರರುದ್ರ ಭದ್ರ ಪರಮರ್ದನ ಚಾರುಕುರುಗಭೃದ್ವಿಭೋ ॥೧॥
ಲಲಿತರಗಳೆ॥ ಶ್ರೀಮಹಫಣಿತ ವಿಮಲ ವಾಮಾಂಗಲಸಿತವರ
ಭಾಮಿನೀ ಶ್ಲಿಷ್ಟಭವದೂರೇಷ್ಟ ಲಿಂಗೇಶ ॥೨॥

**ಅಂತ್ಯ :** ಶಾರ್ದೂಲ॥
ಇಂದ್ರೋಪೇಂದ್ರ ಜನೇಂದ್ರ ಕಿನ್ನರ ಭುಜಂಗೇಂದ್ರಾದಿ ಕೋಟೇಂದುಗೀರ್ವಾ
ಣಾದಿತ್ಯಮುನೀಂದ್ರ ಚಂದ್ರಮನುಗಂಧರ್ವಾದಿ ಸನ್ಮಾತೃಕಾ
ವೃಂದೈರ್ವಂದಿತ ಸುಂದರಾಮಳಪದಾಂಭೋಜಂ ದಯಾಸಾಗರಂ
ವಂದೇ ಪಾವನಮಂತ್ರಮೂರ್ತಿ ಸುಭಗಂ ಸಾರೇಷ್ಟಲಿಂಗೇಶ್ವರಾ ॥೧೬॥
ಇಷ್ಟಲಿಂಗ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ಇಷ್ಟಲಿಂಗದ ಸ್ತುತಿ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು, ಗಣ ನಾಮ ಸ್ತೋತ್ರ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲ ವಂತಯ್ಯನ ಆತ್ಮಲಿಂಗ ಸಂಯೋಗಸ್ಥಲವಿದೆ.

—ಜಿಜಿಎಂ

## 226

ಕೆ. ೧೩೫೮/೩ **ಇಷ್ಟಲಿಂಗೇಶ್ವರ ಶತಕ** ವೃತ್ತ
೧೨.೮" × ೧.೭" ಮಡ್ಲೇರಿ ಶಿವಲಿಂಗ ೧೫೭೦
೭-೧೩ ಪತ್ರ ೧೦ ಪಂಕ್ತಿ ೬೮ ಅಕ್ಷರ

**ಆದಿ :** ॥ವಿಷ್ಟಲಿಂಗೇಶ್ವರ ವೃತ್ತ॥
ಗುರುವೆ ಸದ್ಗುರುಯಿರುವೆ ಯಂನ
ಮರೆವಂ ನೀನೋಡಿ ರಕ್ಷಿಸೆಲೆ
ಪರೆದಂ ಸ್ವರ್ನವ ಬಂಣವಿಟ್ಟು ಸಮಾಜಂ ಸಿದ್ಧಾಂತ ತಿಳಿವಂದದಿಂ

ಧರೆಯೊಳ್ ಮೂಢರ ಮಂಕುಮಾನುಜ
ದರೊಳ್ ನೀಕೂಡಿ ಬೆರಸದಿರ್ರೈ
ಹರನೆ ನಿಂನ್ನು ತ್ರಿಕಾಲ ಬಿಡದೆ ಸ್ತುತಿಸೆಂ ಶ್ರೀ ವಿಷ್ಟಲಿಂಗೇಶ್ವರಾ ||೧||

**ಅಂತ್ಯ :** ಮಹಾ ಮೇರು ಸಮಾನವಾದ ಮೇಡ್ಲೇರಿಪಟ್ಟ ಹಿರೇಮಠದನು
ಆ ಕಬ್ಬಿನಕಂತೆಯ ಬಗೆಯಂ ಶಿವಲಿಂಗ ಪೇಳ್ದ ವೃತ್ತಂಗಳಿಂ
ಮಹೇಶಂ ವಾಕ್ಯವುಅರಿದುದೆಲ್ಲ ನೋಡಿಂತಪ್ಪಂ ಪಿರೆತ್ತಿರ್ದುದಂ
ಮಹಾ ಸಂಜೀವನ ಜೀವಕರ್ತನೀನೇ ಶ್ರೀ ವೀಷ್ಟಲಿಂಗೇಶ್ವರಾ ||೧೦೦||

**ವಿಷಯ :** ಶಿವಸ್ತುತಿ.

**ವಿಶೇಷ :** ಪ್ರತಿ ಸುದೃಢ. ಬರೆವಣಿಗೆ ಸುಂದರ. ೧೦ ನೇಯ ಗರಿ ಲೋಪವಾಗಿದೆ. ಅಕ್ಷರಗಳು ಸ್ಫುಟವಾಗಿವೆ. ಇದೇ ಓಲೆ ಪ್ರತಿಯಿಂದ ನಮ್ಮ ಹಸ್ತಪ್ರತಿ ಭಂಡಾರದಲ್ಲಿರುವ ಕೆ. ಬಿ. ೪೬೭ನೇ ಕಾಗದದ ಪ್ರತಿಯನ್ನು ಪ್ರತಿಮಾಡ ಲಾಗಿದೆ. ಇದರೊಂದಿಗೆ ಇದೇ ಶಿವಲಿಂಗ ಕವಿಯ ಶಿವಾಮೃತಲೀಲೆ, ವೀರ ಭದ್ರ ತಾರಾವಳಿ ಮತ್ತು ಶಿವಸ್ತುತಿಯ ಪದ್ಯಗಳಿವೆ.

—ಎಂಪಿಎಂ

## 227

| ಕೆ.ಬಿ. ೬೯೯/೧೩ | **ಇಷ್ಟಲಿಂಗೇಶ್ವರ ಸ್ತುತಿ** | ವೃತ್ತ |
| --- | --- | --- |
| ೭" × ೮.೫" | ? | ? |
| ೧ ಪತ್ರ | ೨೪ ಪಂಕ್ತಿ | ೨೨ ಅಕ್ಷರ |

**ಆದಿ :** ಶ್ರೀಗುರು ಚೆಂನಬಸವೇಶ್ವರನ ಪಾದವೆ ಗತಿ||
ಪೊಂದೆದೆವ ನಿರಂಜನಂ ವಿಷಧರಂ ಕಾಮಾರಿ ಸರ್ವೇಶ್ವರಂ|
ಮಂದರಾಗಿರಿವಾಸ ನಿರ್ಮಲ ಶಿವಗ್ನನಾಮೃತಂ ಸಾಗರಂ|
ಯಿಂದು ಶೆಂಕರ ಪಾರ್ವತಿ ಶದವಲಂ ಪಂಚಾಕ್ಷರರೂಪಕಂ|
ನಂದಿವಹನ ಶಂಕರಂ ಶುಭಕರಂ ಶ್ರೀವಿಷ್ಠಲಿಂಗೇಶ್ವರ ||೧||

**ಅಂತ್ಯ :** ಆಹಾ ಕಷ್ಟವನೇನ, ಬಂಣಿಪೆನಾ ಸಂಸರದಾಯತಿಪ್ಯಪಂ ಬಹುಗೆಂಬರ ನಾಷ ಮಾಡಿ ಪರಾರಾ ಕೊಂಡಾಡಿ ಜೀಸತ್ತೆ ನಗರ|| ದೇಹಾಕೋಸ್ವರ ವಾಗಿ ಬಟೆನಾಗಟ್ಟ ನೀನಲ್ಲ ದೆಂನ್ಯಂತ್ರರಂ| ದೆಹಿಯೆಂಬುದಹಲ್ಲಸೆಂನನುಳಷ್ಟೆ ಶ್ರೀ ವಿಷ್ಠಲಿಂಗೇಶ್ವರಾ ||೧೮||

**ವಿಷಯ :** ಶಿವಸ್ತುತಿ.

**ವಿಶೇಷ :** ಕೃತಿ ಸಮಗ್ರ. ಪ್ರತಿ ಶಿಥಿಲ. ಬರೆವಣಿಗೆ ಸ್ಫೋಟಿ. ಇದರೊಂದಿಗೆ ಮಂಗ ಳಾರತಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 228

ಕೆ. ೧೦೦೬/೧೧ **ಇಷ್ಟಲಿಂಗೇಶ್ವರಾಷ್ಟಕ** ವೃತ್ತ
೭.೭" × ೧.೫" ? ?
೨೮-೨೯ ಪತ್ರ ೭ ಪಂಕ್ತಿ ೪೦ ಅಕ್ಷರ

**ಆದಿ :** ಮತ್ತೇಭ ವಿಕ್ರೀಡಿತ ವೃತ್ತ॥
ಪರಮಶ್ರೀ ಗುರುಮೂರ್ತಿ ನಿತ್ಯ ಶಿವಲಿಂಗಾನಂದ ಸುಗ್ನಾ ಸ
ತ್ಕರುಣಾಂಬೋನಿಧಿ ಜಂಗಮಾಘ್ರಿಜಲ ಪೂತಾತ್ಮಂ ಪ್ರಸಾದೋಂನತಾ
ಚಿರ ರುದ್ರಾಕ್ಷಿಮಾನಿತ ಭೂತಿ ನಿಗಮಾಂತಾಪ್ರೋಕ್ತ ಪಂಚಾಕ್ಷರಿ
ವಿಜಿಂನಷ್ಟಾವರಣಾತ್ಮರೂಪ ಸಲಹಾ ಶ್ರೀಯಿಷ್ಟಲಿಂಗೇಶ್ವರಾ॥

**ಅಂತ್ಯ :** ಧರೆಯೊಳ್ವಾಂಶುದಕಂಗಳೊಳ್ಕಣವು ತೀವ್ರತಾಗ್ನಿಯೊಳ್ತ್ರಜಿಪ
ಮರುತಾಕಾರದಿ ಸಂಚಚಾರ ನೀಲವುಹಾಯೋ ಮಾತ್ಮದೊಳ್ಪಂಜಿಪಾ
ಸುರಜಾಪಂ ಚಿರದಂತೆ ನಿಂನ ಪದದೈಕ್ಯಾನಂದವಂ ಪಾಲಿಸಾ
ಕರಕಂಬ ಸ್ಥಿತಮಂತ್ರಪುಂಜ ಮಯನೆ ಶ್ರೀ ಯಿಷ್ಟಲಿಂಗೇಶ್ವರಾ ॥೮॥
ಯಿಷ್ಟಲಿಂಗಾಷ್ಟಕಂ ಪುಣ್ಯಂ ಯಃ ಪಠೇಭಕ್ತಿ ಸಂಯುತಂ
ವಧೂಪಿ ಮುಕ್ತಿಯೋಗಂ ಚಯಿಲಿಂಗಂ ಮಯೇಂ ಭವೇತ್ ಶ್ರೀ ॥೧॥

**ವಿಷಯ :** ಶಿವಸ್ತುತಿ.

**ವಿಶೇಷ :** ಸಮಗ್ರ. ಇದೇಕಟ್ಟಿನಲ್ಲಿ ಷಡ್ವಕ್ತ್ರ(ಸಂ), ಮಂಗಳಾಷ್ಟಕ(ಸಂ), ಗುರು ಸ್ತೋತ್ರದ ತ್ರಿವಿಧಿ ಇತ್ಯಾದಿ ೨೪ ಗ್ರಂಥಗಳಿವೆ.

—ಕೆಆರ್‌ಎಸ್

## 229

ಕೆ. ೧೧೫೭/೬ **ಇಷ್ಟಲಿಂಗೇಶ್ವರಾಷ್ಟಕ** ವೃತ್ತ
೧೪.೩" × ೧.೮" ಮೆಡ್ಲೇರಿ ಶಿವಲಿಂಗ ಸು. ೧೫೦೦
೫೨-೫೩ ಪತ್ರ ೭ ಪಂಕ್ತಿ ೫೨ ಅಕ್ಷರ

**ಆದಿ :** ಶ್ರೀಗುರುವೇ ಗತಿ.
ವಂದೇದೇವ ನಿರಂಜನಂ ಶಶಿಧರಂ ಕಾಮಾರಿ ಸರ್ವೇಶ್ವರಾ
ಮಂದರಗಿರಿವಾಸ ನಿರ್ವಿತ ಶಿವಂ ಜ್ಞಾನೆಂತು ತ್ರೈಸಾಗರಂ
ಇಂದುಶೇಖರ ಪಾರ್ವತೀಶದಮಲಂ ಪಂಚಾಕ್ಷರೀರೂಪಕಾ
ನಂದಿವಾಹನ ಶಂಕರ ಶುಭಕರಂ ಶ್ರೀವಿಷ್ಟಲ್ಲಿಂಗೇಶ್ವರಾ ॥೧॥

**ಅಂತ್ಯ :** ಬಾರೈ ದೇವರದೇವ ಯನ್ನ ಕರದೊಳ್ ಚಿದ್ರೂಪ ಚಿಂತಾಮಣೀ
ಬಾರೈ ಭಾಸ್ಕರಶತ್ರು ಮುಪ್ಪುರಹರಂ ಪಂಚಾಕ್ಷರೀರೂಪಕಾ
ಬಾರೈ ಯನ್ನನು ಪಾಲಿಸೀಗ ಸಲಹೈ ಶ್ರೀಯಿಷ್ಟಲಿಂಗೇಶ್ವರಾ ॥೯॥

**ವಿಷಯ :** ಇಷ್ಟಲಿಂಗದ ಸ್ತುತಿ.

**ವಿಶೇಷ :** ಸಮಗ್ರ. ಶುದ್ಧವಾಗಿದೆ. ಇದರ ಜೊತೆಗೆ ಗುರುಭಕ್ತಾಂಡಾರಿ ಕಾವ್ಯ, ಕಪೋತನ ಚರಿತೆ ಮೊದಲಾದ ೧೩ ಕೃತಿಗಳಿವೆ.

— ಜಿಜಿಎಂ

## 230

ಕೆ. ೧೫೬೯/೧ — **ಈಶ್ವರವಾಕ್ಯ** — ಶ್ಲೋಕ, ಗದ್ಯ

೧೧" × ೧.೬" — ? — ?

೧-೫ ಪತ್ರ — ೮ ಪಂಕ್ತಿ — ೬೦ ಅಕ್ಷರ

**ಆದಿ :** ಸ್ಕಂಧ ಪುರಾಣದಲ್ಲಿ ಚಕ್ರೋದ್ಧರಣದನ್ವಯುವ ಷಣ್ಮುಖದೇವರಿಗೆ ನಿರೂಪಿಸಿದ ಈಶ್ವರ ವಾಕ್ಯ॥ ಗುಧಸ್ಥಾನದಲ್ಲಿ ಕ್ಷೇತ್ರವೆಂಬ ಸಂಜ್ಞೆಯಿಂದ ತಾರಕಾಕೃತಿಯಾಗಿ ಆಧಾರ ಚಕ್ರವಿಹುದು. ಆ ಚಕ್ರ ಚತುಷ್ಕೋಣಾಕಾರ ಚತುರ್ದಳ ನಾಲ್ಕೆಸಳ ಪದ್ಮ ಆ ನಾಲ್ಕೆಸಳುಗಳಲ್ಲಿ ವಶಷಸಯೆಂಬ ನಾಲ್ಕಕ್ಷರ ಅದೂ ಪೀತವರ್ಣ ಬ್ರಹ್ಮಪೂಜಾರಿ ಅಲ್ಲಿಗೆ ಪಂಡಿತಾರಾಧ್ಯರೆ ಆಚಾರ್ಯರು। ಅವರಿಗೆ ಮಲ್ಲಿಕಾರ್ಜುನದೇವರೇ ಪ್ರಾಣಲಿಂಗ.

**ಅಂತ್ಯ :** ಇ ಆಷ್ಟಾವರಣದ ವಾಚ್ಯಕ್ಕೆ ವಾತೂಲಂದೊಳಗಣ ಉತ್ತರ ಭಾಗದ ಏಕಾದಶ ಪಟಲದೊಳಗೆ ಪದಿನೆಂಟು ಶಾಕವುಂಟು. ಅದು ಕಾರಣವಿದು ವಾತೂಲಪ್ರಸಿದ್ಧಂ.

**ವಿಷಯ :** ವೀರಶೈವ ವೇದಾಂತ.

**ವಿಶೇಷ :** ಬರಹ ಚೆನ್ನಾಗಿದೆ. ಪ್ರತಿಯ ಸ್ಥಿತಿ ಉತ್ತಮ. ಇದೇ ಕಟ್ಟನಲ್ಲಿ ಚಕ್ರದ ವಚನ, ಪ್ರಭುವಿನ ಸೃಷ್ಟಿ ಇತ್ಯಾದಿ ಗ್ರಂಥಗಳಿವೆ.

—ಕೆಆರ್‌ಎಸ್

## 231

ಕೆ.ಬಿ. ೬೯೫ — **ಈಶ್ವರೀಕಲ್ಪ** — ಗದ್ಯ

೪.೩" × ೬.೮" — ? — ?

೨೩ ಪತ್ರ — ೧೬ ಪಂಕ್ತಿ — ೧೨ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ॥ ಯಿಶ್ವರಿ ಕಲ್ಪ। ಅದರ ವರ್ನಾಕರಿದೂ॥ ಬಿಳಿಯಾಗಿರ್ತ್ತು। ಯತಿನಾಗ ವಲ್ಲಿಯ ಯತಿ ಯೆಂತಕ್ಕು। ಹುಪ್ಪು। ಕಪ್ಪಾಗಿರ್ಕು। ಕಾಯಿಕತ್ತೆಗಿ ಆಯ ಕಾಯಂತಕ್ಕು। ಅದನು।-ಗುರು। ಪುಷ್ಯದೊಳಗಾಗಲಿ।ಶನಿ। ರೋಹಿಣಿಯೊಳಾಗಲಿ। ಬುಧಾ ಸುರಾದಿಯೊಳಾಗಲಿ ತಂದು ಭಗವತ್ತೆಯ ಮುಂದಿಟ್ಟು। ಅಷ್ಟವಿಧಾರ್ಚನೆಯಿಂದರ್ಚಿಶಿ। ಜಾಗರಮಿರ್ದು। ದಿವ್ಯಮಂತ್ರವಂ ಪಟಿಸೋದು॥

ಅಂತ್ಯ : ೧ ದುಡುತುಕ ಆಸುವಿನ ತುಪ್ಪ ಆಸುವಿ ಹಾಲು ಆರ್ದಪಾವೂ ಆಕಿ ಮಿಶ್ರ ಮಡಿ ೫ ದಿವಸ ಕುಡುಸದು। ಪತ್ಯೆ ಆಲು ಅನ್ನ। ವೆಂಹ ಚಳಕಿಗೆ ಮಳಿ ಚಿಕ್ಯಕೆ।XXಮೆಹ ಚಳಕಿಗ ಬಿಂತಿಚುಳು ತಂದು ಪುಡಿಮಾಡಿ ೧ ಕಸುಕು ಕಪುಯೆಂನ್ನೆ ನಿಂಬೆ ಆಂಣು ವೃತ್ತರಿಶಿ ಯರಡು ವೊಳಿಗ ತಂಬಿಶಿ ಭಿಕಿಸು ವಂತದು ನಿಚ್ಚ ಪತ್ಯ॥

ವಿಷಯ : ವೈದ್ಯ.

ವಿಶೇಷ : ಪ್ರತಿ ಚೆನ್ನಾಗಿದೆ. ಮೋಡಿ ಅಕ್ಷರ.

—ಎಂಪಿಎಂ

## 232

ಕೆ. ೧೧೨೧/೩ **ಉಚಿತ ಕಥೆಗಳು** ಗದ್ಯ

೭.೫" × ೨" ಉತ್ತರದೇಶದ ಬಸವಲಿಂಗ ಸು. ೧೬೦೦

೨೨೭-೨೫೬ ಪತ್ರ ೧೪ ಪಂಕ್ತಿ ೪೨ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ಯಿನ್ನು ಉಚಿತ ಕಥೆಗಳ ಹೇಳುತಿರ್ದ ಪೆಉ। ಭಕ್ತ ಮಾಹೇಶ್ವರರು ಕೇಳಿ ಸಂತೋಷಿಸುವದು ಗುರುಮಹಾತ್ಮೆ॥ ಕುಶಸ್ಥಲವೆಂಬ ಪುರದಲ್ಲಿ ಸ್ವೇತನೆಂಬ ಲಿಂಗಧಾರಿ ಬ್ರಾಹ್ಮಣನಿರಲು ಅವನ ಮಗ ತಿಂಗಳನೆಂಬವ ತೋಟದ ಮಲೆಯ ಬಳಿ ಬಾಳೆಗಳ ಕೊಯಿದು ದುರಾಚಾರಿಯಾಗಿರಲು ಆಮೇಲೆ ಬ್ರಹ್ಮರಾಕ್ಷಸ ಹಿಡಿದುದುಂ ತಂದೆ ಕಂಡು ದುಃಖಿಸುತ್ತಿರಲು

ಅಂತ್ಯ : ಯಿಾ ಕಥೆಗಳು ಸ್ಕಂದಪುರಾಣದೊಳಗಣ ಕಾಶೀಕಾಂಡ ರೇಣುಕಾ ಕಾಂಡ ಕೇದಾರ ಖಾಂಡ ಮತ್ತೆ ಆಸುರ ಖಾಂಡ ವೀರಮಹೇಂದ್ರ ಖಾಂಡ ಯುಗ್ಧ ಖಾಂಡ ಉಪದೇಶ ಖಾಂಡ XX ಉತ್ತರರಾಮಾಯಣ ಮಹಾಭಾರತ ಮೊದಲಾದವರ ಸಾಕ್ಷಿಯ ಕಥೆಗಳು. ಕಲ್ಪಿತದ ಕಥೆಗಳಲ್ಲ ಸತ್ಯ ಉತ್ತರ ದೇಶದಬಸವಲಿಂಗದೇವರು ಹೇಳಿದ ಉಚಿತಕಥೆ ಸಮಾಪ್ತ ಮಂಗಳ ಮಹಾ ಶ್ರೀಶ್ರೀ. ಶ್ರೀಮತು ವಿಭುನಾಮ ಸಂವಚ್ಛರದ ಆರ ಅಮಾವಾಸೆ ಹೋದ ಸಪ್ತಮಿ ಅಯಿತ್ತವಾರ ಯರಡು ತ್ರಾಸೊತ್ತಿಗೆ ಮುಗಿಯಿತು ಮಂಗಳ ಮಹಾಶ್ರೀಶ್ರೀ. ಪೊಸ್ತಕವ ಕಾಸಿಹಿರೆ ತೊಟ್ಟದ್ದೇವರು ಬರದರು ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ಕಥೆಗಳು.

ವಿಶೇಷ : ಸಮಗ್ರ. ಇದರ ಜೊತೆಯಲ್ಲಿ ಬಸವೇಶ್ವರ ಪುರಾಣದ ಕಥಾಸಾಗರ ಮತ್ತು ಭೈರವೇಶ್ವರ ಪುರಾಣದ ಕಾವ್ಯ ಕಥೆಗಳಿವೆ.

— ಜಿಜಿಎಂ

233

ಕೆ. ೧೧೦೩/೫ **ಉಚಿತ ಕಥೆಗೆ ಸೇರಿದ ಗ್ರಂಥ** ಶ್ಲೋಕ
೧೪.೨" × ೨" ಉತ್ತರದೇಶದ ಬಸವಲಿಂಗ ಸು. ೧೬೦೦
೧೫೪-೧೫೮ ಪತ್ರ ೧೩ ಪಂಕ್ತಿ ೯೫ ಅಕ್ಷರ

**ಆದಿ :** ವುಚಿತ ಕಥೆಗೆ ಸೇರಿದ ಗ್ರಂಥ
ಪಿಂಗಳ ಕಣೆ॥ ಶಂಕರಸಂಹಿತಾಯಾಂ॥ ಮುಪರಿಭಾಗೆ॥ ಸೂತಃ॥ ಆಸ್ತೇ ಭೂಮೌಸ್ಮಾ ಮಹಾಪುಣ್ಯಪುರಾಣ ವಿಬುಧಾಶ್ರಯಃ ಶ್ರೀಪರ್ವತ ಇತಿ ಖ್ಯಾತಃ ಸರ್ವಶೈಲೋತ್ತಮೋತ್ತಮಃ ॥೧॥

**ಅಂತ್ಯ :** ತ್ವಮಪಿ ಕಥಯು ಸಧರ್ನುಂ ಭಕ್ತಿಯುಕ್ತಾಯು ಸರ್ವಂ ವಿಹತಮದನ ರಾಗದ್ವೇಷ ಲೋಭೇಂದ್ರಿಯಾಯ ಗುಣಗಣನಿಲಯಾಯ ಪ್ರಾಣಲಿಂಗೈಕ್ಯ ಭಾಜೆ ಗುರುಚರಣ ಸರೋಜಧ್ಯಾನಯುಕ್ತಾಯ ವತ್ಸ ॥೧೬೦॥
ಬಸವೇಶ್ವರನ ಪುರಾಣದ ಕಥೆಗೆ ಸೇರಿದ ಗ್ರಂಥ ೮೯೨ ಭೈರವೇಶ್ವರನ ಕಥೆಗೆ ಸೇರಿದ ಗ್ರಂಥ ೩೪೮ ವುಚಿತ ಕಥೆಗೆ ಸೇರಿದ ಗ್ರಂಥ ೧೬೦ ಅಂತು ೧೭೦೦ಕ್ಕಂ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಕಥೆಗಳಿಗೆ ಸಂಸ್ಕೃತ ಕೃತಿಗಳಿಂದ ಆಧಾರ.

**ವಿಶೇಷ :** ಇದೇ ಕಟ್ಟಿನಲ್ಲಿ ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಪುರಾಣದ ಕಥೆಗಳು, ಬಸವೇಶ್ವರನ ಮತ್ತು ಭೈರವೇಶ್ವರ ಪುರಾಣದ ಕಥೆಗಳಿಗೆ ಸೇರಿದ ಗ್ರಂಥ ಮತ್ತು ಸಪ್ತಕಾವ್ಯ ಗುರುಬಸವನ ಕಾವ್ಯಗಳಿವೆ.

—ಜಿಜಿಎಂ

234

ಕೆ. ೮೭೨/೩ **ಉತ್ತರ ಗೀತೆಯು ಟೀಕು** ಶ್ಲೋಕ, ಟೀಕು
೧೩.೮" × ೨" ಗೌಡಪಾದಾಚಾರ್ಯ ?
೧-೭೬ ಪತ್ರ ೧೧ ಪಂಕ್ತಿ ೬೪ ಅಕ್ಷರ

**ಆದಿ :** ಉತ್ತರಗೀತೆಯು ಗ್ರಂಥ॥ ಶುಭಮಸ್ತು॥
ಪರ: ಪರಸಾ: ಪ್ರಕೃತೇರ ನಾದಿಮೇಕಂ ಸಿವಿಷ್ಟಂ ಬಹುಧಾಗುಣಾಸು। ಸರ್ವಾಲಯಂ ಸರ್ವೆ ಚರಾಚರಸ್ಥಂತ್ವಮೇವ ವಿಷ್ಣುಂ ಶರಣಂ ಪ್ರಪಧ್ಯೆ॥ ಓಂ॥ ಅರ್ಜುನೌವಾಚ॥
(೭ ನೆಯ ಪತ್ರದಿಂದ) ಯಿಾ ಉತ್ತರ ಗೀತೆಯ ಗ್ರಂಥಾರ್ಥವಂನ್ನು ಕಂರ್ನಾಟಕ ಭಾಷೆಯಲ್ಲಿ ಮಾಡಿದ ವ್ಯಾಖ್ಯಾನಾ॥ ವಿವರಾ॥ ಭಗವದ್ಗೀತೆ ಯಲ್ಲಿ ಹೇಳಿದ ತತ್ವಾರ್ಥವಾಖ್ಯಾನ ಸಂಧಾನವನು ಮನೋವಿಕ್ಷೇಪ

ದಿಂದಾ ಮರದು ಅರ್ಜುನನು। ಶ್ರೀಕೃಷ್ಣದೇವರ ಕುರಿತು ಬಿಂನಹಂ ಮಾಡಿದನೂ॥ ಅರ್ಜುನೌವಾಚ॥

**ಅಂತ್ಯ :** ಟೀಕೂ॥ ಯತಃ। ಆವನ ದೆಸೆಯಿಂದ ಭೂತಾನಾಂ। ಪ್ರಾ.... ಉತ್ಪತ್ತಿಯು। ಯೇನ। ಆವನಿಂದ। ಯಿಾಹಂ ಸರ್ವಂ। ಯಿಾ ಯೆಲ್ಲವು। ತತಂ। ವ್ಯಾಪಿಸಲು ಪಟ್ಟಿತು। ತಂ। ಆತನು। ಸ್ವಕರ್ಮಣಾ। ತಂನ ಕರ್ಮದಿಂದ। ಅಭ್ಯಚ್ಯ। ....ದಿಂದತಿ। ಪಡವನು। ೪೬। ಶ್ರೀಯಾನ್ ಸ್ವಧರ್ಮೋವಿಗುಣಃ। ಪರಧರ್ಮಾತ್ಸ್ವನುಷ್ಟಿತಾತ್। ಸ್ವಭಾವವಿಹಿತಂ ಕರ್ಮಕುರ್ವಂನ್ನಾಪ್ನೋತಿ ಕಿಲ್ಬಿಷಂ। ಟೀಕು॥ ಸ್ವನುಷ್ಟಿತಾತ್।-

**ವಿಷಯ :** ವೇದಾಂತ.

**ವಿಶೇಷ :** ಅಸಮಗ್ರ. ೪, ೫, ೧೭, ೧೮, ೧೨, ೧೪, ೧೬ ರಿಂದ ೬೪ ನೆಯ ಕ್ರಮಾಂಕದ ಪತ್ರಗಳಿಲ್ಲ. ಇದೇ ಕಟ್ಟಿನಲ್ಲಿ ಐರಾವತ, ರಂಗನಾಥಕ್ಷೇತ್ರ ಮಹಿಮೆ ಎಂಬೆರಡು ಗ್ರಂಥಗಳೂ ಇವೆ

—ಕೆಆರ್‌ಎಸ್

## 235

ಕೆ. ೧೦೬೨ **ಉತ್ತರ ರಾಮಾಯಣ** ಭಾಮಿನೀಷಟ್ಪದಿ

೧೦.೫" × ೧.೪" ತಿರುಮಲೆವೈದ್ಯ ಸು. ೧೬೫೦

೩೯ ಪತ್ರ ೭ ಪಂಕ್ತಿ ೪೪ ಅಕ್ಷರ

**ಆದಿ :** ಶ್ರೀ ಗೋಪಾಲಕೃಷ್ಣಾಯ ನಮಃ XXX ಉತ್ತರ ರಾಮಾಯಣದ ಪುಸ್ತಕ ಬರಉದಕ್ಕೆ ಶುಭಮಸ್ತು XXX

ಶ್ರೀಮದನುಪಮ ನಾಮ ಸದ್ಗುಣ
ಧಾಮ ಜಿತಸಂಗ್ರಾಮ ದಶಶಿರ
ಕಾಮ ಮದಹರ ಸೋಮಧರ ಸೀತಾಮನಪ್ರೇಮ
ತಾಮರಸಭವಧಾಮನ ತಸು
ತ್ರಾಮ ಶೌರ್ಯೋದ್ಧಾಮ ದೇವಲ
ಲಾಮ ಪಾಲಿಸು ಭೀಮಜಲನಿಸ್ಸೀಮ ರಘುರಾಮ ॥೧॥
ಆದಿಯಲಿ ನಾರದನು ಪೇಳಿದ
ನಾದಿಕವಿ ವಾಲ್ಮೀಕಿಗವನದ
ನಾದಿವಿಡಿದುಸುರಿದನು ರಾಮಾಯಣದ ಸತ್ಕೃತಿಯ
ಮೇದಿನಿಗೆ ಪೆಸರಾದ ಗವಿಯಣ
ಮೇದಿನೀಸುರಸೂನು ಪೇಳ್ದನು
ಮೇದಿನಿಗೆ ಕಂನಡಿಸಿ ತಿರುಮಲೆವೈದ್ಯನೀ ಕೃತಿಯ ॥೬॥

**ಅಂತ್ಯ :** ಬೀಳುಕೊಡು ನಿಲಾತ ಕವಚ ಖ
ಳಾಳಿಯನು ದಶವೌಳಿ ಸಡೆದಿದು
ಕಾಲಕೇಯ ನಿವಾಸವೆಂದೆನಿತು ಸತ್ಪುರವರಕೇ
ಕಾಳಗವ ತೊಡಗಿದನು ಕೊಂದೆನು
ಕಾಳದನುಜಚತುಶತವನು
ಬ್ಬಾಳುತನವಿಂನ್ನೆಂತೊ ರಾಕ್ಷಸರಾಜಕುಂಜರನಾ ||೬೬||
ಘಾತಿಸಿದನ್ನೈ ಶೂಪ್ಪನಖಿಯಧಿ
ನಾಥನೆನಿಸುವ ಕಾಳಕೇಯ....

**ವಿಷಯ :** ಉತ್ತರರಾಮಾಯಣದ ಕಥೆ.

**ವಿಶೇಷ :** ಅಸಮಗ್ರ. ಪತ್ರಗಳು ಅಸ್ತವ್ಯಸ್ತ.

—ಜಿಜಿಎಂ

## 236

ಕೆ. ೧೮೬೪/೧ **ಉತ್ತರ ರಾಮಾಯಣ** ಭಾಮಿನೀಷಟ್ಪದಿ
೨೦.೧″ × ೩.೧″ ತಿರುಮಲೆವೈದ್ಯ ಸು. ೧೬೫೦
೧-೪೯ ಪತ್ರ ೧೦ ಪಂಕ್ತಿ ೯೦ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ|| XXX ಉತ್ತರರಾಮಾಯಣಾ ಬರೆಯು
ವದಕ್ಕೆ ನಿರ್ವಿಘ್ನಮಸ್ತು||
ಶ್ರೀಮದನುಪಮನಾಮ ಸದ್ಗುಣ
ಧಾಮ ಜಿತಸಂಗ್ರಾಮ ದಶಶಿರ
ಭೀಮ ಮದಹರ ಸೋಮಧರ ಸೀತಾಮನಪ್ರೇಮಾ
ತಾಮರಸ ಭವಧಾಮ ನತ ಸೂ
ತ್ರಾಮ ಶೌರ್‍ಯೋದ್ದಾಮ ದೇಪಲ
ಲಾಮ ಪಾಲಿಸು ಭೀಮಬಲನಿಸ್ಸೀಮ ರಘುರಾಮ ||೧||
ಆದಿಯಲಿ ನಾರದನು ಪೇಳಿದು
ನಾದಿಕವಿ ವಾಲ್ಮೀಕಿಗವನದ
ನಾದಿವಿಡಿದುಸುರಿದ ರಾಮಾಯಣದ ಸತ್ಕೃತಿಯಾ
ಮೇದಿನಿಗೆ ಪೆಸರಾದ ಗವಿಯಣ
ಮೇದಿನೀಸುರಸೂನು ಪೇಳ್ದನು
ಮೇದಿನಿಗೆ ಕಂನ್ನಡಿಸಿ ತಿರುಮಲೆವೈದ್ಯನೀ ಕೃತಿಯಾ ||೬||

**ಅಂತ್ಯ :** ಅಕ್ಷಯಾತ್ಮ ವಿಪಕ್ಷ ದಾನವ
ಶೀಕ್ಷ ದುಷ್ಕೃತರೂಕ್ಷ ಸುಮನ
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಗಣವಕ್ಷಾ
ಪಕ್ಷಿರಥ ಕಮಲಾಕ್ಷ ಕಿನ್ನರ
ಯಕ್ಷ ಸುರಮುನಿರಕ್ಷ ಸುಜನಾ
ಪೇಕ್ಷ ನರಹರಿ ಯಕ್ಷ ಪಾಲಿಸು ಮೋಕ್ಷಪದದಕ್ಷಾ ೨೫

ಅಂತು ಸಂಧಿ ೨೦ಕ್ಕಂ ಪದನೂ ೧೦೦೦ ಕ್ಕಂ ಮಂಗಳ ಮಹಾಶ್ರೀ·XXX ಸರ್ವಜಿತುನಾಮ ಸಂಪತ್ಸರದ ಚೈತ್ರ ಶು ೫ ಭಾನುವಾರದಲ್ಲೂ ಶ್ರೀರಾಮ ಚಂದ್ರನ ಪ್ರಿಯಭಕ್ತನಾದ ಹೆಬೂರ ತಾಲೋಕು ಚೀಟನಹಳಸ್ತಳದ ಜೋಯಿಸರು ದೊಡ್ಡತಂಮ್ಮ ಭಟರ ಪೌತ್ರ ರಾಮಾಭಟ್ಟರ ಪುತ್ರನಾದ ವೆಂಗಟಭಟ್ಟನು ಸಂಪೂರ್ನಾಮಾಡಿ ಬರದ ಷಟ್ಪದೀ ಆದಿಕಾವ್ಯ ವಾಲ್ಮೀಕಿ ಕನ್ನಡದ ರಾಮಾಯಣದಲ್ಲಿ ವುತ್ತರಾಮಾಯಣದ ಪಸ್ತುಕಕ್ಕೆ ಜಯ ಮಂಗಳ ಮಹಾಶ್ರೀ.

**ವಿಷಯ :** ಉತ್ತರ ರಾಮಾಯಣದ ಕಥೆ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟನಲ್ಲಿ ವೈರಾವಣ ಕಾಳಗ ಎಂಬ ಇನ್ನೊಂದು ಗ್ರಂಥವಿದೆ.

—ಕೆ ಆರ್ ಎಸ್

## 237

| ಕೆ.ಬಿ. ೬೩೦/೨ | **ಉದಯುದ ವಾರ್ಧಕ** | ವಾರ್ಧಕ |
|---|---|---|
| ೬″ × ೪″ | ? | ? |
| ೩ ಪುಟ | ೧೫ ಪಂಕ್ತಿ | ೧೧ ಅಕ್ಷರ |

**ಆದಿ :** ವುದಂಪುದವರ್ದಿತ ಬರವದಕ್ಕೆ ಶುಭಮಸ್ತು।
ಯೇಳು ಗಿರಿ ಶರವಣಾ। ಯೇಳು ವುರಗಭರಣಾ।
ಯೇಳು ಗಂಣಧರನೆ। ಮಂಂನ್ಮಥನ ಸಂಹ್ವರನೆ।
ಯಾಳನುರೈಪತು ಅಮರಗಣಂಗಳು ನಿಂಮ
ಲಿಂಗದೋಲಗಕೆ ಬಂದರೇಳೋ ॥ಪ॥

**ಅಂತ್ಯ :** ಯೇಳು ಕಲನ ಕೊಂದ ಶೂಲ ಪಾಣಿಯೊಯೊಳು। ಯೊಳು
ಮರನ ಸುಟ್ಟ ಬಾಳಾಕ್ಷ ವುಳವನೆಯೊಳು ಸಿರರುಂಡ ಮಲಿಯಾ
ಧರಿದತನೆ। ಯೊಳು ಗುರುಸಿದ್ಧರಾಮಾ ಶ್ರೀ॥ ಶ್ರೀ॥ ॥೫॥

**ವಿಷಯ :** ಶಿವನ ಸುಪ್ರಭಾತ.

**ವಿಶೇಷ:** ಒಟ್ಟು ೫ ನುಡಿಗಳಿವೆ. ಶಿಥಿಲಪ್ರತಿ, ಕಾಗದವನ್ನು ಹುಳುತಿಂದು ರಂಧ್ರ ಬಿದ್ದಿದೆ. ಇದರೊಡನೆ ನಂದಿಛಂದ ರ್ಣಾವ ಎಂಬ ಅಸಮಗ್ರ ಕೃತಿಯೂ, ಕೊನೆಯಲ್ಲಿ ಜ್ಯೋತಿಷ ಮತ್ತು ಮಂತ್ರಕ್ಕೆ ಸಂಬಂಧಪಟ್ಟ ಮೂರು ಪುಟಗಳೂ ಶುದ್ಧ ಪತ್ರಗಳೂ ಇವೆ.

—ಎಸ್ ಎನ್ ಕೆ

## 238

| ಕೆ. ೧೧೬೩/೩ | **ಉದಯರಾಗ** | ಕೀರ್ತನೆ |
|---|---|---|
| ೧೭" × ೧.೫" | ಕನಕದಾಸರು | ಸು. ೧೫೫೦ |
| ३೧-३३ ಪತ್ರ | ೪ ಪಂಕ್ತಿ | ೭೮ ಅಕ್ಷರ |

**ಆದಿ:** ಶ್ರೀ ಗುರುಭ್ಯೋ ನಮಃ। ಉದೇರಾಗಾ। ರಾಗ ಭೂಪಾಳಿ॥ ವಾಸುದೇವಾಯ ನಮೋ। ವಾಗೀಶಾದ್ಯಖಿಳ। ಮುನಿನಮಿತ ಪಾದಾಂಭೋಜ। ಭೂಸುರಃಪ್ರಿಯ ಭಜಿತ ಪೋಷಕನೆ ರಕ್ಷಿಪುದು। ಕೇಶವ ಮುಕುಂದ ನೊಲಿದು॥ ॥ಪಲ್ಲ॥

ಖುಂಡಲಪುರದೊಳಗೆ। ದುರುಳ ದುರ್ಯೋಧನನು ಪಾಂಡು ನಂದನರೊಡನೆ। ಕಪಟ ದ್ಯೂತವನಾಡಿ। ಗಂಡರೈವರ ಮುಂದೆ। ದ್ರುಪದ ನಂದನೆ ಶರಗ ಭಂಡ ದುಶ್ಯಾಸನಂ ಪಿಡಿದು ॥೧॥

**ಅಂತ್ಯ:** ಮಂಗಳಂ ಮುರಹರಗೆ ಮಂಗಳಂ ಭವಹರಗೆ। ಮಂಗಳಂ ಶಿರಿಧರಗೆ। ಮಂಗಳಂ ಕರುಸಾಂತ ಕರುಣನಿಧಿಗೇ। ಮಂಗಳಂ ತರಳೆ ಅಭಿಮಾನವನು ಕಾಯ್ದವಗೆ। ಮಂಗಳಂ ಕರಿವರದ ಕಮಲಸಿಧಿಗೇ। ಮಂಗಳಂ ಕಾಗಿನೆಲೆಯಾದಿ ಕೇಶವರಾಯ ಮಂಗಳಂ ಗಿರಿವಾಸನೇ॥ ಹರಿಯೇ ವಾಸುದೇವಾಯಾ॥ ಶ್ರೀ ಶ್ರೀ॥ ॥೧೫॥

**ವಿಷಯ:** ಶ್ರೀ ಹರಿಯ ಸ್ತುತಿ.

**ವಿಶೇಷ:** ಪತ್ರಗಳು ಚೆನ್ನಾಗಿದ್ದು, ಅಕ್ಷರಗಳು ಸುಂದರವಾಗಿವೆ. ಈ ಕಟ್ಟಿನಲ್ಲಿ ಬಸವ ಚರಿತ್ರೆ ಮೊದಲಾದ ಇನ್ನೆರಡು ಕೃತಿಗಳಿವೆ.

—ಎಂಪಿಎಂ

## 239

| ಕೆ. ೧೨೭೯/೯ | **ಉದಯರಾಗ** | ಷಟ್ಪದಿ |
|---|---|---|
| ೯.೩" × ೨" | ? | ? |
| ३೦ನೆಯ ಪತ್ರ | ೮ ಪಂಕ್ತಿ | ३೫ ಅಕ್ಷರ |

**ಆದಿ:** ಮನ್ಮಥನ ಸಂಹರನೆ ಎಳುನೂರೆಪ್ಪತ್ತಮರಗಣಂಗಳು ನಿಂಮ ವಾಲಗಕೆ ಬಂದರೋಳೊ ॥ಪಲ್ಲ॥

ಬಸವಂಣ ಚಂನಬಸವಂಣ ಮಡಿವಾಳ್ಳೆಯ
ಕುಶಲಮತಿ ಕಿಂನರಿ ಬ್ರಂಹ್ಮೈಯ್ಯ ಕಲಹಖ್ಯಾತ
ವಸುಧೆಯೊಳು ಕೆಂಭಾವಿ ಭೋಗಣ್ಣ ಸತ್ಯಣ್ಣ ಮಂಚಣ್ಣ ರೇಚಣ್ಣನೂ
ಮುಸುಡಿಯ ಚವುಡೈಯ್ಯ ಮುದನೂರದಾಸ್ಮೈಯ್ಯ
ದಸುರೈಯ್ಯ ಧರ್ಮೈಯ್ಯ ಕವುಲಿಯ ಬ್ರಂಹ್ಮೈಯ್ಯ
ಹಸಿಯಮಸ್ತಕದ ಮಾಚ್ಚೈಯ್ಯಗಳು ನಿಂಮ ವಾಲಗಕೆ ಬಂದರೇಳೋ ||೧||

**ಅಂತ್ಯ :** ಏಳು ಭಕ್ತರಹೃದಯಪಂಕಜ ದಿವಾಕರನೆ
ಏಳು ಶರಣಾನಂದಾಂಬುಧಿ ಸುಧಾಕರನೆ
ಏಳು ಭವರೋಗವೈದ್ಯನೆ ಭಕ್ತವತ್ಸಲನೆ ಯೇಳಯ್ಯ ಬೆಳಗಾಯಿತು
ಏಳು ಕಾಲನ ಕೊಂದ ಶೂಲಪಾಣಿಯೆ ನೀವು
ಏಳು ಮಾರನ ಸುಟ್ಟ ಭಾಳಾಕ್ಷವುಳ್ಳವನೆ
ಏಳು ಶಿರರುಂಡಮಾಲೆಯ ಧರಿಸಿದಾತನೆ ಗುರುಸಿದ್ಧರಾಮನೇಳೋ ||೫||

**ವಿಷಯ :** ಶರಣರ ಸ್ತುತಿ.

**ವಿಶೇಷ :** ಇದೇ ಕಟ್ಟಿನಲ್ಲಿ ಲಿಂಗಾರ್ಚನೆಯ ಕ್ರಮ, ಗುರುಸಾಂಪ್ರದಾಯದ ಸ್ತೋತ್ರ ಇತ್ಯಾದಿ ೯ ಕೃತಿಗಳಿವೆ.

—ಜಿಜಿಎಂ

## 240

ಕೆ. ೧೫೧೬/೧ | **ಉದಯರಾಗ** | ಹಾಡು
೬" × ೧.೭" | ? | ?
೧-೧೨ ಪತ್ರ | ೯ ಪಂಕ್ತಿ | ೨೪ ಅಕ್ಷರ

**ಆದಿ :** ಶ್ರೀ ವೀತರಾಗಾಯ ನಮಃ|| ವುದಯ ರಾಗ|| ಧನ್ಯಾಸಿ||
ಕೊಲೆಯನೃತ ಕಳವು ಪರದಾರವತಿಕಾಂಕ್ಷೆಯಂ
ಸಲೆ ವಿಸರ್ಜಿಸಿ ಪಂಚಪರಮೇಷ್ಟಿಗಳ ಮನದಿ
ಒಲವಿನಿಂ ಧ್ಯಾನಿಸೈ ಸ್ವರ್ಗಾದಿ ಮೋಕ್ಷಗಳ
ಸುಲಭದಿಂ ಪಡೆಯಡೆ ಭವ್ಯಾ|| ||ಪಲ್ಲ||
ಕೊಲೆಯೆಂಬುದೀಗ ತನ್ನಯ ಕೊಲೆಗೆ ಕೊಟ್ಟ ಬೆಲೆ
ಕೊಲೆ ತಂನ ಕೊರಳ್ಳೆದೆಯ ಬಿಡದೊತ್ತಿಕೊಲುವ ಛಲೆ||

**ಅಂತ್ಯ :** ಸುರಕುಜದ ಪುಷ್ಪಫಲಗಳ ತಂದು ಪುಜ್ಜಂತ
ಗಿರಿಯ ವನದೇವತೆಯರ್ಬೈದಿ ನೀಸಿರುವಮಾ
ಮರದಡಿಯೊಳಗೆ ನಿಂದು ದೆಸೆದೆಸೆಯ ನೋಡಿ ನಿಮ್ಮ

ಬರವ ಹಾರೈಸುತಹರಿXXX
ಯೇಜಿತ ಕೂಷ್ಮಾಂಡಿನಿ ತಾಯೆಯೇಳು ಬೆಳಗಾಯ್ತೂ ||೫||

**ವಿಷಯ :** ಪಂಚಾಣುವ್ರತ, ಷೋಡಶಭಾವನೆ, ತೀರ್ಥವಂದನೆ, ತೀರ್ಥಯಾತ್ರೆ, ನಾಮಾವಲಿ, ಶ್ರಾವಕನೆಲೆ, ಕೂಷ್ಮಾಂಡಿನಿ ಉದಯರಾಗಗಳಿವೆ.

**ವಿಶೇಷ :** ಇದೇ ಕಟ್ಟಿನಲ್ಲಿ ತಾರಾತಂಬೂರ ನಗರವರ್ಣನೆ ಮತ್ತು ಜೈನನಿತ್ಯವಿಧಿಗಳಿವೆ.

—ಜಿಜಿಎಂ

## 241

ಕೆ. ೧೮೦೩/೧೦ **ಉದಯರಾಗ** ಹಾಡು
೧೦.೯" × ೨" ? ?
೧ ಪತ್ರ ೭ ಪಂಕ್ತಿ ೫೨ ಅಕ್ಷರ

**ಆದಿ :** ಶ್ರೀಮದಾದಿತೀರ್ಥಂಕರಾಯ ನಮಃ|| ಉದೆರಾಗಾ|| ಶ್ರೀರಸ್ತು||
ಜಿನನಾಮಗಳನು ಕಾಲತ್ರಯದೊಳೊಲವಿನಿಂ
ಮನಮವಚನಕಾಯ ಪರಿಶುದ್ಧಿಯಿಂ ಶ್ರದ್ಧೆಯಿಂ
ಘನತರವೆನಿಪ ಮಹಾಭಕ್ತಿಯಿಂ ಯುಕ್ತಿಯಿಂ
ನೆನೆ ಮುಕ್ತಿಪದವ ಪಡೆವೆವೈ ||೫||

**ಅಂತ್ಯ :** ಶಾಂತ ಶಾಂತಾದಿ ಗುಣಸಂಪೂರ್ಣ ಬಹುವಿಘ್ನ
ಶಾಂತಿಕರ ಬಹುದೋಷ ಶಾಂತತರ ಶಾಂತೀಶ
ಶಾಂತಾತ್ಮಾ ಶಾಂತರೂಪಾ
ಶಾಂತಿವಿಧಿಮುಖ ಮುಖ್ಯವೆಂದಿಂತು ನೂರೆಂಟು
ಶಾಂತಿಕರನಾಮಗಳ ಭಜಿಸೆ ಶಾಂತ್ಯಾರ್ತದಿಂ
ಶಾಂತಮನನಾಗಿ ಸದ್ಭಕ್ತಿಯಿಂದೆರೆಯೂರಾ
ಶಾಂತಿಜಿನ ಜಯು ಜಯುವೆಂದೂ ||೫||

**ವಿಷಯ :** ತೀರ್ಥಂಕರರ ಸ್ತುತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಸೋಮೇಶ್ವರ ಶತಕ ಮುಂತಾದ ೧೨ ಕೃತಿಗಳಿವೆ.

—ಜಿಜಿಎಂ

## 242

ಕೆ. ೧೮೮೪/೬ **ಉದಯರಾಗ** ಹಾಡು
೧೭.೩" × ೨.೧" ? ?
೩ ಪತ್ರ ೭ ಪಂಕ್ತಿ ೭೫ ಅಕ್ಷರ

ಆದಿ : ಶಿವಪಥದ ಪುದೆರಾಗಾ||
ಶಿವನೆಯೇಳ್ಳೆಯ ಬೆಳಗಾಯಿತೂ||
ಯೇಳು ಬೆಳಗಾಯೆತೆನ್ನೊಡೆಯ ದೇವರದೇವ ಬಹಳ ಲೋಚನನು ಭಾಗಿ
ರತಿಯ ಪ್ರಾಣೇಶ
ನೀಲಕಂಠ ನಿರ್ಮಳ ನಿಂಮ್ಮ ನಂಬಿದೆನೀಶ ಪಾಲಿಸ್ಯೆ ಪರಮೇಶನೇ ||ಪ||
ಉರಗಕುಂಡಲ ಧರಿಸು ಉಮೆಯ ತೊಡೆಯೊಳಗಿರಿಸು
ಶಿರಮಾಲೆಗಳಪಡಿಸು ಶಿವಶರಣನು ತರಿಸು
ಕರಿದೈತ್ಯನುತ್ತರಿಸು ಕಾರುಣ್ಯಮೂರ್ತಿಯೆಂದೆನಿಸು
ಸರಸ ಸದ್ಗುಣವಿಲಾಸ ಚಂದ್ರಮೌಳೀಶಾ ||೧||

ಅಂತ್ಯ : ಪುದಯಸಮಯದೊಳಿಂತಃ ನೂರೆಂಟುನಾಮವನು
ಪದುಳದಿಂದೋದಿ ಕೇಳ್ದವರ್ಗೆ ಶಂಭುಲಿಂಗನ ಕರು
ಣದಿಂ ಕೊರತೆಯಿಲ್ಲದೆ ಸಕಲಸಂಪದದೊಳೊಂದಃಗೂಡಿ
ಸದಮಲಗ್ನಾನ ಸದ್ಭಕ್ತಿಯೊಳು ಮೇಲೆ ಮೇ
ಲೊದಗಿ ಕೈಸಾರುತಿಹದಿಹದಲ್ಲಿ ಪರದೊಳೊಂದಿ ನಿಜಗಣ
ಪದದೊಳಿಹ ಮುಕ್ತಿ ದೊರಉದಿದು ಸತ್ಯವೆಂದೂ ಶ್ರೀ ಶ್ರೀ ||೫||

ವಿಷಯ : ಶಿವನ ನೂರೆಂಟು ನಾಮಗಳು

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಸರಳೆ ಮುಂತಾದ ೮ ಕೃತಿ
ಗಳಿವೆ.

—ಜಿಜಿಎಂ

## 243

ಕೆ.ಎ. ೬೯೯/೮ **ಉದಯರಾಗ** ವಾರ್ಧಿಕ
೬" × ೮.೫" ? ?
೨ ಪತ್ರ ೨೮ ಪಂಕ್ತಿ ೨೨ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ|| ಉದೆರಾಗದ
ವಾರ್ಧಿಕ ಮಂಗಳಾತ್ಮಕನೆ ಮಾಯಂಗನ ಗೆಲಿದನೆ
ಹಿಂಗದೆ ನೆನೆವರ ಜಡವ ನೀಡಾಡುವನೆ
ಜಂಗುಳಿ ದೈವಂಗಳೋಡಿಯಕೊಟ್ಟುರ ಬಸವಲಿಂಗನೊಲ್ಲಿದು ಪವಡಿಸ||ಪ||
ರವಿಕಿರಣ ಪಸರಿಸಿತ್ತು ಕುಮುದಗಳು ಅರಳಿದವು
ಅವರ ಅವರ ಭಾಸಿಯಲ್ಲಿ ಪಕ್ಷಿಗಳು ಉಲ್ಲಉತ್ತಹವೆ
ಸಿವ ನಿಂಮ ಭಜಿಸಲ್ಕೆ ಮಂಕ್ಕುಂದ ಭಂದಿಹನೆ| ಆಪದಾನಿ ಸ್ವಮಿ
ಪರಾಕು||

ವಿವತ್ತಿಯರು ಉಮೆ ಗಂಗೆ ವಿಮುತ್ತಿಯಗ್ಗಣಿಯ
ಹವಣಿಸತ್ತಂದಿಹರೆ ನಿಂಮ್ಮ ಮೊಖಸು ಜನಕ್ಕೆ
ಭವರೊಗ್ಯವೆದ್ಯನೆ ಶಿವಪೂಜೆ ಮಾಡೇಳು ಶಿವಗಣಂಗಾಳು ಬಂದಾರೆ ||೧||

ಅಂತ್ಯ : ಯಿಷ್ಟರ್ಥಗಳನೀವ
ಪಾಸು ನೀವಾಹುವೆಂದು
ಕಟ್ಟಿಸಿಥ ತಉಪ ಮಗುಟದ ಹಿರಿಯರಾರೆಂದು
ಅಷ್ಠಾಥಿರೆನೆ ಭಕ್ತಾದಿಗಳು ಬಂದಿದಾರೆ
ಕೊಟ್ಟೂರ ಬಸವಲಿಂಗ
ಬಿಟ್ಟು ಹೋಹಥ ದುರಿತ ಕಾಂಡ ಮಂತ್ರದೀ ನಿಂಮ
ಬಿಟ್ಟಗಾನು ಹಾಡುವ........
ಸ್ರಿಷ್ಠಿ ಶ್ರೀ ಗಿರಿಯ್ಯ ಕೈಲ್ಲಾಸದಿಂದಿಳಿದೆ
ದ್ರುಷ್ಯ ಮುರುತ್ತಿನಲ್ಲದು ಪವಡಿಸಿ ||೭||

ವಿಷಯ : ಶಿವ, ಪಾರ್ವತಿ ಮುಂತಾದವರ ಸ್ತುತಿಗಳು.

ವಿಶೇಷ : ಶಿಥಿಲಪ್ರತಿ, ಸಮಗ್ರಕೃತಿ. ಮೋಡಿ ಅಕ್ಷರ. ಇದರೊಂದಿಗೆ ಹಾಡುಗಳು ಮುಂತಾದ ಕೃತಿಗಳಿವೆ.

— ಎಂಪಿಎಂ

## 244

| ಕೆ. ೯೯೪/೧೨ | **ಉದಾಹರಣಗದ್ಯ** | ಗದ್ಯ |
|---|---|---|
| ೮" × ೨.೨" | ಪಾಲ್ಕುರಿಕೆ ಸೋಮನಾಥ | ಸು. ೧೧೯೫ |
| ೪೮-೫೧ ಪತ್ರ | ೧೦ ಪಂಕ್ತಿ | ೪೫ ಅಕ್ಷರ |

ಆದಿ : ವುದಾರಣಗದ್ಯ
ಜಯತು ಬಸವರಾಜಃ
ಪ್ರಾಣಲಿಂಗಾಂತಪೂಜಃ
ಶರಣದಿವಿಜಭೂಜಃ
ಸ್ಮೇರಸಂವಿತ್ಸರೋಜಃ
ಗಣಪಪದಧೀನಃ
ಖ್ಯಾತದಾನಾ ಪ್ರಧಾನಃ
ಸರಸ ಮಹಿತಗಾನಃ
ಸ್ವಾನುಭೂತ್ಯೈಕಮಾನಃ

ಗದ್ಯ: ಅಪಿಚ ಪುರಾತನ ನೂತನ ಶಿವಗಣಪಾದ್ಮೋದಕ ಪರಿಲಸದಭಿಷೇಕಃ

**ಅಂತ್ಯ :** ಶ್ರೀ ಬಸವರಾಜ ಗುಣಮಣಿ ಖಚಿತಂ
ಜಯತಾತ್ಸುವರ್ಣಮಯಮೇತತ್
ಸೋಮ ಸುಕವಿನಾರಚಿತಂ ಹೃದಯಾಭರಣಂ
ಸದಾಮುದಾಹರಣಂ॥ವುದಾರಣಗದ್ಯ ಸಮಾಪ್ತ ಮಂಗಳ ಮಹಾಶ್ರೀಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಇದರಲ್ಲಿ ಬಸವಸ್ತೋತ್ರ ತ್ರಿವಿಧಿಯೇ ಮೊದಲಾದ ೨೭ ಗ್ರಂಥಗಳಿವೆ. ೮೪-೧೧೦ ಪತ್ರಗಳಿಲ್ಲ.

—ಜಿಜಿಎಂ

## 245

ಕೆ. ೧೫೬೯/೪ **ಉದ್ಧರಣೆ ಪಟಲಗಳು** ಗದ್ಯ
೧೧" × ೧.೬" ? ?
೨೫-೭೬ ಪತ್ರ ೮ ಪಂಕ್ತಿ ೬೦ ಅಕ್ಷರ

**ಆದಿ :** ಶ್ರೀ ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯರಪ್ಪ ಆದ್ಯರ ಅನುಮತ ದಿಂದುದ್ಧರಿಸಿದ ಕುಟಿಲಕುಹಕ ಮಂತ್ರಂಗಳಲ್ಲದ ಶಿವಜ್ಞಾನಸಾಧನವಪ್ಪ ಶಿವಮಂತ್ರನ್ಯಾಸ ಶಿವತತ್ವಸ್ಥಾಪಿತ ಶಿವಲಿಂಗಾಂಗ ಸಂಬಂಧ ಪ್ರತಿ ಪಾದಾಕಾಗಮ ಗ್ರಂಥಾರ್ಥ ವಾಚ್ಯಂಗಳಿಂ ಕೆಲವು ವಚನಂಗಳಿಂ ಸಂಗ್ರಹಿ ಸಿದ ಉದ್ಧರಣೆಯ ಪಟಲವಿದು ಶಿವಲಿಂಗಾಂಕಿತ ಶಾಸನವೆಂದು ಶಿವಶರಣರ ವಧರಿಪು। ಪ್ರಥಮದಲ್ಲಿ ಅನಾದಿ ಭಕ್ತನ ಉದ್ಧರಣೆಯ ಸಂಬಂಧ ಸರ್ವ ಶೂನ್ಯ ನಿರಾಲಂಬ ವಸ್ತುವಿನ ಚಿನಾದಬಿಂದು ಸ್ವರೂಪವಾದ ಲಿಂಗ ಜಂಗಮವ ಗರ್ಭೀಕರಿಸಿಕೊಂಡಿರ್ಪ ಚಿತ್ಕಲಾಸ್ವರೂಪವಾದ ಅನಾದಿ ಭಕ್ತನ ನಿಲವೆಂತೆಂದೊಡೆ

**ಅಂತ್ಯ :** ಜ್ಞಾನ ಪ್ರಸಾದವೆಂಬಂಗತ್ರಯ ಸರ್ವ ಶೂನ್ಯ ನಿರಾಲಂಬ ಸ್ಥಲವೊಂದು। ಅಂಗಸ್ಥಲ ನಾಲ್ವತ್ತುನಾಲ್ಕು ಲಿಂಗಸ್ಥಲ ಐವತ್ತೇಳು ಯಿಂತೀ ನೂರೆಂಟು ಸ್ಥಳ ಕುಳ ಸ್ವರೂಪವಾಗಿಹವು। ಯಿಂನ್ನ ಚೌಕಮಧ್ಯಸ್ತವಾದ ಅಷ್ಟ ಮೂರ್ತಿ ಅಷ್ಟತನು ಅಷ್ಟಮಂತ್ರ ಅಷ್ಟಾಂಗಲಿಂಗ ಸಕಲ ಸಂಪತ್ತಿನಿಂ ಮತ್ತ ಮೂರು ಮೂರು ತ್ಯರನಾದ ಅಷ್ಟಾವರಣ ಸ್ವರೂಪವಾಗಹವು ಯಿಂತೀ ಸರ್ವಸಿದ್ಧಿಕರಮಾದ ಜ್ಞಾನಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ಲಿಂಗಾಂಗಗಳ ಸಕೀಲು ವಿವರ. ವೀರಶೈವಸಿದ್ಧಾಂತ.

**ವಿಶೇಷ** : ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಈಶ್ವರವಾಕ್ಯ, ಲಿಂಗಸೂತ್ರದ ವಚನ ಮೊದಲಾದ ಗ್ರಂಥಗಳಿವೆ.

—ಕೆಆರ್‌ಎಸ್

## 246

ಕೆ. ೧೫೬೨/೫ **ಉದ್ಧರಣೆ ಪಟಲಗಳು** ಗದ್ಯ

೧೩.೫" × ೨.೨" ? ?

೭೮-೯೭ ಪತ್ರ ೧೮ ಪಂಕ್ತಿ ೧೧೫ ಅಕ್ಷರ

**ಆದಿ** : ಯಿದು ಕಾಯಾರ್ಪಣೋದ್ಧರಣೆ XXಯಿದು ಅಱುವತ್ತಾಱು ತೆರದ ರ್ಪಣೋದ್ಧರಣೆ XXಯಿದು ಮೂವತ್ತಾಱು ತೆರದ ವಿಃಶ್ರಾರ್ಪಣೋ ದ್ಧರಣೆ XXಯಿದು ನಾಲ್ವತ್ತೆಂಟು ತೆರದರ್ಪಣೋದ್ಧರಣೆXX
ಶ್ರೀಗುರು ಬಸವಲಿಂಗಾಯ ನಮಃ॥ ಶ್ರೀ ವೀರಶೈವಸಿದ್ಧಾಂತ ಸ್ಥಾಪನಾ ಚಾರ್ಯರಪಾದ್ಯರ ಅನಮತದಿಂದುದ್ಧರಿಸಿದ ಕುಟಿಲ ಕುಹಕಯಂತಂಗ ಳಲ್ಲದ ಶಿವಜ್ಞಾನಸಾಧನವಪ್ಪ ಶಿವಮಂತ್ರನ್ಯಾಸ ಶಿವತತ್ವ ಸ್ಥಾಪಿತ ಶಿವ ಲಿಂಗಾಂಗ ಸಂಬಂಧ ಪ್ರತಿಪಾದಕಾಗಮ ಗ್ರಂಥಾರ್ಥ ವಾಚ್ಯಂಗಳಿಂ ಕೆಲವು ವಚನಂಗಳಿಂ ಸಂಗ್ರಹಿಸಿದ ವುದ್ಧರಣೆಯ ಪಟಲವಿದು ಶಿವಲಿಂಗಾಂಕಿತ ಶಾಸನವೆಂದು ಶಿವಶರಣರವಧರಿಪುದು (ಪತ್ರ ೮೫).

**ಅಂತ್ಯ** : ಯಿಂತು ಚೌಕಮಧ್ಯಸ್ಥವಾದ ಅಷ್ಟಭವನನ್ಯಾಸಾಕ್ಷರಂಗಳೆ ಅಷ್ಟಮೂರ್ತಿ ಅಷ್ಟತನು ಅಷ್ಟಮಂತ್ರ ಅಷ್ಟಾಂಗಲಿಂಗ ಸಕೀಲ ಸಂಪತ್ತಿನಿಂ ಮತ್ತಂ ಮೂಱು ಮೂಱು ತೆರನಾದ ಅಷ್ಟಾವರಣ ಸ್ವರೂಪವಾಗಿಹವು ಯಿಂತಿ ಸರ್ವಸಿದ್ಧಿಕರಮಾದ ಜ್ಞಾನಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ** : ವೀರಶೈವ ಸಿದ್ಧಾಂತ.

**ವಿಶೇಷ** : ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ವಿಶೇಷಾನುಭವಷಟ್ಸ್ಥಲ ಮೊದಲಾದ ೯ ಕೃತಿಗಳಿವೆ.

—ಜಿಷಿಎಂ

## 247

ಕೆ. ೧೬೫೨/೧ **ಉದ್ಧರಣೆ ಪಟಲಗಳು** ಬೀಜಾಕ್ಷರಗಳು

೭.೦" × ೨.೩" ? ?

೨೨ ಪತ್ರ

**ಆದಿ** : ಶ್ರೀಗುರುನಿರಂಜನ ಬಸವಲಿಂಗಾಯ ನಮಃ॥ ಅನಾದಿಭಕ್ತನ ಉದ್ಧರಣೆ

| ಶ್ರೀ। ನಿಶ್ಶತ್ವವೆ ಲಿಂಗ | ವಾ। ಚಿತ್ರಕಾಶವೆ ಜಂಗಮ |
| --- | --- |

| ನ। ಅಖಂಡತ್ವವೆ ಅನಾದಿ ಭಕ್ತ | ಮ। ಪರಿಪೂರ್ಣತ್ವವೆ ಗುರು | ವಾ। ಚಿತ್ರಕಾರವೆ ಜಂಗಮ | ಯ। ಪರಮಾನಂದವೆ ಪ್ರಸಾದ | ಯ। ಪರಮಾನಂದವೆ ಪ್ರಸಾದ | ಓಂ। ಚಿದ್ರಸವೆ ಪಾದುದಕ |
| --- | --- | --- | --- | --- | --- |
| ಮ। ಪರಿಪೂರ್ಣತ್ವವೆ ಗುರು | ಶ್ರೀ। ನಿಶ್ಶತ್ವವೆ ಲಿಂಗ | ವಾ। ಚಿತ್ರಕಾಶವೆ ಜಂಗಮ | ಯ। ಪರಮಾನಂದವೆ ಪ್ರಸಾದ | ಓಂ। ಚಿದ್ರಸವೆ ಪಾದುದಕ | ನ। ಅಖಂಡತ್ವವೆ ಭಕ್ತ |

**ಅಂತ್ಯ :** ಕಾಮಾರ್ಪಣರೋದ್ಧರಣೆ.

| ಮಹಲಿಂಗ | ಪರಿಣಾಮ | ತೃಪ್ತಿ | ಸ್ವಾದೋದಕ | ಓಂ ಹಾಃ | ಪ್ರಸಾದ |
| --- | --- | --- | --- | --- | --- |
| ಪ್ರಸಾದಲಿಂಗ | ಲೇಹ್ಯ | ಶಬ್ದ | ನಾಳಿಕೇರ ರಸ | ಓಂ ಹ್ರಾಂ | ಪ್ರಸಾದ |
| ಜಂಗಮಲಿಂಗ | ಚೋಹ್ಯ | ಸ್ಪರ್ಶನ | ಯಿಕ್ಷುರಸ | ಓಂ ಹ್ರೆಂ | ಪ್ರಸಾದ |
| ಶಿವಲಿಂಗ | ಭಕ್ತ | ರೂಪು | ಘೃತ | ಓಂ ಹ್ರೂಂ | ಪ್ರಸಾದ |
| ಗುರುಲಿಂಗ | ಪಾನ್ಯ | ರಸ | ದಧಿ | ಓಂ ಹ್ರಿಂ | ಪ್ರಸಾದ |
| ಆಚಾರಲಿಂಗ | ಭೋಜ್ಯ | ಗಂಧ | ಕ್ಷೀರ | ಓಂ ಹ್ರಾಂ | ಪ್ರಸಾದ |

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಪತ್ರದ ಒಂದು ಪಾರ್ಶ್ವದಲ್ಲಿ ಚಿತ್ರಗಳಿವೆ. ಇದೇ ಕಟ್ಟಿನಲ್ಲಿ ಉದ್ಧರಣೆ ಪಟಲಗಳು, ಲಿಂಗಾಂಗಸಂಗ ಪ್ರಣಮಸಂಯೋಗಸ್ಥಲ ಮತ್ತು ಚಿತ್ಕ್ರಿಯಾ ಸಂಗ್ರಹ ಎಂಬ ಕೃತಿಗಳಿವೆ.

—ವೈಸಿಬಿ

## 248

## ಉದ್ಧರಣೆ ಪಟಲಗಳು

ಕೆ.ಎ. ೪೨೧ | ಗದ್ಯ
೧೨″ × ೯.೬″ | ? | ?
೧-೬೧ ಪುಟ | ೨೪ ಪಂಕ್ತಿ | ೨೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ಉದ್ಧರಣೆ ವಾಚ್ಯ ಬರೆವುದಕ್ಕೆ ಶುಭಮಸ್ತು

ಶ್ರೀ ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯರಪ್ಪಾದ್ಯರನುಮತದಿಂದುದ್ಧರಿಸಿದ ಕುಟಿಲ ಕುಹಕ ಯಂತ್ರಂಗಳಾದ ಶಿವಜ್ಞಾನಸಾಧನವಪ್ಪ। ಶಿವಮಂತ್ರ

ನ್ಯಾಸ ಶಿವತತ್ವಸ್ಥಾಪಿತ ಶಿವಲಿಂಗಾಂಗಸಂಬಂಧ ಪ್ರತಿಪಾದಕಾಗಮ ಗ್ರಂಥಾರ್ಥ ವಾಚ್ಯಂಗಳಿಂ ಕೆಲವು ವಚನಂಗಳಿಂ ಸಂಗ್ರಹಿಸಿದ ಉದ್ಧರಣೆಯ ಪಟಲವಿದು ಶಿವಲಿಂಗಾಂಕಿತ ಶಾಸನವೆಂದು ಶಿವಶರಣರಪಧರಿಪುದು ಪ್ರಥಮದಲ್ಲಿ ಅನಾದಿಯ ಭಕ್ತನ ಉದ್ಧರಣೆಯ ಸಂಬಂಧ||

**ಅಂತ್ಯ :** ಪ್ರಕೃತಿ ಪುರುಷರೆಂಬ ನೂರೆಂಟು ತತ್ವಕರಣ ನೂರೆಂಟುರುದ್ರರು, ನೂರೆಂಟು ಶಕ್ತಿ ಗುರುಚರಪರವೆಂಬ ಲಿಂಗತ್ರಯ ಮಂತ್ರಜ್ಞಾನ ಪ್ರಸಾದವೆಂಬ ಅಂಗ ತ್ರಯ ಸರ್ವಶೂನ್ಯನಿರಾಲಂಬ ಸ್ಥಲವೊಂದು. ಅಂಗಸ್ಥಲ ನಲವತ್ತುನಾಲ್ಕು ಲಿಂಗಸ್ಥಳ ಐವತ್ತೇಳು. ಇಂತಿ ನೂರಂಟು ಸ್ಥಲಕುಳ, ಸ್ವರೂಪವಾಗಿಹವು. ಇನ್ನು ಚೌಕದ ಮಧ್ಯಸ್ಥವಾದ ಅಷ್ಟಭಾವನನ್ಯಾಸಾಕ್ಷರಂಗಳೇ ಅಷ್ಟ ಮೂರ್ತಿ. ಅಷ್ಟಕನು, ಅಷ್ಟಮಂತ್ರ, ಅಷ್ಟಾಂಗಲಿಂಗ ಸಕೀಲ ಸಂಪತ್ತಿನಿಂ ಮತ್ತಂ ಮೂರು ಮೂರು ತೆರನಾದ ಅಷ್ಟಾವರಣ ಸ್ವರೂಪವಾಗಿಹವು. ಇಂತಿ ಸರ್ವಸಿದ್ಧಿಕರಮಾದ ಜ್ಞಾನಚಕ್ರೋದ್ಧರಣೆಯ ಸಂಬಂಧ ಸಮಾಪ್ತಂ ....ಮೂರ್ತಿ .... ಈಶಾನ್ಯದಲ್ಲಿ ಖಕಾರ ಭಕಾರಂಗಳನು ಮುಂದಣವಿರಡು

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಇದನ್ನು ಮದರಾಸು ಪ್ರಾಚ್ಯಕೋಶಾಗಾರದಲ್ಲಿ ಕೂಡಲೂರ ಗ್ಯಾನಿಗರ್ ಮಠದಿಂದ ತರಿಸಿಕೊಂಡ 14ನೆಯ ಪ್ರತಿಯಿಂದ ನಕಲು ಮಾಡಲಾಗಿದೆ. ಇದನ್ನು 1952ರಲ್ಲಿ ಶ್ರೀ. ಟಿ. ವಿ ರಾಮಸ್ವಾಮಿ ಅವರು ಪ್ರತಿಮಾಡಿದ್ದಾರೆ

—ಬಿಎಸ್ಎಸ್

## 249

**ಕೆ. ೧೬೫೨/೨ — ಉದ್ಧರಣೆ ಪಟಲಗಳು — ಗದ್ಯ**

೭.೧″ × ೨.೩″ — ? — ?

೨೭ ಪತ್ರ — ೧೭ ಪಂಕ್ತಿ — ೪೬ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಶ್ರೀ ವೀರಶೈವ ಸಿದ್ಧಾಂತಸ್ಥಾಪನಾ ಚಾರ್ಯರಪ್ಪಾದ್ಯರನು ಮುದದಿಂದುದ್ಧರಿಸಿ ಕುಟಿಲಕುಹಕ ಮಂತ್ರಿಗಳಂ ಶಿವ ಜ್ಞಾನ ಸಾಧನವಪ್ಪ ಶಿವಮಂತ್ರನ್ಯಾಸ ಶಿವತತ್ವಸ್ಥಾಪಿತ, ಶಿವಲಿಂಗಾಂಗ ಸಂಬಂಧ ಪ್ರತಿಪಾದಕಾಗಮ ಗ್ರಂಥಾರ್ಥ ವಾಚ್ಯಂಗಳಿಂ ಸಂಗ್ರಹಿಸಿದ ಉದ್ಧರಣೆಯಪಟಲವಿದು ಶಿವಲಿಂಗಾಂಕಿತ ಶಾಸನವೆಂದು ಶಿವಶರಣರ ಪದರಿಪುದು|| ಪ್ರಥಮದಲ್ಲಿ ಅನಾದಿಭಕ್ತನುದ್ಧರಣೆಯ ಸಂಬಂಧ| ಸರ್ವ ಶೂನ್ಯ ನಿರಾಲಂಬ ವಸ್ತುವಿನ ಚಿಂನಾದಬಿಂದುಸ್ವರೂಪವಾದ ಲಿಂಗಜಂಗ ಮವ ಗರ್ಭೀಕರಿಸಿಕೊಂಡಿರ್ಪ ಚಿತ್ಕಲಾಸ್ವರೂಪವಾದನಾದಿಭಕ್ತನ ನಿಲ ವೆಂತೆಂದೊಡೆ|

**ಅಂತ್ಯ :** ಕ್ರಿಯಾಶಕ್ತಿಯೊಳಗಣ ಕ್ರಿಯಾಶಕ್ತಿಯಲ್ಲಿಯ ಕ್ರಿಯಾಶಕ್ತಿಯ ಮುಂದು ಗೊಂಡು। ಶ್ರದ್ಧಾ ಭಕ್ತಿಯೊಳಗಣ ಶ್ರದ್ಧಾ ಭಕ್ತಿಯಲ್ಲಿಯ ಶ್ರದ್ಧಾ ಭಕ್ತಿಯಿಂದ ರ್ಪಿಸಿ। ಸುಗಂಧದೊಳಗಣ ಸುಗಂಧದಲ್ಲಿಯ ಸುಗಂಧಪ್ರಸಾದವ ಕೊಂಬು ದು। ಯಿಾ ಪ್ರಕಾರದಲ್ಲಿ ಆಚಾರಲಿಂಗದೊಳಗಣ। ಆಚಾರಲಿಂಗದಲ್ಲಿಯ ಆಚಾರಲಿಂಗವಾದಿಯಾಗಿ। ಮಹಾಲಿಂಗದೊಳಗಣ ಮಹಾಲಿಂಗದಲ್ಲಿಯ ಮಹಾಲಿಂಗಂತ್ಯವಾಗಿ। ಯಿಂನೂಱು ಹದಿನಾಱು ಲಿಂಗಕ್ಕೆ ಅಷ್ಟವಿಧಸಕಿಂ। ಸಾವಿರದೇಳ್ನೂಱುಪ್ಪತೆಂಟು। ಇಂತೀ ಕಾಸಾರ್ಪಣ ಕರಣಾರ್ಪಣ ಬಾಧಾ ರ್ಪಣ ತ್ರಿವಿದಕ್ಕೆ। ಅಷ್ಟವಿಧಸಕಿಂ ಎರಡುಸಾವಿರದರುವತ್ತುನಾಲ್ಕು ಮಿಶ್ರಾ ರ್ಪಣ।

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಶಕಟರೇಫಹ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಉದ್ಧರಣೆ ಪಟಲಗಳು, ಲಿಂಗಾಂಗಸಂಗ ಪ್ರಣಮಸಂಯೋಗಸ್ಥಲ ಮತ್ತು ಚಿತ್ಕ್ರಿಯಾ ಸಂಗ್ರಹ ಎಂಬ ಕೃತಿಗಳಿವೆ.

—ವೈಸಿಬಿ

## 250

ಕೆ. ೧೦೦೨ | **ಉದ್ಧರಣೆ ಪಟಲಗಳು** | ಗದ್ಯ
೭.೮" × ೨" | ? | ?
೧-೪೯ ಪತ್ರ | ೧೩ ಪಂಕ್ತಿ | ೪೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ವುದ್ಧರಣೆ ವ್ಯಾಖ್ಯಾಸ ಬರವುದಕ್ಕೆ ಶುಭಮಸ್ತು XXX ಶ್ರೀ ವೀರಶೈವಸಿದ್ಧಾಂತಸ್ಥಾಪನಾಚಾರ್ಯರಪ್ಪಾದ್ಯರ ಅನುಮತದಿಂದುದ್ಧರಿಸಿದ ಕುಟಿಲಕುಹಕ ಯಂತ್ರಂಗಳಲ್ಲದ ಶಿವಗ್ನಾನ ಸಾಧನವಪ್ಪ ಶಿವಮಂತ್ರನ್ಯಾಸ। ಶಿವತತ್ವಸ್ಥಾಪಿತ ಶಿವಲಿಂಗಾಂಗಸಂಬಂಧ ಪ್ರತಿಪಾದಕಾಗಮಗ್ರಂಥಾರ್ತ್ಥವಾಚ್ಯಂಗಳಿಂ ಕೆಲವು ವಚನಂಗಳಿಂ ಸಂಗ್ರಹಿಸಿದ ಉದ್ಧರಣೆಯ ಪಟಲವಿದು। ಶಿವಲಿಂಗಾಂಕಿತ ಶಾಸನವೆಂದು ಶಿವಶರಣರವಧರಿಪುದು ಪ್ರಥಮದಲ್ಲಿ ಅನಾದಿಭಕ್ತನ ವುದ್ಧರಣೆಯ ಸಂಬಂಧಾ

**ಅಂತ್ಯ :** ಯಿಂನು ಚೌಕಮಧ್ಯಸ್ಥವಾದ ಅಷ್ಟಭವನ ನ್ಯಾಸಾಕ್ಷರಂಗಳೆ ಅಷ್ಟಮೂರ್ತಿ ಅಷ್ಟತನು ಅಷ್ಟಮಂತ ಅಷ್ಟಾಂಗಲಿಂಗ ಸಕೀಲ ಸಂಪತ್ತಿನಿಂ ಮತ್ತಂ ಮೂರು ಮೂರು ತೆರನಾದ ಅಷ್ಟಾವರಣ ಸ್ವರೂಪವಾಗಿಹವು ಯಿಂತ್ತೀ ಸರ್ವಸಿದ್ಧಿಕರವಾದ ಜ್ಞಾನಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ ಗುರು ಬಸವಲಿಂಗಾಯ ನಮಃ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಇದರಲ್ಲಿ ಅನಾದಿ ಭಕ್ತ್ಯೋದ್ಧರಣೆ, ಅಷ್ಟಾವರಣೋದ್ಧರಣೆ, ಅನಾದಿ ಜಂಗಮೋದ್ಧರಣೆ, ಗೋಮುಖೋದ್ಧರಣೆ, ಮಕುಟೋದ್ಧರಣೆ, ಚಿದಂಬರೋದ್ಧರಣೆ, ಷಡ್ಬ್ರಹ್ಮೋದ್ಧರಣೆ, ಪಂಚಮೂರ್ತಿ ಲಿಂಗೋದ್ಧರಣೆ, ಶಾಂಭವೀ ಚಕ್ರೋದ್ಧರಣೆ, ಮಹಾಲಿಂಗೋದ್ಧರಣೆ, ವೃಷಭೋದ್ಧರಣೆ, ನವ ಚಕ್ರೋದ್ಧರಣೆ, ತತ್ವಪಂಚೀಕರಣೋದ್ಧರಣೆ, ಮಂತ್ರಪಂಚೀಕರಣೋದ್ಧರಣೆ, ಲಿಂಗಪಂಚೀಕರಣೋದ್ಧರಣೆ, ಷಡಾಕ್ಷರೋದ್ಧರಣೆ, ಬಸವಾಕ್ಷರೋದ್ಧರಣೆ, ನೂರೆಂಟು ಪ್ರಣವೋದ್ಧರಣೆ, ಕುಂಡಲಿಶಕ್ತ್ಯೋದ್ಧರಣೆ, ಲಿಂಗ ಷಡಕ್ಷರೋದ್ದರಣೆ, ಅಂಗಷಡಕ್ಷರೋದ್ಧರಣೆ, ಜ್ಞಾನಚಕ್ರೋದ್ಧರಣೆ, ಎಂಬ ೨೨ ಉದ್ಧರಣೆಗಳಿವೆ.

— ಜಿಜಿಎಂ

## 251

| ಕೆ. ೧೩೯೯/೨ | **ಉದ್ಭಟ ಕಾವ್ಯ** | ವಿವಿಧಷಟ್ಪದಿ |
|---|---|---|
| ೧೦.೩" × ೨" | ಬಸವಾಂಕ | ಸು. ೧೫೫೦ |
| ೧೬-೪೦ ಪತ್ರ | ೧೧ ಪಂಕ್ತಿ | ೬೦ ಅಕ್ಷರ |

**ಆದಿ :** ಶ್ರೀಗುರುಬಸವಲಿಂಗಾಯ ನಮಃ॥ ಉದ್ಭಟ ಕಾವ್ಯವ ಬರವುದಕ್ಕೆ ಶುಭ ಮಸ್ತುXXX ರಾಗ॥ ಶಂಕರಾಭರಣ॥ ಪಲ್ಲವ॥ ಪರಿವರ್ಧಿನಿ॥

ಶ್ರೀ ಶಿವಶರಣರ್ಕೇಳ್ವುದು ಗುರ್ಜರ
ದೇಶಾಧೀಶನ ಕಥೆಯಂ ಸತ್ಪಥ
ಕೇಶನ ಕೃಪೆಯಿಂ ಪೇಳ್ವೆಂ ಕಾವ್ಯಮುಖದವರ ಪದ್ಧತಿಯಿಂ॥

ಪದನು॥ ಶ್ರೀಮದ್ಭೂಧರವರ ವರತನಯಾ
ಕೋಮಲ ಬಹುಕಾನಕ ಚಂಪಕ
ಧಾಮಾನ್ವಿತಗಲನಂಬಾಮಹಿಮ ಕೃದ್ಬಿಂಬಾಸ್ಯದ್ಯುತಿಯಂ
ಪ್ರೇಮದಿಸೀಂಟುವ ಚಾರುಚಕೋರಂ
ಹೇಮಾಗಾರಂ ಸಲೆಸಲಹುಗೆ
ಸೋಮೋತ್ತಂಸಂ ಶ್ರೀಶಾಂತೇಶಂ ಶರ್ವೋದ್ಧರಕೋಶಂ ॥೧॥

**ಅಂತ್ಯ :** ಕೋವಿದರತಿರಸಿಕರ್ಚತುರರ್ಗೆ
ಷ್ಟಾವಸದರ್ಸದ್ಭಕ್ತರ್ಲಾಲಿಪು
ದೋಉಲುದೆಂನೀ ಕಾವ್ಯದೊಳನಿತೆಡಹಿರಲನಿತಂ ತಳದೂ
ನೇವರಿಸೂದೊಲವಿಂದೆನಸುಂ ಸ
ದ್ಭಾವನ ಸಂವಿಜ್ಜೀವನ ಗುರ್ಜರ
ದೇವನ ಕಥೆಯೊಳ್ ಗಣಪದವಡೆದುದೇಳನೆಯಾಶ್ವಾಸಂ ॥೪೯॥

ಅಂತೂ ಸಂಧಿ ೭ಕ್ಕಂ ಪದನು ೩೫೫ಕ್ಕ ಮಂಗಳ ಮಹಾ ಶ್ರೀ ಶ್ರೀ.
ಪರಾಭವ ಸಂವತ್ಸರವ ಆಶಾಡ ಶುದ್ಧಪಂಚಮಿ ಶುದ್ಧ ಗುರುವಾರದಲ್ಲು
ಚೋಳಮಲ್ಲಿಕಾರ್ಜುನದೇವರು ಸಕಳ ವೀರಮಾಹೇಶ್ವರ ಶ್ರೀ ಪಾದಕೃಪೆ
ಯಿಂದ ಬರೆದ ಉದ್ಭಟಯ್ಯಗಳ ಕಾವ್ಯ ಸಂಪೂರ್ಣ ಮಂಗಳ ಮಹಾಶ್ರೀಶ್ರೀ

**ವಿಷಯ :** ಗುರ್ಜರದೇಶದ ಉದ್ಭಟಯ್ಯನ ಕಥೆ.

**ವಿಶೇಷ :** ಸಮಗ್ರ. ಪ್ರತಿ ಜೀರ್ಣ್ವಾಗಿದೆ. ಇದೇ ಕಟ್ಟನಲ್ಲಿ ಭಿಕ್ಷಾಟನ ಚರಿತ್ರೆ ಮೊದಲಾದ ೬ ಕಾವ್ಯಗಳಿವೆ.

—ಜಿಜಿಎಂ

## 252

| ಕೆ. ೧೫೦೭/೨ | **ಉದ್ಭಟ ಕಾವ್ಯ** | ವಿವಿಧಷಟ್ಪದಿ |
|---|---|---|
| ೧೦.೫" × ೧.೮" | ಬಸವಾಂಕ | ಸು. ೧೫೫೦ |
| ೧೧೦-೧೪೧ ಪತ್ರ | ೧೧ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀಗುರುಭ್ಯೋ ನಮಃ। ಶುಭಮಸ್ತು। ನಿರ್ವಿಘ್ನಮಸ್ತು। ಪರಿವರ್ಧಿನಿ
ಶ್ರೀ ಶಿವಶರಣರ್ಕೇಳ್ವುದು ಗುಜ್ಜರ
ದೇಶಾಧೀಶನ ಕಥೆಯಂ ಸತ್ಪಥ
ಕೇಶನ ಕೃಪೆಯಿಂ ಪೇಳ್ವೆಂ ಕಾವ್ಯಮುಖದ ವರಪದ್ಧತಿಯಿಂ

**ಅಂತ್ಯ :** ಕೋವಿದರತಿರಸಿಕರ್ ಚತುರರ್ ನಿ
ಷ್ಟಾವಸಥರ್ ಸದ್ಭಕ್ತರ್ ಲಾಲಿಪು
ದೋವುವುದೆಂನೀ ಕಾವ್ಯದೊಳೆಳ್ಳನಿತೆಡಹಿರಲನಿತಂತಳೆದು।
ನೇವರಿಸುವುದೊಲವಿಂದೆನಸು ಸ
ದ್ಭಾವಲಸ ರಾಜೀವಂ ಗುರ್ಜರ
ದೇವರಂ ಶಿವನಿಂ ಗಣಪದವಡೆದುದಿದೇಳನೆಯಾಶ್ವಾಸಂ॥
ಅಂತು ಸಂಧಿ ೭ಕ್ಕಂ ಪದನು ೩೫೫ಕ್ಕಂ ಮಂಗಳ ಮಹಾ ಶ್ರೀ ಶ್ರೀ
ಉದ್ಭಟದೇವರ ಚಾರಿತ್ರಂ ಸಮಾಪ್ತಂ। ಶುಭಮಸ್ತು॥

**ವಿಷಯ :** ಗುರ್ಜರದೇಶದ ಉದ್ಭಟಯ್ಯನ ಕಥೆ.

**ವಿಶೇಷ :** ಇದೇ ಕಟ್ಟನಲ್ಲಿ ಪಂಚತಂತ್ರ ಮತ್ತು ಛಂದೋಂಬುಧಿಗಳಿವೆ.

—ಜಿಜಿಎಂ

## 253

| ಕೆ.ಎ. ೫೫೬ | **ಉದ್ಭಟ ಕಾವ್ಯ** | ವಿವಿಧಷಟ್ಪದಿ |
|---|---|---|
| ೮.೯" × ೧೦.೪" | ಬಸವಾಂಕ | ಸು. ೧೫೫೦ |
| ೧-೧೧೩ ಪುಟ | ೨೦ ಪಂಕ್ತಿ | ೨೦ ಅಕ್ಷರ |

ಆದಿ : ಉದ್ಭಟದೇವರ ಕಾವ್ಯ||
ಪರಿವರ್ಧಿನಿ ಷಟ್ಪದಿ||
ಶ್ರೀ ಶಿವಶರಣರ್ ಕೇಳ್ವುದು ಗುರ್ಜ್ಜರ
ದೇಶಾಧೀಶನ ಕಥೆಯಂ.......
....... .......................... ವರ ಪದ್ಧತಿಯು||
ಶ್ರೀ ಮದ್ಭೂಧರ ವರ ವರ ತನಯಾ
ಕೋಮಲ ಜಾಹಾಕಾನಕ (ನ) ಚಂಪಕ
ದಾಮಾನ್ವಿತಗಳಸಂಜಾ ಹಿಮಕೃದ್ದಿಂಬಾಸ್ಯದ್ಧೃತಿಯಾ
ಪ್ರೇಮದಿ........
........ನಗಾಲಯು ಸಲೆ ಸಲಹುಗೆ
ಸೋಮೋತ್ತಂಸಂ ಶ್ರೀಶಾಂತೇಶಂ ಶರ್ಮ್ಮೋದ್ಧರಕೋಶಂ ||೧||

ಅಂತ್ಯ : ಪ|| ಷ........ನಸಿಶಂ
ಸದ್ಭಾವದಿ ... ಕೇಳ್ವವರ್ಗಸ
.................. ....... ................ ದೂ||
ಚಿದ್ಭಾಸುರತರ ಚರಿತರೆನಿಪರು ವಿ
ಯದ್ಭೂಭಾಗಂ ತಾರಾ........
....ದ್ಭಾನುಗಳುಳ್ಳನ್ನಂ ಕಬ್ಬವಿ....ಸಗೆ ||೪೯||
ಉದ್ಭಟಕಾವ್ಯಂ ಸಮಸ್ತಂ

ವಿಷಯ: ಗುರ್ಜರದೇಶದ ಉದ್ಭಟಯ್ಯನ ಕಥೆ.

ವಿಶೇಷ : ಅಸಮಗ್ರಪ್ರತಿ.

—ವೈಸಿಬಿ

## 254

ಕೆ. ೧೪೦೭ | **ಉದ್ಭಟ ಕಾವ್ಯ (ಶೃಂಗಾರಸಾರ)** | ಚಂಪು
೧೩" × ೧.೭" | ಸೋಮರಾಜ | ಸು. ೧೨೨೨
೧೭-೬೦ ಪತ್ರ | ೮ ಪಂಕ್ತಿ | ೬೨ ಅಕ್ಷರ

ಆದಿ: ವೃ|| ತಂಡ ಸಮಸ್ತ ಪಕ್ಷಿಪ್ರಗಮಂ ನಲಿದಿಟ್ಟು ಕೊಳುತ್ತಿತೀವಿದಾ
ಸಂದದಿ ತಂಮ ಕಾದರನಾದರಿಸುತ್ತ ಮೂಲೋಕಲಂಗಳೊ
ಳ್ಛಂದದ ಸಿಗ್ಗವಂಗಳ ಲಸನ್ಮಸಲಂಗಳನಾಂತು ಪಾಡುತಂ
ಕುಂದದೆ ಪೈಣವಂಗಳನೆ ಕುಟ್ಟುತೆ ಕಂಣ್ಗೆಸದರ್ ಪುಳಿಂದಿಯರ್ ||೯೯||

ಗದ್ಯ|| ಯಿದು ಸಮಸ್ತ ಸುರಕದಂಬವಿಜ್ರುಂಭಿತ ಮಕುಟತಟಘಟಿತ ನವರತ್ನ ಪುಂಜಸಂಜಾತ ಪಿಂಜರಿತ ಮಂಜುಳಮಯೂಖಮಂಜರೀ ರಂಜಿತ

ಶ್ರೀಗುರುವಿರೂಪಾಕ್ಷನ ಪಾವನಪಾದ ನಖೋಳಿತ ಪ್ರಭಾನಿಸ್ತಂದ ರುದ್ರಸಾಂದ್ರ ಚಂದ್ರಿಕಾ ಪಟಲಪಟುಲಂಪಟ ಚಕೋರಾಯಮಾನ ಮಾನಸಶ್ರೀ ಸೋಮರಾಜೇಂದ್ರ ವಿರಚಿತಮಪ್ಪ ಶೃಂಗಾರಸಾರ ಮಹಾ ಪ್ರಬಂಧದೊಳು ವಿಂಧ್ಯಾಚಳ ವರ್ಣನಂ ದ್ವಿತೀಯಾಶ್ವಾಸಂ ಅಂತು ಆಶ್ವಾಸ ೨ಕ್ಕಂ ಪದ ೩೫ಕ್ಕಂ ಮಂಗಳ ಮಹಾ ಶ್ರೀ ಶ್ರೀ.

**ಅಂತ್ಯ:** ಕಂದ: ಓದದೊಡಲರ್ದಪೆವಿಂನ್ನಗ
ಲದೆ ಪೊರ್ದಿದಡೆಂತೊ ನೋಳ್ಪವೆಂದೆಳ್ತಂದಾ
ಪದಯುಗಮಂಸಂಟಿದ ಸುತೆಯ
ಪೊದಳ್ವೆಳೆದಳಿರಂ....

**ವಿಷಯ:** ಗುರ್ಜರದೇಶದ ಉದ್ಭಟಯ್ಯನ ಕಥೆ.

**ವಿಶೇಷ:** ಅಸಮಗ್ರ. ೨ನೆಯ ಸಂಧಿ ೯೯ನೆಯ ಪದ್ಯದಿಂದ ೬ನೆಯ ಸಂಧಿ ೧೦೯ನೆಯ ಪದ್ಯದವರೆಗಿದೆ

—ಜಿಜಿಎಂ

## 255

| ಕೆ.ಬಿ. ೬೪೯ | **ಉದ್ಯೋಗಪರ್ವ** | ಯಕ್ಷಗಾನ |
|---|---|---|
| ೮.೩" × ೬.೫" | ? | ? |
| ೧-೪೮ ಪತ್ರ | ೧೨ ಪಂಕ್ತಿ | ೨೨ ಅಕ್ಷರ |

**ಆದಿ:** ಭಾರತದೊಳಗಣ ವುದ್ಯೋಗಪರ್ವ ಬರೆಯುವದಕ್ಕೆ ಪ್ರಾರಂಭ:||
ರಾಗ|| ಕಲ್ಯಾಣಿ|| ಝಂಪೆತಾಳ||
ಕೇಳಿರೈ ಸಹೋದರರ| ಪೇಳುವೇನು ನಿಮಗೆ
ಖೂಳಕೌರವ ತೀರಿತಿಳಿಯೊಳಗೆ ||ಪ||
ಧರೆಯ ಜೂಜಿನೊಳಂದು| ಭರದಿ ಸೋತೆವು ನೃಪಗೆ
ಮರಳಿ ಕೇಳಲು ಕುಹಕಿ ಯಿಳೆಯ ಕೊಡೆನೀಗ||
ದುರುಳರೆಲ್ಲರು ಸೇರಿ| ಬಂದ ವೈರವ ರಚಿಸಿ
ಮೆರೆವ ದುರ್ಬುದ್ಧಿಗಳ ಆರುಹಿ ಕೌರವಗೆ ||೧||

**ಅಂತ್ಯ:** ಹರಿಯು ತಾ ಬಂದಿಹ| ಭರದಿ ನೀವಿದಿರ್ಗೊಳ
ಲಿರಡೇಳು ಬೇಗದೊಳೆಂದು
ಮೆರೆವ ಸಾತ್ಯಕಿ ಪೇಳೆ| ಕರುಣಿ ಧರ್ಮಜಗಂದು
ಹೊರಟ ಸರ್ವರನೊಡಗೊಂಡು ||೪೦೬||

ಭರದಿಂದ ಬಂದಾಗ ಹರಿಯನು ನೋಡುತ್ತ
ಚರಣದೊಳೆರಗಿದ ನೃಪನಾ
ಕರುಣದಿ ಪಿಡಿದೆತ್ತಿ ತಕ್ಕೈಸಿ ನುಡಿದನು
ಪರಮಪುರುಷ ಪುಣ್ಯರೂಪ ||೪೦-||

**ವಿಷಯ:** ಪಾಂಡವ ಕೌರವರ ವಿವಾದದಲ್ಲಿ ಕೃಷ್ಣನ ಸಂಧಾನವನ್ನು ಕೌರವರು ತಿರಸ್ಕರಿಸಿ, ಪಾಂಡವರೊಡನೆ ಯುದ್ಧಕ್ಕೆ ಅಣಿಯಾಗುವ ಭಾರತದಲ್ಲಿನ ಉದ್ಯೋಗಪರ್ವದ ಕಥೆ.

**ವಿಶೇಷ:** ಬರಹವು ಚೆನ್ನಾಗಿದ್ದು, ಪತ್ರದ ಎರಡು ಕಡೆಗಳಲ್ಲಿ ಬರವಣಿಗೆ ಇದೆ. ೪೭, ೪೮ನೆಯ ಪತ್ರಗಳಿಲ್ಲ. ಶನೇಶ್ವರಸ್ತೋತ್ರವೂ, ಮಂಗಳದ ಎರಡು ಹಾಡುಗಳೂ ಇವೆ.

—ಕೆಆರ್‌ಎಸ್

## 256

ಕೆ. ೧೪೭೫/೧ | **ಉದ್ಯೋಗಸಾರ** | ಕಂದ, ವೃತ್ತ

೧೦.೨" × ೧.೬" | ನಂದಿಮುನಿ (?) | ?

೨೧೦-೨೨೭ **ಪತ್ರ** | ೧೨ **ಪಂಕ್ತಿ** | ೬೪ ಅಕ್ಷರ

**ಆದಿ:** ಆನಮ್ರ ಭವ್ಯನಿವಹ
ಶ್ರೀನಂದಿಮುನೀಂದ್ರವಂದ್ಯ ಜಿನಪದಪದ್ಮ
ಕ್ಕಾನೆಱಗಿ ಭಕ್ತಿಯಿಂದಮ
ನೂನ ಮನುದ್ಯೋಗಸಾರಮಂ ಪ್ರಕಟಿಸುವೆಂ ||೧||
ಮಾಗಿಯೊಳ್ಕುಗುವಟ್ಟ
ಕೋಗಿಲೆ ನವಚೂತ ಕಳಿಕೆಯಂ ಕರ್ಚಿ ಮನೋ
ರಾಗದೆ ದನಿಗೆಯ್ವಂತೆ ಜಿ
ನಾಗಮಸೇವಾನುರಾಗ ನಾನಿದ ನೊಣರ್ದೆಂ ||೨||

**ಅಂತ್ಯ:** ಶ್ರುತನಿಧಿ ವಿಮಲ ದಯಾಂಬುಧಿ
ವಿತತ ಯಶೋಧಾಮ ನೇಮಿಚಂದ್ರಯತೀಂದ್ರ
ಶ್ರುತ ಲಕ್ಷ್ಮಿದ್ವಿತಯಕ್ಕಂ
ಸುತನೆನಿಸಿ ಸುತತ್ವದರ್ಶಿಯೆನಿಸುವಿದರಿದೇ ||೪೩೦||
ಪರಮಾರ್ಥಂ ಭಾವತೀರ್ಥಂ ಕಲಿಕಲುಷ ರಜಃ ಕ್ಷಾಲಕಂ ಸದ್ಗುಣಾಬ್ಜಂ
ಸ್ಮರಸಂತಾಪಾಪನೋದಂ ಪ್ರಶಮ ರಸಹಿಮಂ ಸಾದು ಹಂಸಾಳಿರಮ್ಯಂ
ನಿರವದ್ಯಂ ವಿಶ್ವಹೃದ್ಯಂ ಪರಮಸುಖ ಸುಧಾಸಾರಮುದ್ಯೋಗಸಾರಂ
ನರವಿದ್ಯಾವಾರಿಪೂರಂ ವಿಷಯ ವಿಷತೃಷೋಚ್ಛೇದಮಂ ಮಾಳ್ಕೆ ನಂಮೊಳ್
||೪೩೧||

**ವಿಷಯ :** ಜೈನತತ್ತ್ವ ನಿರೂಪಣೆ.

**ವಿಶೇಷ :** ಸಮಗ್ರ. ಶಕಟರೇಫವಿದೆ. ಈ ಗ್ರಂಥವಾದ ಮೇಲೆ ಚಂದ್ರನಾಥಾಷ್ಟಕವೆಂಬ ೯ ವೃತ್ತಗಳುಳ್ಳ ಒಂದು ಕೃತಿ ಇದೆ.

—ಕೆಆರ್‌ಎಸ್

## 257

| | | |
|---|---|---|
| ಕೆ ಎ. ೫೩೫/೨ | **ಉಪಾಯಗಣಿತ** | ಗದ್ಯ |
| ೯″ × ೧೦.೨″ | ? | ? |
| ೮೦-೮೧ **ಪುಟ** | ೨೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀ ಶಾರದಾಯ ನಮಃ।। ಅರಮನೆಯ ಗದ್ದೆಗೂ ದೇವರ ಬ್ರಾಹ್ಮರ ಮಾನ್ಯದ ಗದ್ದೆಗೂ ಕಾಲ್ವೆಯ ಮೇಲೆ ಕಾಲ್ವೆ ಬೀಳದ ಹಾಗೆ ನೀರ ತಿದ್ದುವ ಉಪಾಯ।। ಅರಸಿನ ತೋಟ। ಪ್ರಧಾನಿಯ ತೋಟ। ದಳವಾಯಿಯ ತೋಟ। ಗಾವುಡನ ತೋಟ। ಇವರು ....ಮಂದಿ ತೋಟಕ್ಕೂ ಮೂರು ಕೆರೆಯ ನೀರನೂ ಕಾಲ್ವೆಯ ಮೇಲೆ ಕಾಲ್ವೆ ಬೀಳದ ಹಾಗೆ ಕಾಲ್ವೆಯ ನೀರ ತಿದ್ದುವ ಉಪಾಯ ಬರದುಯಿದೆ ನೋಡಿಕೊಂಬುದು. ಇದು ಗುಣಿಕವಲ್ಲ ಉಪಾಯ ಬುದ್ಧಿಯ ನೋಡುವ ವಿವರ.

**ಅಂತ್ಯ :** ಇನ್ನು ಹಿಂದಣ ಮಾಜಾಸೂತ್ರ ಟೀಕಿನಂತೆ ಗುಣಿಸುವ ವಿವರ–ಜಿತದಗ ೧೦ ಯಿದಕ್ಕೆ ಹಣ ೧೦೦ ಇದನೂ ಉಳಿದಿನ ೧೭ರಿಂದ ಗುಣಿಸಲು ೧೭೦೦ ಇದಂ ಇಮ್ಮಡಿಸಲು ೨೪೦೦ ಇದನೂ ೩ರಿಂದ ಭಾಗಿಸಲು ಬಂದದು ೮೦೦ ಇವು ವೀಸಗಳಕ್ಕು, ಈ ವೀಸಗಳನೂ ವರಹ ೧ಕ್ಕೆ ವೀಸ ೨೦೦ ಯೆಂದು ಹಾರವ ಮಾಡಿ ಯಿಂಕ್ಕಿ ಭಾಗಿಸಲು ಬಂದ ಲಬ್ದಗಳ ತಪ್ಪದು. ಈ ಜಾತಿಯುಮಾ ಈ ಕ್ರಮದಿಂದ ಗುಣಿಸಿಕೊಂಬದು ಮಂಗಳ ಮಹಾಶ್ರೀ.

**ವಿಷಯ :** ಉಪಾಯ ಗಣಿತ.

**ವಿಶೇಷ :** ಇದೇ ಪುಸ್ತಕದಲ್ಲಿ ನವರತ್ನಗಳು, ವಿನಾಯಕನ ಕಥೆ, ಗಣಾಷ್ಟಕ(ಸಂ), ಮುಪ್ಪಾಗಮಗ್ಗಿ, ವ್ಯವಹಾರಗಣಿತ ಎಂಬ ಕೃತಿಗಳಿವೆ. ಇದಲ್ಲದೆ ಗುರುತಿಸಲಾಗದ ಒಂದು ಅಸಮಗ್ರ ಗ್ರಂಥವಿದೆ.

—ವೈಸಿಬಿ

## 258

| | | |
|---|---|---|
| ಕೆ. ೭೨೯/೩ | **ಉಯ್ಯಾಲೆಪದ** | ಹಾಡು |
| ೩.೭″ × ೩″ | ? | ? |
| ೨೬-೩೦ **ಪತ್ರ** | ೯ ಪಂಕ್ತಿ | ೧೦ ಅಕ್ಷರ |

ಆದಿ : ಉಯ್ಯಾಲೆ ಪದ ಬರೆಯುವದಕ್ಕೆ ಶುಭಮಸ್ತು|| ರಾಗ ಕೇತಾರಗೌಳ||
ತಾಳಜಂಪೆ||
ಶ್ರೀಲಲನೆ ಬಲಗಡೆಯೊಳೂ ಮನವಲಿದು
ಭೂಲಲನೆ ಯಡ ದೆಶೆಯೊಳೂ
ಲೀಲೆಮಿಗೆ ಮಂಡಿಶಿರಲೂ
ಮದನಗೋಪಾಲನಾಡಿದನುಯ್ಯಾಲಾ||

ಅಂತ್ಯ : ರಾಯಕುಲಮೌಳಿಮಣಿಯ ಚಿಕ್ಕದೇವ
ರಾಯಚಂದ್ರಮನಿಗೊಲಿದೂ
ಆಯುರಾರೋಗ್ಯವೀವ ಗೋಪಾಲ
ರಾಯನಾಡಿದನುಯ್ಯಾಲಾ ||೧೪||

ವಿಷಯ : ವಿಷ್ಣುವಿನ ಅವತಾರವಾದ ಗೋಪಾಲನು ಉಯ್ಯಾಲೆಯಾಡಿದ್ದು.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಶ್ರೀ ಕೃಷ್ಣೇಂದ್ರ ಗೀತೆ ಮೊದಲಾದ ೧೫ ಕೃತಿಗಳಿವೆ.

—ಜಿಜಿಎಂ

## 259

ಕೆ. ೧೬೪೧/೩ **ಉಯ್ಯಾಲೆಪದ** ಹಾಡು
೮.೨" × ೧.೬" ಪಾಯಣ್ಣ ?
೪ ಪತ್ರ ೮ ಪಂಕ್ತಿ ೩೧ ಅಕ್ಷರ

ಆದಿ : ತೂಗು ತೂಗಂಮ ನವಿಲುಯ್ಯಲ
ತೂಗಂಮ ಮೋಕ್ಷಲಕ್ಷ್ಮಿಯ ನಿಲಯಕೆ|| ಪಲ್ಲ
ಯರಡು ಧರ್ಮಕಂಬದ ಪೊರೆಯೊಳಗೆ
ಯಿರಿಸಿ ಜಿನಮತದ ತೊಲೆಯ
ಭರದಿಂದ ವ್ರತಗುಣಗಳ ಚರಿತವನು
ಹುರಿಮಾಡಿ ಬಿಗಿದುಕಟ್ಟಿ ||೧||

ಅಂತ್ಯ : ಮೂರು ಲೋಕಂಗಳೊಳಗೆ
ಅಕೃತ್ರಿಮದ ಜಿನಾಲಯಗಳವು
ನಿಂತೆಂಬುದ ಪೇಳಿ ಸುಪದಗಳಾಗಿ
ಪಾಯಂಣ ಕೇಳಿ ಜಿನಪದಭರು ||೨೯||
ಧನಧಾನ್ಯ ಹೆಚ್ಚುತಿರಲಿ
ನೃಪರು ಸಜ್ಜನರುಗಳ ಪ್ರತಿಪಾಲಿಸಿ

ಹನರಿತು ಮಳೆಗರೆಯಲಿ
ಜಿನಧರ್ಮ ಪಸರಿಸಲಿ ಭುವನದೊಳಗೆ ||೩೦||
ತೂಗು ತೂಗೆಂಮ ನವಿಲುಯ್ಯಲಾ

**ವಿಷಯ :** ಜೈನಲೋಕಾಕಾರ.

**ವಿಶೇಷ :** ಅಕ್ಷರ ಸ್ಫುಟವಾಗಿದೆ. ಸಮಗ್ರ. ಇದರ ಜೊತೆಗೆ ಜೈನಾಚಾರ ಮತ್ತು ಮುನಿಸುವ್ರತಕಾವ್ಯ ಎಂಬ ೨ ಕೃತಿಗಳಿವೆ.

—ಜಿಜಿಎಂ

## 260

| ಕೆ. ೧೭೪೧ | **ಉಯ್ಯಾಲೆಪದ** | ಹಾಡು |
|---|---|---|
| ೩.೫" × ೧" | ? | ? |
| ೧-೧೦ ಪತ್ರ | ೪ ಪಂಕ್ತಿ | ೧೪ ಅಕ್ಷರ |

**ಆದಿ :** ಶುಭಮಸ್ತು| ಉಯ್ಯಾಲೆ ಪದ ಬರೆಯುದಕ್ಕೆ ನಿರ್ವಿಘ್ನಮಸ್ತು|| ರಾಗ||
ಕುಂದಣದ ಬೊಂಬೆ ಜೋ ಜೋ
ಮಹಾಲಕ್ಷ್ಮೀ ಅಂಬುಜಾಮುಖಿಯೇ ಜೋ ಜೋ
ಕಂಜದಳನಯನೆ ಜೋ ಜೋ
ಕಾವೇರಿರಂಗನದಾಂಗಿ ಜೋ ಜೋ
ದಾರಿಣಿಯನು ಮಣೆಯಮಾಡೀ
ಶೇಷನಲ್ಲಿ ಹೊಳೆವ ಸರ್ಪಣಿಯ ಮಾಡೀ
ಗನವಾದ ಗುಡಿಯಕಟ್ಟೀ
ಮನ್ಮಥನ ಬರದು ರಚಿಸಿದನುಯ್ಯಲೆಯ್ಯಾ ||೧||

**ಅಂತ್ಯ :** ರಾಗಾ|| ಅಂದಾಕಸುರನ್ನೇ ಜೋ ಜೋ
ಕರಿಮುಕನೆ ಜೋ ಜೋ
ನಂದಿವಹನ್ನೆ ಜೋ ಜೋ
ನಾಗಭೂಷಣನ್ನೆ ಜೋ ಜೋ

**ವಿಷಯ :** ಶಿವ, ಪಾರ್ವತಿ, ಗಣಪತಿ-ಮುಂತಾದವರ ಸ್ತುತಿ.

**ವಿಶೇಷ :** ಪ್ರತಿ ಚೆನ್ನಾಗಿದೆ. ಅಸಮಗ್ರ ಕೃತಿ. ಕೊನೆಯಲ್ಲಿ ಕೆಲವು ಖಾಲಿ ಪತ್ರಗಳಿವೆ.

—ಎಂಪಿಎಂ

## 261

| ಕೆ. ೧೧೪೨/೪ | **ಉರಿಲಿಂಗಪೆದ್ದಿಯ ವಚನಗಳು** | ವಚನ |
|---|---|---|
| ೧೦.೨" × ೧.೩" | ಉರಿಲಿಂಗಪೆದ್ದಿ | ಸು. ೧೬೦೦ |
| ೧೩-೧೫ ಪತ್ರ | ೫ ಪಂಕ್ತಿ | ೨೪ ಅಕ್ಷರ |

ಆದಿ: ದ್ವಿತೀಯಂಕ್ರುತಿಯಿಂ ಚಿದ್ವಿಲಾಸಂ ಚಚತರ್ೂಕಂ ಬಸ್ಮದಾರಣಾನಂ
ಆ ಬಸ್ಮ ಬಸವನಿಂದುದ್ಭವಿಸಿದ
ಚಿದ್ವಿಭೂತಿಯನೊಲಿದು ಧರಿಸಿದ ಶರಣರೆಲ್ಲ
ರು ಜ್ಯೋತಿರ್ನುಯಿ ಲಿಂಗವಪುದು ತಪ್ಪದು ಕಾಣ ಉರಿಲಿಂಗಪಿದಪ್ರಿಯ
ವಿಶ್ವೇಶ್ವರಾ ||೧||

ಅಂತ್ಯ: ಪಂಚಗವ್ಯದಿಂದ ಗೋಮಾಯವ ತಂದು ಆದರಿಸಿ
ಪಂಚಾಮ್ರುತ ಶಂಪರ್ಕದಿಂ ಅಭಿವಂದಿಸಿ
ಸಿವಗ್ನೆತ್ತಿನ ವಹಿಂನಿಯಲ್ಲಿ
ಯಡದ ಹಸ್ತದಲ್ಲಿ ಪಿಡಿದುಕೊಂಡು ಜಲವಿಸರವಂ ಮಾಡಿ
ಲಲಾ.... ಮೊದಲಾಗಿ ದಿವ್ಯಾಸ್ತಾನದಲ್ಲಿ
ಲಿಂಗಾರ್ಚನೆಯ ಮಾಡುವ ಶರಣನಾತನೆ ವೆದವಿತ್ತು
ಆತನೆ ಶಾಸ್ತ್ರಙ್ನ
ಆತನೆ ಸದ್ಯೋಂಣ್ಮುಕ್ತಯ್ಯ ವುರಿಲಿಂಗಪಿದಪ್ರಿಯ ವಿಶ್ವೇಶ್ವರಾ ||೫||

ವಿಷಯ: ವೀರಶೈವ ಸಿದ್ಧಾಂತ.

ವಿಶೇಷ: ಅಸಮಗ್ರ, ಅಶುದ್ಧ, ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ಮಹಾಮೇರುವಿನ ಸ್ತರ, ಸಂಸ್ಕೃತ ಶ್ಲೋಕಗಳು, ಶಿವನ ಕುರಿತ ಹಾಡುಗಳು, ಅಷ್ಟಕಗಳು, ಶಿವಸ್ತುತಿ ಈ ಗ್ರಂಥಗಳಿವೆ.

— ವೈಸಿಬಿ

## 262

ಕೆ. ೧೨೦೪/೮ **ಉರಿಲಿಂಗಪೆದ್ದಿಯ ವಚನಗಳು** ವಚನ
೧೦.೩" × ೧.೨" ಉರಿಲಿಂಗಪೆದ್ದಿ ಸು. ೧೧೬೦
೭೮-೮೧ ಪತ್ರ ೯ ಪಂಕ್ತಿ ೪೪ ಅಕ್ಷರ

ಆದಿ: ಶ್ರೀಗುರುಬಸವಲಿಂಗಾಯ ನಮಃ|| ಉರಿಲಿಂಗ ಪೆದ್ದಯ್ಯಗಳ ವಚನ|| ಸಕಲವೆಂದು ನಿಃಷ್ಕಲವೆಂದು ಸಂವಾದಿಸುವ ಷಡ್ದರು ಸನಾದಿ ಸಮಸ್ತ ಮತಂಗಳು| ಪರವಸ್ತುವನಱಿಯದೆ ಸಂಕಲ್ಪ ಸಂಶಯ ಭ್ರಾಂತಿಗೊಳಗಾಗಿ| ವೊಂದೊಂದು ಲಕ್ಷಂಗಳಂ ಕುರುವಿಟ್ಟು| ಅಲ್ಲಿಯೆ ಮಗ್ನರಾದರು| ಪರಬ್ರಂಹ್ಮವನರಿಯಡೆ| ದೂರವಾದರು ನೋಡಾ!

ಅಂತ್ಯ: ಗ್ರಂಥ| ಆಸ್ತಿನಾಸ್ತಿದ್ವಯಾತಿತೊ ಆಸ್ತಿನಾಸ್ತಿ ಸಮಾದ್ವಿತಂ| ಸರ್ವಜ್ಞಾ ಸರ್ವರಹಿತಂಚಾ| ತತ್ಪದಂ ವಿಷಣ್ಮುಖಂ| ಯಿಂತೆಂಬುದೆ ಸಹಜ| ಸಕಲ ನಿಷ್ಕಲ ಶೂನ್ಯ ನಿಶೂನ್ಯ ಭಾವದ ಬಳವಿಕೆಯಳಿದು| ನಿಂದ ನಿಜದೊಲವು ನೀವೆ| ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ||

ಉರಿಲಿಂಗ ಪೆದ್ಧಯ್ಯಗಳ ವಚನ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಶಿವಾಧವ ಶತಕ, ಷಡಕ್ಷರಿಯ ರಗಳೆ, ಬಸವ ರಗಳೆ, ಮಂತ್ರಗೋಪ್ಯ ಮೊದಲಾದ ೭ಳ ಕೃತಿಗಳಿವೆ.

—ವೈಸಿಬಿ

## 263

ಕೆ. ೧೮೩೦ | **ಊಟದ ರಗಳೆ** | ರಗಳೆ

೭.೫" × ೧" | ? | ?

೧-೧೪ ಪತ್ರ | ೫ ಪಂಕ್ತಿ | ೨೬ ಅಕ್ಷರ

**ಆದಿ :** ಶ್ರೀ ಗಣಾಧಿಪತೆಯೇ ನಮಃ|| ಊಟದ ರಗಳೆ ಬರಲುದಕ್ಕೆ ಶುಭಮಸ್ತು||
ಬಾಳಕ್ಷಣ ಗಣನಾಯಕನಡಿಗೆ
ಬಾಳವನೊತ್ತ್ರೊತುವೆಡಿಗಡಿಗೆ
ಸೋಜಿಗವನು ಹೇಳುವೆ ನಾನಿಂದು
ಭೋಜನರಗಳೆಯು ಪೇಳುವೆ ನಾನಿಂದು
ಧರೆಗತಿಶಯ ಕನ್ನಡದೇಶದಲ್ಲಿ
ಧರಣಿಸುರರ ಸಂತೋಶದಲ್ಲಿ
ಚೆಂನಾಗಿರಲಾ ಭೂಸುರರೊಳಗೆ
ಅನ್ನದಾನಿ ಭಟ್ಟರ ಮನೆಯಲ್ಲಿ

**ಅಂತ್ಯ :** ಆಶೀರ್ವಾದವ ಯಜಮಾನಂಗೆ
ಭೂಸುರಸಂತತಿ ಹೇಳುವಹಾಗೆ
ತಂಳಿತು ತಂಮತನೆ ಅಯುಂತಾಗಿ
ಧರಣೀಸುರನಿದ್ದನು ಸುಖಿಯಾಗಿ
ಈ ಊಟ ದರಗಳೆಯು ಹೇಳಿದವರಿಗೆ ಕೇಳಿದವರಿಗೆ
ಈ ಊಟದೊರಕೊಂಬುದು ಸ್ಥಿರಸಾಂಬ್ರಜ್ಯ ವಿಜ್ಯಭವಾ
ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಊಟದ ವರ್ಣನೆ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಒಂದಕ್ಕೊಂದು ಸಂಬಂಧ ಪಡದ ■ ಪತ್ರಗಳಿವೆ.

—ಜಿಜಿಎಂ

## 264

ಕೆ. ೧೭೫೩/೧೨ ಎಲ್ಲಾ ಪುರಾತನರ ತ್ರಿವಿಧಿ ತ್ರಿವಿಧಿ
೮" × ೨.೪" ? ?
೧೯-೨೩ ಪತ್ರ ೧೨ ಪಂಕ್ತಿ ೪೨ ಅಕ್ಷರ

ಆದಿ: ಶ್ರೀಗುರು ಬಸವಲಿಂಗಾಯ ನಮಃ॥ ಯಲ್ಲಪುರಾತರ ತ್ರಿವಿಧಿ॥
ಜಗದಗಲ ಮುಗಿಲಗಲ ಮಿಗೆಯಗಲ ನಿಂಮಾಘನ
ಅಘಹರನೆ ನಿಂಮಾ ಶರಣಾರ ಸಂಪದವಾ
ಪೊಗಳಲೆನ್ನಳವೆ ಶಿವಬಲ್ಲಾ ॥೧॥
ಕೋಟಿ ಶ್ರೀರುದ್ರಜಪ ಕೋಟಿ ಪಂಚಾಕ್ಷರಿಜಪ
ಕೋಟಿ ಮಾತೆಲ್ಲಾ ಶಿವಮಂತ್ರದಿಂದಧಿಕ
ನಾಟೆ ಶಿವಶರಣ ಸ್ತುತಿಯೆಂದೂ ॥೨॥

ಅಂತ್ಯ: ಅಲ್ಲಿ ಮಾಯಯ ಜರದು ನಿಲ್ಲದೆ ಮರ್ತ್ಯಕೆ ಬಂದು
ಯಲ್ಲ ಪ್ರಮಥರನು ಸಲಹಿ ಕದಳಿಯ ಪೊಕ್ಕ
ಅಲ್ಲಮಾ ಪ್ರಭುವೆ ಶರಣಾಗೂ ॥೮೧॥
ಶ್ರೀ ಶ್ರೀ ಶ್ರೀ.

ವಿಷಯ: ೬೩ ಪುರಾತನರ ಸ್ತುತಿ.

ವಿಶೇಷ: ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಸರ್ವಜ್ಞಮೂರ್ತಿಯ ತ್ರಿವಿಧಿ ಮೊದಲಾದ ೪೭ ಕೃತಿಗಳಿವೆ.

—ಜಿಜಿಎಂ

## 265

ಕೆ. ೪೨೩/೧೪ ಎಲ್ಲಾ ಪುರಾತನರ ತ್ರಿವಿಧಿ ತ್ರಿವಿಧಿ
೮.೪" × ೧೨.೮" ? ?
೬೦-೬೭ ಪತ್ರ ೨೬ ಪಂಕ್ತಿ ೧೪ ಅಕ್ಷರ

ಆದಿ: ಜಗದಗಲ್ಲ ಮುಗಿಲಮಿಗೆ ಅಗಲ ನಿಮ್ಮ ಘನ
ಅಗಹರನೆ ನಿಮ್ಮ ಶರಣರ ಪಂನದವ
ವಾಗಳೆಂನಳವೆ ಶಿವಬಲ್ಲಾ ॥೧॥
ಕೋಟಿ ಶ್ರೀರುದ್ರ ಜಪ ಕೋಟಿ ಪಂಚಾಕ್ಷರ ಜಪ
ಕೊಟ್ಟೆ ಮಾತಲ್ಲ ತಿರುಮಂತ್ರ....ದಧಿಕ
ನಾಟೆ ಶಿವಶರಣ ಸ್ತುತಿಯೆಂದೂ ॥೨॥

**ಅಂತ್ಯ :** ಅಲ್ಲಿ ಮಾಯೆಯು ಜರೆದು ನಿಲ್ಲದೆ ಮರ್ತ್ಯಕೆ ಬಂದು
ಎಲ್ಲ ಪ್ರಮಥರನು ಸಲಹಿ ಕದಳಿಯು ಪೊಕ್ಕು
ಅಲ್ಲಮಪ್ರಭುವೆ ಶರಣಾಗೂ ||೬೩||
ಎಲ್ಲಾ ಪುರಾತರ ಮೆಲ್ಲಡಿಗಳ ಪಾಡೆ....
ಎಲ್ಲ ದುರಿತಗಳು ಕ್ಷಯುವಹುದು ಇದ ಬಿಡದೆ
ಎಲ್ಲಾ ತ್ರೈಕಾಲದೊಳು ಜಪಿಸಿ
ಎಲ್ಲಾ ಪುರಾತರ ತ್ರಿವಿದಿ ಸಮಾಪ್ತ||

**ವಿಷಯ :** ಪುರಾತನ ಶರಣರ ಸ್ತುತಿ.

**ವಿಶೇಷ :** ಇದೇ ಪುಸ್ತಕದಲ್ಲಿ ನೀಲಮ್ಮನ ತ್ರಿವಿಧಿ. ಸಿದ್ಧೇಶ್ವರನ ತ್ರಿವಿಧಿ, ಹರಗಣಮಾಲೆ ಮುಂತಾದ ೧೯ ಕೃತಿಗಳಿವೆ.

—ವೈಸಿಬಿ

## 266

ಕೆ. ಎ. ೫೬೮/೧೨ | **ಎಲ್ಲಾ ಪುರಾತನರ ತ್ರಿವಿಧಿ** | ತ್ರಿವಿಧಿ
೧೩" × ೯.೮" | ? | ?
೮೧-೮೬ ಪುಟ | ೨೪ ಪಂಕ್ತಿ | ೨೦ ಅಕ್ಷರ

**ಆದಿ :** ಗುರುಸಿದ್ದಲಿಂಗಾಯ ನಮಃ। ಎಲ್ಲಾ ಪುರಾತರ ತ್ರಿವಿಧಿ
ಜಗದಗಲ ಮುಗಿಲಗಲ ಮಿಗೆ ಅಗಲ ನಿಮ್ಮ ಘನ
ಅಗಹರನೆ ನಿಮ್ಮ ಶರಣರ ಸಂಪದವ
ಪೊಗಳಲೆನ್ನಳವೆ ಶಿವ ಬಲ್ಲಾ ||೧||
ಕೋಟಿ ಶ್ರೀರುದ್ರಜಪ ಕೋಟಿ ಪಂಚಾಕ್ಷರೀ ಜಪ
ಕೋಟಿ ಮಾತೆಲ್ಲ ಶ್ರೀ....ಮಂತ್ರದಧಿಕ
ನಾಟೆ ಶಿವಶರಣ ಸ್ತುತಿಯುಂದೂ ||೨||

**ಅಂತ್ಯ :** ಎಲ್ಲಾ ಪುರಾತರ ಮೇಲಡಿಗಳ ಪಾಡೆ
ಎಲ್ಲ ದುರಿತಗಳು ಕ್ಷಯುವಹುದು ಇದಕೆ ಬಿಡದೆ
ಎಲ್ಲಾ ತ್ರೈಕಾಲದೊಳು ಜಪಿಸಿ
ಎಲ್ಲಾ ಪುರಾತರ ತ್ರಿವಿಧಿ ಸಮಾಪ್ತ। ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಶೈವಪುರಾತನರ ಸ್ತುತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

267

ಕೆ. ಬಿ. ೬೨೩ **ಎಲ್ಲಾ ಪುರಾತನರ ಬೆಡಗಿನ ವಚನಗಳು (ಸಟೀಕು)** ವಚನ,ಗದ್ಯ

೧೨″ × ೪″ ಸಿಂಗಳದ ಸಿದ್ಧಬಸವರಾಜದೇವ ?

೧-೨೩೧ ಪತ್ರ ೧೧ ಪಂಕ್ತಿ ೫೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ। ಶ್ರೀಮದಸಂಖ್ಯಾತಗಣೇಭ್ಯೋ ನಮಃ॥ ನಾನೂರ ಬೆಡಗಿಗೆ ಸೇರಿದ ಯಲ್ಲಾ ಪುರಾತರ ವಚನವ ಬರದೋದುವದಕ್ಕೆ ಶುಭಮಸ್ತು॥ ಶೋಭನಮಸ್ತು॥ ಐಶ್ವರ್ಯಮಸ್ತು॥

ಸಿಂಗಳದ ಸಿದ್ಧಬಸವರಾಜದೇವರು ವ್ಯಾಖ್ಯಾನವ ಮಾಡಿದ ಯಲ್ಲಾ ಪುರಾತನರ ಬೆಡಗಿನ ವಚನವ॥ ಪ್ರಥಮದಲ್ಲಿ ಕೋಲಶಾಂತಯ್ಯಾಗಳ ವಚನ॥ ಮೂರು ಹೊಲೆಯಮುಂಡು ಬಂದವ। ಈರೈದು ಕಂಡು ಬಂದವ ನೀನಾರು ಹೇಳಾ। ಸಂದಿಸ್ಥಿದ ಪಟ್ಟಣದಲ್ಲಿ ಬಂದು ನೊಂದೆಯಲ್ಲಾ। ಅಂದಿನ ಬೆಂಬಳಿಯ ಮರದು ಇಂದಿನ ಸಂದೇಹಕ್ಕೆಡಲಾಗಿ ಯಾವುಭಯದ ಸಂದ ನಿಂನ ನೀನರಿ ಪುಂಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ॥ ಟೀಕು॥ ಸಂಸಾರ ವಿಷಯಶನೋದಕವ ತುಂಬಿಕೊಂಡಿರ್ದ ತನುತ್ರಯು ಗಳೆಂಬುದೀಗ। ಮೂರು ಹೊಲೆಯೆಂಬ ಶಬ್ದಕ್ಕರ್ಥ। ಆ ತನುತ್ರಯು ಸಂಬಂಧವಾದ ಜೀವಾತ್ಮನು XXX ಅಂತು ಅಹಂಕರಿಸಿದ ಕಾಲಕಾಮರ ಮರ್ದಿಸಿದನೆಂಬುದೀಗ। ಭೀಮೇಶ್ವರಲಿಂಗಯೆಂಬ ಶಬ್ದಕ್ಕರ್ಥ। ಆ ಚಿತ್ಸ್ವರೂಪನಾದ ಶರಣನು ಚಿದ್ಘನಲಿಂಗಕ್ಕೆ ಚಿತ್ರಭಾಗಸ್ವರೂಪನಾದ ಕಾರಣ ನಿರಂಗಸಂಗವೆಂಬ ಶಬ್ದಕ್ಕರ್ಥ ॥-॥

**ಅಂತ್ಯ :** ತತ್ವಮಸ್ಯಾದಿ ವಾಕ್ಯಾರ್ಥಂಗಳನರಸಿ ಮನೋಹಸ್ತದಿಂ ಪರಿಗ್ರಹಿಸಿ ಆತ್ಮೋಹಂಯಂಬ ಅದ್ವೈತವಿಕಳರು XXX ಅಂತಪ್ಪ ಅಗ್ನಾನಿಗಳಿಗೆ ಪರಮಸಾಧ್ಯವಾಗದು ಗುರುಕರುಣ ಗುರುಕರುಣವು ಶರಣರಿಗಲ್ಲದೆ ಯಂಬುದೀ ವಚನಾರ್ಥ ॥ ೦॥ ಅಂತು ನಾಮವರ್ಗ॥ ೬೩ಕ್ಕಂ ವಚನ ೫೪೧ಕ್ಕಂ ಮಂಗಳಮಸ್ತು॥ ಸಿಂಗಳದ ಸಿದ್ಧಬಸವರಾಜದೇವರು ವ್ಯಾಖ್ಯಾನವಂ ಮಾಡಿದ ಯಲ್ಲಾ ಪುರಾತನರ ಬೆಡಗಿನ ವಚನ ಸಮಾಪ್ತ ಮಂಗಳ ಶ್ರೀ ಶ್ರೀ ಶ್ರೀ.

ಯಾದ್ರುಸೀ ಪುಸ್ತಕಂ ದ್ರುಷ್ಟ್ವಾ। ತಾದ್ರುಶೀ ಲಿಖಿತಂ ಮಯಾ। ಅಬದ್ಧಂವಾ ಸುಬದ್ಧಂವಾ। ಮಮ ದೋಷೋ ನ ವಿದ್ಯದೇ॥ ಶ್ರೀ ಶ್ರೀ ಶ್ರೀ. ಶ್ರೀಗುರು ಚಂನಬಸವೇಶ್ವರ ಸ್ವಾಮಿಗಳವರ ಚರಣಾರವಿಂದವೇ ಗತಿ॥ ಶ್ರೀ ಶ್ರೀ ಶ್ರೀ ಕೊಂಡು ಕರ್ಮಮಾರ್ಗ್ಗದಲ್ಲಿ। ದುರಾಭಿಮಾನದಿಂ। ನಿಂದನಿಲನ ಕಾಣದೆ

ಪ್ರವರ್ತಿಸುತ್ತಿರಲದೀಗ। xxx ಇಂತಪ್ಪ ಭವನ ಮೂಲ ಅಹಂಕಾರ ಸಹಾ। ದಳವಳಯುವನ್ನೆಲ್ಲವನು।

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಪತ್ರಗಳ ಎರಡು ಕಡೆಯೂ ಬರವಣಿಗೆಯಿದೆ. ಗ್ರಂಥ ಸಮಗ್ರ. ಹಸುರು ಕಾಗದ (ಹಳೆಯದು).

—ಎಸ್‌ಬಿ

## 268

| ಕೆ. ೧೧೪೧ | **ಎಲ್ಲಾ ಪುರಾತನರ ಬೆಡಗಿನ ವಚನ (ಸಟೀಕು)** | ವಚನ,ಗದ್ಯ |
|---|---|---|
| ೧೦.೨″ × ೨″ | ಸಿಂಗಳದ ಸಿದ್ಧರಾಮದೇವ | ? |
| ೧-೩೨೭ ಪತ್ರ | ೧೦ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ। ಸಿಂಗಳದ ಸಿದ್ಧರಾಮದೇವರು ವ್ಯಾಖ್ಯಾನವ ಮಾಡಿದ ಯೆಲ್ಲಾ ಪುರಾತನರ ಜೆಡಗಿನ ವಚನ॥ಪ್ರಥಮದಲ್ಲಿ ಕೋಲ ಶಾಂತಯ್ಯಗಳ ವಚನ॥

ಮೂಱು ಮೊಲೆಯುನುಂಡು ಬಂದವ
ಯಿರ್ಪ್ಪೈದ ಕಂಡು ಬಂದವ
ನೀನಾರು ಹೇಳಾ ಸಂದಿಲ್ಲದ ಪಟ್ಟಣದಲ್ಲಿ ಬಂದು ನೊಂದೆಯಲ್ಲಾ
ಅಂದಿನ ಜೆಂಬಳಿಯ ಮರದು
ಯಿಂದಿನ ಸಂದೇಹಕ್ಕೊಳಗಿಡಲಾಗಿ
ಯಿಾ ವುಭಯದ ಸಂದ ನಿನ್ನ ನೀನಱಿ
ಪುಂಣ್ಯಾರಂಣ್ಯದಹನ ಭೀಮೇಶ್ವರಲಿಂಗಾ ನಿರಂಗಸಂಗಾ॥

ಟೀಕು॥ ಸಂಸಾರವಿಷಯ ರಸೋದಕವನು ತುಂಬಿಕೊಂಡಿಹ ತನುತ್ರಯಂಗಳೆಂಬು ದೀಗ

**ಅಂತ್ಯ :** ಆ ನಿರವಯ ಪರಬ್ರಹ್ಮದಲ್ಲಿ ಸಮರಸ್ಯೈಕ್ಯವಾಗಿ ಬೆಸಿದ ಶರಣನು ನಾನು ಲಿಂಗದಲ್ಲಿ ಬೆರಸಿದೆನೆಂಬ ಚಿದಹಂಕಾರಕೆ ನಷ್ಟವಾಯಿತ್ತೆಂಬುದೀಗ ಆ ಬಟ್ಟ ಬಯಲೊಳಗೆ ಹತ್ತಿ ಹೋಗುತ್ತಿರಲಾಗಿ ನಾನೆತ್ತ ಹೊಂದೆನೆಂದಱಿಯೆ ನ್ಪೆಯಾ ಬಸವಪ್ರಿಯ ಕೂಡಲಚೆಂನಸಂಗಮದೇವಾ ಯೆಂಬ ಶಬ್ದಕ್ಕರ್ಥ ॥೪॥ ಕ್ಕಂ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಪ್ರತಿ ಸಮಗ್ರವಾಗಿದೆ. ಚೆನ್ನಾಗಿದೆ. 'ಯಲ್ಲಾ ಪುರಾತರ ಜೆಡಗಿನ ವಚನ ಸಮಾಪ್ತ ಶ್ರೀ ಶ್ರೀ' ಎಂದು ಮಸಿಯಲ್ಲಿ ಬರೆದಿದೆ.

—ಜಿಜಿಎಂ

## 269

ಕೆ. ೧೫೬೨/೮ **ಎಲ್ಲಾ ಪುರಾತನರ ಬೆಡಗಿನ ವಚನ (ಸಟೀಕು)** ವಚನ, ಟೀಕು
೧೩.೫" × ೨.೨" ಸಿಂಗಳದ ಸಿದ್ಧ ಬಸವರಾಜದೇವ ?
೧೧೭-೧೬೩ ಪತ್ರ ೨೨ ಪಂಕ್ತಿ ೧೩೮ ಅಕ್ಷರ

**ಆದಿ :** ಶ್ರೀಗುರುಸಿದ್ಧಲಿಂಗಾಯ ನಮಃ|| ಸಿಂಗಳದ ಸಿದ್ಧಬಸವರಾಜದೇವರು ವ್ಯಾಖ್ಯಾನವಂ ಮಾಡಿದ ಯೆಲ್ಲಾ ಪುರಾತನರ ಬೆಡಗಿನ ವಚನ|| ಪ್ರಥಮದಲ್ಲಿ ಕೋಲಾಶಾಂತಯ್ಯಗಳ ವಚನ||
ಮೂಱು ಮೊಲೆಯನುಂಡು ಬಂದವ
ಯಿರ್ರ್ಪದ ಕಂಡುಬಂದವ ನೀನಾರು ಹೇಳಾ ಸಂದಿಲ್ಲದ
ಪಟ್ಟಣದಲ್ಲಿ ಬಂದು ನೊಂದೆಯಲ್ಲಾ
ಅಂದಿನ ಬೆಂಬಳಿಯು ಮಱದು ಯಿಂದಿನ ಸಂದೇಹಕ್ಕೊಡಲಾಗಿ
ಯಿಾವುಭಯದಸಂದ ನಿನ್ನ ನೀನಱಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ||
ಟೀಕು|| ಸಂಸಾರ ವಿಷಯರಸೋದಕವ ತುಂಬಿಕೊಂಡಿಹ ತನುತ್ರಯಂಗಳೆಂಬುದೀಗ

**ಅಂತ್ಯ :** ಯಿಂತಪ್ಪ ಅಗ್ನಾನಿಗಳಿಗೆ ಪರವು ಸಾಧ್ಯವಾಗದು ಗುರುಕರುಣವುಳ್ಳ ಶರಣರಿಗಲ್ಲದೆ ಯೆಂಬುದೀ ವಚನಾರ್ಥ ||೧೦|| ಅಂತು ನಾನುವರ್ಗ ೯೪೪ಕ್ಕಂ ವಚನ ||೫೪೧|| ಸಿಂಗಳದ ಸಿದ್ಧಬಸವರಾಜ ದೇವರು ವ್ಯಾಖ್ಯಾನವಂ ಮಾಡಿದ ಯೆಲ್ಲಾ ಪುರಾತನರ ಬೆಡಗಿನ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ವಿಶೇಷಾನುಭವ ಷಟ್ಸ್ಥಲ ಮೊದಲಾದ ೯ ಕೃತಿಗಳಿವೆ.

—ಜಿಜಿಎಂ

## 270

ಕೆ.ಎ. ೫೬೬/೪ **ಏಕಾಂತರಾಮಿತಂದೆಗಳ ರಗಳೆ** ರಗಳೆ
೧೩.೦" × ೮" ಹರಿಹರ ಸು. ೧೨೦೦
೧-೧೭ ಪುಟ ೨೬ ಪಂಕ್ತಿ ೧೪ ಅಕ್ಷರ

**ಆದಿ :** ನಿರ್ವಿಘ್ನಮಸ್ತು|| ಏಕಾಂತರಾಮಿತಂದೆಗಳ ರಗಳೆ ...
ಹಂಪಿಯ ವಿರೂಪಾಕ್ಷಾ ರಗಳೆ....
ಶ್ರೀ ಮೇರುವಿಗೆ ದಕ್ಷ....

ಕಂದ|| ನತಜನ ಸಮೀಪಸನಾಳ್ದಂ
ಶೃತಿದದಿಂದಲಿ ಸಕಲ....||
........ವಿ ತೆಂದಯು
ನತಿಶಯದಿಂ ಕರುಣಿ ಹಂಪೆಯ ವಿರೂಪಾಕ್ಷಾ||
ರಗಳೆ|| ಶ್ರೀ ಮೇರುವಿಗೆ ದಕ್ಷಿಣದಿಶಾಭಾಗದೊಳು........
ಭೂಮಿಗೆ ವಿಭೂಷಣವೆನಿ....
....ದೆನಿಪ್ಪ ಪೆರ್ಮಯಪುರಂ||XX
ಇರಲಿತ್ತಲಿತ್ತ ಲುತ್ತರದಿಶಾಭಾಗದೊಳು
ಹರಭಕ್ತನೇಕಾಂತರಾಮಯ್ಯ....

**ಅಂತ್ಯ :** ರಾಮಿತಂದೆಗಳಿಗಂ ಗಣಪದವಿಯಂನಿತ್ತು
ಕಾಮಹರನರಿ... ....ನಿತುXX
ಸಂಪದದ ಶರಣ ಮನೋಮೂರ್ತಿಯೊಪ್ಪಿದಂ
ಹಂಪೆಯ ವಿರೂಪಾಕ್ಷನನವರತನೊಪ್ಪಿದಂ||
ಏಕಾಂತರಾಮಿತಂದೆಗಳ ರಗಳೆ ಸಮಾಪ್ತಂ|| ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಏಕಾಂತ ರಾಮಯ್ಯನ ಕಥೆ.

**ವಿಶೇಷ :** ಸಮಗ್ರ. ಇದರ ಜೊತೆಯಲ್ಲಿ ಸುಭಾಷಿತ, ಕಾಲಜ್ಞಾನ ಮೊದಲಾದ ಕೃತಿಗಳಿವೆ.

—ಜಿಜಿಎಂ

## 271

**ಕೆ. ೯೯೭/೭** **ಏಕಾಕ್ಷರ ನಿಘಂಟು (ಸಟೀಕು)** ಶ್ಲೋಕ,ಟೀಕು

೯.೩" × ೧.೯" ಕೇಶವಚಂದ್ರಮುನಿ ?

೪ ಪತ್ರ ೧೫ ಪಂಕ್ತಿ ೭೦ ಅಕ್ಷರ

**ಆದಿ :** ಶ್ರೀಗುರುಬಸವಲಿಂಗಾಯ ನಮಃ|| ಏಕಾಕ್ಷರ ನಿಘಂಟು ಗ್ರಂಥದ ವ್ಯಾಖ್ಯಾನ||
ಪೂರ್ವೇಸೂರ್ಯೇ ದಿಶೇರ್ಹಂತೆ ಧ್ವಜೆಗಜೆ ಖಗೇಶ್ವರೆ
ಧರೆಯರೆಚ್ಯುತೆ ಭಾಗ್ಯ ಅಕಾರಾರ್ಥಮುದ್ವಾದಶೀ||
ಟೀಕು|| ಪೂರ್ವದಲ್ಲಿ ಸೂರ್ಯನಲ್ಲಿ| ಪೂರ್ವದಿಕ್ಕಿನಲ್ಲಿ ಜಿನೇಶ್ವರನಲ್ಲಿ ಧ್ವಜಗಳಲ್ಲಿ, ಆನೆಯಲ್ಲಿ ಗರುಡಪಕ್ಷಿಯಲ್ಲಿ ಭೂಮಿಯಲ್ಲಿ ದೇವೇಂದ್ರನಲ್ಲಿ ಕೃಷ್ಣದೇವರಲ್ಲಿ ಸಕಲ ಭಾಗ್ಯಂಗಳಲ್ಲಿ ಅಕಾರಾಕ್ಷರವು ಯಿಾ ೧೨ರಲ್ಲಿ ವರ್ತಿಸುವುದೂ ||೧||

**ಅಂತ್ಯ :** ಟೀಕು|| ಸಾಂದ್ರ ದಟ್ಟೈತ್ತಾಗಲುಪಟ್ಟ್ವ ಅರ್ಥವನುಳ್ಳಂಥಾ ಏಕಾಕ್ಷರ ಗ್ರಂಥ ಪದ್ಧತಿಯನುಳ್ಳ ಎಕಾರಾಕ್ಷರ ನಿಘಂಟು| ಕೇಶವಚಂದ್ರಮುನಿಗಳೆಂಬ

ವಿದ್ವಾಂಸರುಗಳಿಂ ಜೀರ್ಣೋದ್ಧಾರಣವನು ಮಾಡಲು ಪಟ್ಟಿದು ಆ ಏಕಾಕ್ಷರ ನಿಘಂಟು ಮೇರುಗಿರಿಯೋಪಾದಿಯಲ್ಲಿ ಚಿರಜಿಜಿಯುುತ ಸ್ಥಿರವಾಗಿಯಿರಲಿ ಏಕಾರಾಕ್ಷರ ನಿಘಂಟು ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ನಿಘಂಟು.

**ವಿಶೇಷ :** ಇದರ ಜೊತೆಯಲ್ಲಿ ಚತುರ್ಪಾದಲಕ್ಷಣ, ಅಷ್ಟಾವರಣದ ಕಥೆ, ಶತಕತ್ರಯದ ವ್ಯಾಖ್ಯಾನ ಇತ್ಯಾದಿ ೮ ಕೃತಿಗಳಿವೆ.

—ಜಿಜಿಎಂ

## 272

**ಕೆ. ೧೦೯೩/೯ ಏಕಾಕ್ಷರ ನಿಘಂಟು (ಸಟೀಕಂ) ಶ್ಲೋಕ,ಟೀಕು**

೧೦.೪″ × ೧.೯″ ? ?

೬೮-೭೧ ಪತ್ರ ೧೪ ಪಂಕ್ತಿ ೭೦ ಅಕ್ಷರ

**ಆದಿ:** ಏಕಾಕ್ಷರ ನಿಘಂಟು ಗ್ರಂಥ||
ಪೂರ್ವೇ ಸೂರ್ಯೇರ್ಹತಿ ದೇಶಿ ಧ್ವಜೇಗಜೆ ಖಗೇಶ್ವರೆ|
ಧರೇಂದ್ರಾಚ್ಯುತ ಭಾಗ್ಯೇಷು ಅಕಾರೋ ರುದ್ರ ಸಾತ್ವಿಕಾಂ|
ಪೂರ್ವದಲ್ಲಿ| ಸೂರ್ಯನಲ್ಲಿ| ಅರ್ಹತಿ| ಜಿನನಲ್ಲಿ| ದಿಕ್ಕಿನಲ್ಲಿ| ಧ್ವಜದಲ್ಲಿ| ಆನೆಯಲ್ಲಿ| ಗರುಡನಲ್ಲಿ| ಭೂಮಿಯು ಯಿಂದ್ರನು| ನಾರಾಯಣನು| ಸಕಲಸೌಭಾಗ್ಯಂಗಳಲ್ಲಿ| ಅಕಾರಃ| ಅಕಾರವು ||೧||

**ಅಂತ್ಯ :** ಸ್ವಶಕ್ತ್ಯೇದಂ ಜಗತ್ಸರ್ವ| ಮಂತಸ್ಥಂ ವಿರಯಃ
ತಮಾಜ್ಯೋತಿರ್ಯಥಾಭಾತಿ| ತೇಜಸಾ ತಂ ಸಮಾಮ್ಯಹಂ||
ಯಃ ಯಾವನಾನೊರ್ವನು| ಸ್ವ|ತನ್ನ|ಶಕ್ತ್ಯಾ|ಶಕ್ತಿಯಿಂದೆ| ಅಂತಸ್ಥಂ| ಒಳಗಿದ್ದಂಥ| ಇದಂ| ಇಯಾ| ಸರ್ವಂ| ಸಮಸ್ತವಾದಂಥ| ಜಗತ್| ಜಗತ್ತನು| ವಿರಚೀಯ್ಯಾ| ರಚನೆಯ ಮಾಡಿ| ತೇಜನಾ| ಪ್ರಕಾಶದಿಂದೆ| ಜ್ಯೋತಿಃ| ಜ್ಯೋತಿಯು| ಯಥಾ| ಹೆಂಗೆ| ತಥಾ| ಹಾಂಗೆ| ತಯಾ| ಆ ಲೀಲಾಶಕ್ತಿಯಿಂದೆ| ಭಾತಿ| ಪ್ರಕಾಶಿಸುತ್ತಿಹನು| ತಂ| ಆ ದೇವನನು| ಅಹಂ| ನಾನು| ನಮಾಮಿ| ನಮಸ್ಕರಿಸುತ್ತಿರ್ದಪೆನೂ ||೫೦|| ಏಕಾಕ್ಷರ ನಿಘಂಟು ೫೦ಕ್ಕಂ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ನಿಘಂಟು.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಶಬ್ದಮಣಿದರ್ಪಣ, ಕರ್ಣಾಟಕ ಶಬ್ದಮಂಜರಿ ಇತ್ಯಾದಿ ಒಟ್ಟು ೧೭ ಕೃತಿಗಳಿವೆ.

[ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ. ಪುಟ ೧೭೫ ಕ್ರಮಾಂಕ 172 ನೋಡಿ]

—ಕೆಆರ್‌ಎಸ್

## 273

ಕೆ. ೧೧೩೧/೧೬ **ಏಕಾಕ್ಷರ ನಿಘಂಟು (ಸಟೀಕು)** ಶ್ಲೋಕ, ಟೀಕು
೭.೨" × ೧.೫" ? ?
೧೯೩-೨೦೧ ಪತ್ರ ೬ ಪಂಕ್ತಿ ೩೬ ಅಕ್ಷರ

**ಆದಿ :** ಏಕಾಕ್ಷರ ನಿಘಂಟು॥

ಗ್ರಂಥ॥ ಪೂರ್ವ್ವೇ ಸೂರ್ಯ್ಯೇಶ್ಯರ್ಷಂಕೆ ಧ್ವಜೆಗಜೆಖಗೇಶ್ವರೇ
ಧರೇಂದ್ರಾಚ್ಚುತ ಭಾಗ್ಯೇಷು ಅಕಾರಾರ್ತ್ಥಶ್ಚ ದ್ವಾದಶೇ॥

ಟ್ಕೆ॥ ಪೂರ್ವ್ವದಲ್ಲಿ। ಸೂರ್ಯ್ಯನಲ್ಲಿ। ಪೂರ್ವ್ವದಿಕ್ಕಿನಲ್ಲಿ। ಜಿನೇಶ್ವರನಲ್ಲಿ। ಧ್ವಜದಲ್ಲಿ। ಆನೆಯಲ್ಲಿ। ಗರುಡಪಕ್ಷಿಯಲ್ಲಿ। ಭೂಮಿಯಲ್ಲಿ। ದೇವೇಂದ್ರನಲ್ಲಿ। ನಾರಾಯಣನಲ್ಲಿ। ಸಕಲವಾಚನಂಗಳಲ್ಲಿ। ಅಕಾರಾಕ್ಷರವು॥ ಈ ೧-॥ ಅಲ್ಲಿ ಪರ್ತ್ತಿಸುವುದೂ ॥೧॥

**ಅಂತ್ಯ :** ಇತ್ಯದ್ಯೇಕಾಕ್ಷರಿಗ್ರಥ॥
ಸಾಂದ್ರಸಾರಣ್ಯೊದ್ದಾರಂ ರಂತ್ರತಂ ಕೇಶವಚಂದ್ರೈಶ್ಚ
ಸುಮೇರು ವಚ್ಚಿರಂಬುಯಾತ್॥

ಟ್ಕೆ॥ ಯಿತಿ ಯಿಾ ಪ್ರಕಾರದಿಂದೆ। ಆದಿ ಮುಖ್ಯವದ। ಸಾಂದ್ರ ದಟ್ಟೈತ್ತಾದರ್ತ್ಥ ಅವನುಳ್ಳಂತ। ಸಾರಣ್ಯಾಃ। ಗ್ರಥ। ಪದ್ಧತಿಯನುಳ್ಳಂತಾ। ಏಕಾಕ್ಷರೀ। ಗ್ರಥ। ಏಕಾಕ್ಷರ ಗ್ರಂಥವು। ಕೇಶವಶ್ಚ ಚೆದ್ರೈಃ। ಕೇಶವಚೆಂದ್ರ ಮುನಿಗಳೆಂಬ ವಿದ್ವಾಂಸರುಗಳಿಂದ। ವುದ್ಧಾಣಂ। ಜೀರಣೋದ್ಧಾರಣವನು। ಕ್ರುತಂ। ಮಾಡಲುಪಟ್ಟದು। ಸುಮೇರುವತ್। ಸು। ಶೋಭನವಾದ। ಮೇರುವತಿ ದೇವಗಿರಿಯ ಹಾಂಗೆ ಚ್ಚಿರಂ ಭೂಯಾತ್ ಸ್ಥಿರವಾಗಲಿ ॥೫೦॥ ಏಕಾಕ್ಷರ ನಿಗಂಟ್ಟು॥ ಶಮಾಪ್ತ ಮಂಗಳ ಮಹ ಶ್ರೀ॥

**ವಿಷಯ :** ನಿಘಂಟು.

**ವಿಶೇಷ :** ಸಮಗ್ರ. ಶಕಟರೇಫವನ್ನು ಬಳಸಿದೆ. ಇದೇ ಕಟ್ಟಿನಲ್ಲಿ ಹಾಡುಗಳು, ಪಂಚವಿಶಂತಿ ಸ್ತೋತ್ರ ಮೊದಲಾದ ಒಟ್ಟು ೧೭ ಇತರ ಕೃತಿಗಳಿವೆ.
[ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ. ಪುಟ ೧೭೫. ಕ್ರಮಾಂಕ 172 ನೋಡಿ]

—ಕೆಆರ್‌ಎಸ್

274

ಕೆ. ೭೪೮/೬ **ಏಕೋತ್ತರ ಶತಸ್ಥಲ** ವಚನ

೧೨.೫" × ೨.೨" ಜಕ್ಕಣಾರ್ಯ ಸು. ೧೪೩೦

೧೧-೩೪ ಪತ್ರ ೧೩ ಪಂಕ್ತಿ ೭೬ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಶುಭಮಸ್ತು॥ ಏಕೋತ್ತರ ಶತಸ್ಥಲ॥ ಪ್ರಥಮದಲ್ಲಿ ಪಿಂಡಸ್ಥಲ॥ ಗದ್ಯ॥

ಸ್ವಸ್ಥಿಸಮಸ್ತ ಭುವನಜನತಿಮಿರಹರಣ ಕಾರಣ ಸ್ವರೂಪರುಂ। ತ್ರಿಖಾಂಡ ನಿಷ್ಟರುಂ ರುಗ್ವ್ಯಜುಃ ಸಾಮಾಥರ್ವಣಂತರ್ಗ್ಗತ ಪ್ರತಿಪಾದ್ಯ ಪ್ರಮುಖರುಂ। ಶೃತಿ ಸ್ಮೃತಿ ಪುರಾಣಾಗಮ ಇತಿಹಾಸಾದಿ ನಾನಾ ಶಾಸ್ತ್ರ ಕೋವಿದರೂ। ಪರಮ ವೀರಶೈವಾಗಮಾಚಾರ್ಯ್ಯರುಂ। ಸಕಲ ಪ್ರಸಾದ ಪಂಚಾಕ್ಷರೀ ಮಂತ್ರಸಿದ್ಧರುಂ। ನಿತ್ಯ ಪರಿಪೂರ್ನ್ನ ಸಚ್ಚಿದಾನಂದ ನಿರಂಜನರುಂ ಪರಂಜ್ಯೋತಿ ಸ್ವರೂಪರುಮಪ್ಪ ಪರಮ ಗುರುಮೂರ್ತ್ತಿ ಜಗದಾರಾಧ್ಯರುಮಪ್ಪ ಮಹಾಲಿಂಗದೇವರು। ಆ ಮಹಾಲಿಂಗದೇವರು ಗುರುಕುಲಾನ್ವಯದಲ್ಲಿ ಉದಯವಾದ ಕುಮಾರ ಬಂಕನಾಥದೇವರ। ಆ ಕುಮಾರ ಬಂಕನಾಥದೇವರ ದಿವ್ಯಜ್ಞಾನಾನಂದ ಕರಕಮಲದಲ್ಲಿ ವುದಯವಾದ ತತ್ಶಿಷ್ಯ ಭಕ್ತಿಭಂಡಾರಿ ಜಕ್ಕಂಣನೂ॥ಶ್ರೀ॥ ಆ ಶ್ರೀಗುರುರಾಯಂಗೆ ಬಿಂನಹಂಗೆಯ್ದು ಪರಮ ಗುರುವೆ ನಿಂಮಡಿಗಳಾ ಯಂಂನ ಪೂರ್ವ್ವಜನ್ಮ ನಿವೃತ್ತಿಯಂ ಮಾಡಿ ಪುನೋಜ್ಜಾತನೆನಿಸಿ ಅಂಗದಲ್ಲಿ ಲಿಂಗಪ್ರತಿಷ್ಟೆಯಂ ಮಾಡಿ ಪ್ರಣವ ಪಂಚಾಕ್ಷರಿಯ ಪ್ರಾಣಸ್ಥಲದಲ್ಲಿ ಸ್ಥಾಪಿಸಿ। ಯಂಂನ ಕೃತಾರ್ತ್ಥನಂ ಮಾಡಿದಿರಿ ದೇವಾ। ಯಿಂನು ಯಂಂನ ಷಡಾಂಗವು। ಲಿಂಗದಲ್ಲಿ ಲೀಯ್ಯವಹಭೇದಮಂ ನಿರೂಪಮಂ ಕೊಟ್ಟು ಪಾಲಿಸುದೆಂದೊಡೆ! ಆ ಶ್ರೀ ಗುರುಸ್ವಾಮಿ ತಂಮ ಪರಮಜ್ಞಾನಾನುಭಾವ ಪ್ರಸಂನ ಪ್ರಕಾಶದಿಂದ ಷಟ್ಸ್ಥಲವನು ಬಸವಾದಿ ಪ್ರಮಥಗಣಂಗಳ ವಚನಂಗಳಿಂದ ಸಂಕಲ್ಪಿಸಿ। ಪರಮಾರ್ತ್ಥ ತತ್ವಬೋಧೆಯನು ನಿರೂಪಿಸಿದ ಭೇದವೆಂತಿದ್ದೂರ್ತೆಂದೊಡೆ ಮುಂದೆ। ಪ್ರಥಮದಲ್ಲಿ ಪಿಂಡಸ್ಥಲ।

ರಾಗ ಮಧು ಮಾದವಿ॥ ಪಲ್ಲವ॥ ಬಿಂದುಬಿಂನಾಣದೊಳಗಂದವಿಟ್ಟಹ ಕಳಾನಂದ ಪಿಂಡೋದಯದ ಜ್ಞಾನನಿರುತಾ ॥ಪ॥

ಕಾರಮೇಘದೊಳು ಮಿಂಚಡಗಿ ತೋಜಿದ ತೆಱದಿ ನೀರೊಳಡಕಂಗೆಯ್ದ ಕಿಚ್ಚಿನಂತೆ। ಬೀರುತಿಹ ಫಳರಸದೊಳಿಪ್ಪ ನಸರುಚಿಯಂತೆ ನಾರಣದ ಮಸ್ತಕದ ಮುತ್ತಿನಂತೆ ॥೧॥

**ಅಂತ್ಯ :** ಶಬ್ದ ನಿಶ್ಯಬ್ದವಾಗಿ। ನಿಶ್ಯಬ್ದವನಹತವಾಗಿ। ಶಬ್ದ ನಿಶ್ಯಬ್ದವೆಂಬ ಬುದ್ಧಿಯುಂ ನಿರ್ವ್ರಯುವಾಗಿ ಯಿದ್ದುದು ಹೋದುದುಯೆಂಬುದನಱಿಯದೆ। ವೇರೆಗೆಟ್ಟ ನಿಶ್ಯಬ್ದ ಗಂಭೀರಗೊಹೇಶ್ವರಾ ನಿಂಮ ಬಸವಂಣಾ ॥೭॥ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾ ಶ್ರೀ॥

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದರೊಡನೆ ಕರಣಹಸಿಗೆ, ಏಕೋತ್ತರ ಶತಸ್ಥಲ ಮೊದಲಾದ ೨೯ ಗ್ರಂಥಗಳಿವೆ. ಕೊನೆಯಲ್ಲಿ ೯ ಸಂಕೀರ್ಣ ಕೃತಿಗಳಿವೆ. ಕೆಲವು ಗ್ರಂಥಗಳಲ್ಲಿ ಶಕಟರೇಫದ ಬಳಕೆ ಇದೆ. ಕೆಲವು ಗರಿಗಳ ಅಂಚು ಮುರಿದು ಶಿಥಿಲವಾಗಿವೆ.

—ಎಸ್ ಎನ್ ಕೆ

## 275

| ಕೆ. ೧೧೮೪/೬ | **ಏಕೋತ್ತರ ಶತಸ್ಥಲ** | ಹಾಡು |
|---|---|---|
| ೧೦.೭″ × ೨.೧″ | ಜಕ್ಕಣಾರ್ಯ | ಸು. ೧೪೩೦ |
| ೧೧೩-೧೪೪ ಪತ್ರ | ೧೪ ಪಂಕ್ತಿ | ೫೬ ಅಕ್ಷರ |

**ಆದಿ :** ಜಕ್ಕಂಣಾಚಾರ್ಯರು ಸೇರಿಸಿದ ಯೇಕೋತ್ತರ ಶತಸ್ಥಲ ಪ್ರಥಮದಲ್ಲಿ। ಪಿಂಡಸ್ಥಲ। ರಾಗ ಮಧು ಮಾಧವಿ॥ ತಾಳದರು॥ ಪಲ್ಲವ॥

ಬಿಂದು ಬಿಂನಾಣದೊಳಗಂದವಿಪ್ಪಿಹ ಕಳಾ
ನಂದ ಪಿಂಡೋದಯದ ಜ್ಞಾನಸಿರುತಾ॥

ಪದ॥ ಕಾರಮೇಘದೊಳು ಮಿಂಚಡಗಿತೊಱದ ತೆರದಿ
ನೀರೊಳಡಕಂಗೆಯ್ದ್ದ ಕಿಚ್ಚಿನಂತೆ
ಬೀರುತಿಹ ಫಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ॥೧॥

**ಅಂತ್ಯ :** ನಡೆಯು ಪ್ರಸಾದ ನುಡಿಯು ಪ್ರಸಾದ। ನೋಟವು ಪ್ರಸಾದವಲ್ಲದೆ। ಪ್ರಸಾದಿಯು ಪ್ರಸಾದದಿಂದ। ಕೂಡಲ ಚೆಂನಸಂಗ ನಿಂಮ ಲಿಂಗೈಕ್ಯವೂ ॥೫ ಸೂತ್ರಯಿಂತು। ಸಿದ್ಧಮುಖದಿಂದ ಅಂತ್ಯ ನಿಶ್ಚಲನಿರ್ಭೇದ್ಯಾ ॥೬। ಶಬ್ದ ನಿಶ್ಯಬ್ದವಾಗಿ। ನಿಶ್ಯಬ್ದ ಅನಾಹತವಾಗಿ। ಶಬ್ದನಿಶ್ಯಬ್ದವೆಂಬ ಬುದ್ಧಿಯು ನಿರ್ವಯಲಾಗಿ। ಯಿದ್ದುದು ಹೋದುದೆಂಬುದನಱಿಯದೆ। ಮೇರೆಗೆಟ್ಟ ನಿಶ್ಯಬ್ದ ಗಂಭೀರ ಗುಹೇಶ್ವರ ನಿಂಮ ಬಸವಂಣ್ಣಾ ॥೭॥ ಅಂತು ಐಕ್ಯ ಸ್ಥಲಕ್ಕೆ ಸಂಬಂಧಿಸಿದ ಮಹಾಲಿಂಗಸ್ಥಲ ೯ಕ್ಕೆ ಸೇರಿದ ಪದ ೪೭ಕ್ಕಂ॥ಶ್ರೀ॥ ಅಂಗಸ್ಥಲ ೪೪ ಲಿಂಗಸ್ಥಲಕ್ಕೆ ಸೇರಿದ ವಚನ ೫೫೪ಕ್ಕಂ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರವಾಗಿದೆ; ಆದರೆ ೧೧೮ನೆಯ ಗರಿಯಲ್ಲಿ ಅರ್ಧಭಾಗದಷ್ಟು ನಷ್ಟವಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಕರಣಹಸಿಗೆ, ವಿಶ್ವಾರ್ಪಣ, ಪಂಚೀಕರಣಗಳೇ ಮೊದಲಾಗಿ ಒಟ್ಟು ಏಳು ಕೃತಿಗಳಿವೆ.
[ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ ಪುಟ. ೧೭೯. ಕ್ರಮಾಂಕ. 176 ನೋಡಿ]

— ಕೆಆರ್‌ಎಸ್

## 276

| ಕೆ. ೧೨೦೧/೫ | **ಏಕೋತ್ತರ ಶತಸ್ಥಲ** | ಹಾಡು |
|---|---|---|
| ೧೭.೩" × ೧.೭" | ಜಕ್ಕಣಾರ್ಯ | ಸು. ೧೪೩೦ |
| ೧೧-೩೭ **ಪತ್ರ** | ೮ ಪಂಕ್ತಿ | ೭೬ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ।। ಜಕ್ಕಣಾಚಾರ್ಯರು ಸೇರಿಸಿದ ಯೇಕೋತ್ತರ ಶತಸ್ಥಲ। ಪ್ರಥಮದಲ್ಲಿ ಪಿಂಡಸ್ಥಲ।
ರಾಗ ಮಧುಮಾಧವಿ ।।ಪಲ್ಲ।।
ಬಿಂದು ಬಿನ್ನಾಣದೊಳಗಂದ ಬಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನ ನಿರುತ

ಪದ।। ಕಾರಮೇಘದೊಳು ಮಿಂಚಡಗಿ ತೋರದ ತೆರದಿ
ನೀರೊಳಡನಂಗೆಯ್ದು ಕಿಚ್ಚಿನಂತೆ
ಬೀರುತಿಹ ಪಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸಕ ಮುತ್ತಿನಂತೆ ।।೧।।

**ಅಂತ್ಯ :** ಜ್ಞಾನಜ್ಯೋತಿಯಪ್ರಭೆ ತಾನಾಗಿ ನಿಂದಿರ್ದ ತಾನಾಗಿರ್ದೆನೆಂಬ ಜ್ಞಾನ ಶೂನ್ಯವಾಗಿ। ತಾನೆ ತಂನೊಳು ವ್ಯೋಮರದೊರಗಿದ ನಿರಾಳ। ಜ್ಞಾನತೀತ ನಿರುಪಮ ನಿಶ್ಚಲ ನಿರ್ಭೇದ್ಯ ।।೭।। ಶಬ್ದ ನಿಃಶಬ್ದವಾಗಿ ನಿಃಶಬ್ದವನ್ಯಹತವಾಗಿ ಶಬ್ದ ನಿಃಶಬ್ದವೆಂಬ ಬುದ್ಧಿಯು ನಿರ್ವಯವಾಗಿ। ಯಿದ್ದುದು ಹೋದುದನೆಂಬುದನರಿಯದೆ ಮೇರೆಗೆಟ್ಟ ನಿಃಶಬ್ದ ಗಂಭೀರ ಗುಹೇಶ್ವರ ನಿಂಮ ಬಸವಣ್ಣಾ।। ಅಂತು ಐಕ್ಯಸ್ಥಲ ೯ಕ್ಕೆ ಸೇರಿದ ಪದನು ೪೨ಕ್ಕಂ ಮಂಗಳ ಮಹಾಶ್ರೀ ಅಂತು ಭಕ್ತಿಸ್ಥಲ ೧೫ಕ್ಕೆ ಸೇರಿದ ಪದನು ೧೦೧ ಮಹೇಶ್ವರ ಸ್ಥಲ ೯ಕ್ಕೆ ಸೇರಿದ ಪದನು ೪೨ ಪ್ರಸಾದಿಸ್ಥಲಕ್ಕೆ ಸೇರಿದ ಪದನು ೩೯।। ಪ್ರಾಣಲಿಂಗಿ ಸ್ಥಲ ೫ಕ್ಕೆ ಸೇರಿದ ಪದನು ೨೨ ಶರಣಸ್ಥಲ ೪ಕ್ಕೆ ಸೇರಿದ ಪದನು ೨೦ ಐಕ್ಯಸ್ಥಲ ೮೪ಕ್ಕೆ ಸೇರಿದ ಪದನು ೨೨ ಅಂತು ಲಿಂಗಸ್ಥಲ ೪೪ಕ್ಕೆ ಸೇರಿದ ಪದನು ೨೫೪ ಆಚಾರಲಿಂಗಸ್ಥಲ ೯ಕ್ಕೆ ಸೇರಿದ ಪದನು ೫೩ ಗುರುಲಿಂಗಸ್ಥಲ ೯ಕ್ಕೆ ಸೇರಿದ ಪದನು ೪೯ ಶಿವಲಿಂಗಸ್ಥಲ

ರ್ಥಕ್ಕೆ ಸೇರಿದ ಪದನು ೬೬ || ಜಂಗಮಲಿಂಗಕ್ಕೆ ಸೇರಿದ ಪದನು ೫೮XX ಅಂತು ೧೦೧ ಸ್ಥಲಕ್ಕೆ ಸೇರಿದ ಪದನು ೫೫೧ಕ್ಕಂ ಜಕ್ಕಣಾಚಾರ್ಯ ಸೇರಿಸಿದ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಪದಮಂತ್ರಗೋಪ್ಯ. ಹಿರಿಯ ಮಂತ್ರಗೋಪ್ಯ ಪ್ರಭುದೇವರ ಸೃಷ್ಟಿಯ ವಚನ, ಮಹದೇವಿಯಕ್ಕನ ಸೃಷ್ಟಿಯ ವಚನ, ಪಂಚೀಕರಣದ ಪದಗಳು, ಕರಣಹಸಿಗೆ ಎಂಬ ಗ್ರಂಥಗಳಿವೆ.

—ವೈಸಿಬಿ

## 277

## ಏಕೋತ್ತರ ಶತಸ್ಥಲ (ಸಟೀಕು)

ಕೆ. ೧೨೦೪/೧ | ಜಕ್ಕಣಾರ್ಯ | ವಚನ, ಟೀಕು

೧೪.೯" × ೨" | ೧೪ ಪಂಕ್ತಿ | ಸು. ೧೪೩೦

೧-೯೨ ಪತ್ರ | | ೬೭ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಆವುದಾನೊಂದು ಶಾಸ್ತ್ರವನೋದ ಬೇಕಾದವರು ಕೇಳಬೇಕಾದವರು ಪ್ರಥಮದಲ್ಲಿ ಶಿವಾನುಬೋಧವ ಮಾಡ ಬೇಕಾದವರು ಮೊದಲಲ್ಲಿ ಗುರು ನಮಸ್ಕಾರವೆ ಮುಖ್ಯವಾದ ಕಾರಣ ಆದ್ಯರು ಯಿಾ ಶಾಸ್ತ್ರದ ಪ್ರಥಮ ಪ್ರಾರಂಭದಲ್ಲಿ ಶ್ರೀಗುರು ನಮಸ್ಕಾರವೆ ಅತ್ಯಧಿಕX ಜಕ್ಕಣಾಚಾರ್ಯರು ಸೇರಿಸಿದ| ಒಬ್ಬಾನೊಬ್ಬ ಪ್ರವೀಣ ಪುರುಷನು ಮುಂನುಳ್ಳ ಮಣಿಪುಂಜಂಗಳ ತರವರಿದು ಪರಿಪಜೆವಿಡಿದು ಸರಂಗೊಳಿಸಿ ನವೀನ ಕಂಠಾಭರಣವೆನಿಸುವ ಹಾಂಗೆ| ಮುಂನ್ನ ಮಹಾ ಪುರಾತನರು ನಿರೂಪಿಸಿದ ವಚನಾನುಭಾವಗಳನು ಸೂತ್ರ ಸೂತ್ರ ತಪ್ಪದ ಹಾಂಗೆ ಅರ್ಥ ಅಭಿಪ್ರಾಯಂಗಳು ವ್ಯಾಕಿರಿಯಾಗದ ಹಾಂಗೆ ಸೇರಿದುವೆ ಯಾಗಿತವಳೀಕರಿಸಿದ ಯೇಕೋತ್ತರ ಶತಸ್ಥಲ| ನೂರೊಂದು ಸ್ಥಲಂಗಳು ಯೆಂಬಲ್ಲಿ ಯಿಾ ಶಾಸ್ತ್ರಕ್ಕೆ ಯೇಕೋತ್ತರಸ್ಥಲ ನಾಮವು ಏನು ಕಾರಣಕ್ಕೆ ಬಂದಿತ್ತಲೆ ಸ್ವಾಮಿಯೆಂದು ಬೆಸಗೊಂಡಡೆ| ಜ್ಞಾನ ಶೂನ್ಯಸ್ಥಲವ ವೊಂದೆ ಉತ್ತರ ಮೇಲಾದ ಸೀಮಂತಮಣಿಯಾಗಿ| ಶತಸ್ಥಲ| ಪಿಂಡಸ್ಥಲಾದಿ ಭಾವಾಭಾವನಷ್ಟ ಸ್ಥಲಾಂತ್ಯಮಾದ ನೂರು ಸ್ಥಲಂಗಳೆಂಬ ಚಿನ್ಮಣಿ ಪುಂಜಂಗಳು| ಸ್ವಾನುಭಾವ ಸೂತ್ರದಿಂದ ಹಾಣಿಗೆಯಾಗಿ ಮುಮುಕ್ಷು ಮಾದ ಶರಣಜನಂಗಳ ದೃಢ ಕಂಠದಲ್ಲಿ ನವೀನಕಂಠಾಭರಣನೆನಿಸಿ ಶೋಭಿಸುತ್ತಿಹವಾದ ಕಾರಣ ಯಿಾ ಶಾಸ್ತ್ರಕ್ಕೆ ಯೇಕೋತ್ತರ ಶತಸ್ಥಲ ವೆಂಬ ನಾಮವು ಪ್ರಸಿದ್ಧವಾಯಿತ್ತು||

**ಅಂತ್ಯ :** ಯೆಲ್ಲಾ ಶಿವಶರಣರುಗಳ ಶ್ರೋತ್ರಮುಖದಲ್ಲಿಯೆ ಮುಕ್ತವಾಯಿತ್ತು|

ಮಂಗಳವೆಂದರೆ ನಿರ್ಮಳವು ಮಹಾ ದೊಡ್ಡಿತ್ತಾದ ಶ್ರೀಯೆಂದರೆ ಜ್ಞಾನವು ಮತ್ತೆ ಶ್ರೀಯೆಂದರೆ ಐಶ್ವರ್ಯವು XX ರೌದ್ರಿ ಸಂವಂತ್ಸರದ ಶ್ರಾವಣ ಮಾಸ ಬಹುಳ ಪಂಚಮೆಯು ಶುಕ್ರವಾರದಲ್ಲೀ ನೂರೊಂದು ಸ್ಥಲಂಗಳ ವ್ಯಾಖ್ಯಾನವು ಬರದು ಸಮಾಪ್ತಿಯಾಯಿತ್ತು||

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಪ್ರಭುದೇವರ ಸೃಷ್ಟಿಯ ವಚನ, ಮಹಾದೇವಿ ಯಕ್ಕಗಳ ಸೃಷ್ಟಿಯ ವಚನ, ಪಂಚೀಕರಣ, ಕರಣಹಸಿಗೆ, ಹಿರಿಯ ಮಂತ್ರ ಗೋಪ್ಯ ಎಂಬ ಗ್ರಂಥಗಳಿವೆ.

—ವೈಸಿಬಿ

## 278

| ಕೆ. ೧೨೨೯/೬ | **ಏಕೋತ್ತರ ಶತಸ್ಥಲ** | ಹಾಡು |
|---|---|---|
| ೫.೭" × ೨" | ಚಕ್ಕಣಾರ್ಯ | ಸು. ೧೪೩೦ |
| ೨೨-೫೭ ಪತ್ರ | ೧೩ ಪಂಕ್ತಿ | ೩೨ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಯೇಕೋತ್ತರ ಶತಸ್ಥಲ|| ಪ್ರಥಮ ದಲ್ಲಿ ಪಿಂಡಸ್ಥಲ|| ರಾಗ ಮಧುಮಾಧವಿ|| ತಾಳ ಧರು

ಪಲ್ಲವ|| ಬಿಂದು ಬಿಂನಾಣದೊಳಗಂದವಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನ ನಿರುತಾ||

ಪದ|| ಕಾಮೇಘದೊಳು ಮಿಂಚಡಗಿ ತೋಱದ ತೆಱದಿ
ನೀರೊಳಡಕಂಗೆಯ್ದು ಕಿಚ್ಚಿನಂತೆ
ಬೀಱುತಿಹ ಫಳರಸದೊಳಿರ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ||೧||

**ಅಂತ್ಯ :** ಜ್ಞಾನಜ್ಯೋತಿಯ ಪ್ರಭೆಯು ತಾನಾಗಿ ನಿಂದಿರ್ದ್ದ
ತಾನಾಗಿರ್ದ್ದೆನೆಂಬ ಜ್ಞಾನಶೂನ್ಯವಾಗಿ
ತಾನೆ ತಂನೊಳು ಮಯಿಮರದೊರಗಿದನಿರುಳ
ಜ್ಞಾನಾತೀತ ನಿರುಮನಿಶ್ಚಲ ಸಭೆ
ಶಬ್ದನಿಶಬ್ದವಾಗಿ ನಿಶ್ಯಬ್ದವನವತವಾಗಿ ಶಬ್ದ ನಿಶಬ್ದನೆಂಬ ಬುದ್ಧಿಯೂ ನಿರ್ವ್ವಯಲಾಗಿ| ಯಿದ್ದುದು ಹೋದುದೆಂಬುದನರಿಯದೆ ಮೇರೆಗೆಟ್ಟ ನಿಶಬ್ದ ಗಂಭೀರ ಗೊಹೇಶ್ವರ ನಿಂಮ ಬಸವಂಣಾ ||೭|| ಅಂತೂ ಮಹಾ ಲಿಂಗಸ್ಥಲಕೆ ಸೇರಿದ ವಚನ ೬೨ ಸ್ಥಲ ನಿರ್ದೇಶದ ಪದ ೪....ವುಭಯ ವಚನ ೧೦೬ಕ್ಕಂ ಶ್ರೀ

**ವಿಷಯ:** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ:** ಸಮಗ್ರ. ಶಕಟರೇಫವಿದೆ. ಬರಹ ಚೆನ್ನಾಗಿದೆ. ಕರಣಹಸಿಗೆ, ಮಿಶ್ರಾರ್ಪಣ, ಪಂಚೀಕರಣದ ಪದ, ಅಕ್ಕಗಳ ಸೃಷ್ಟಿವಚನ, ಪ್ರಭುದೇವರ ಸೃಷ್ಟಿವಚನಗಳೂ ಇದೇ ಕಟ್ಟಿನಲ್ಲಿವೆ.

—ಕೆಆರ್‌ಎಸ್

## 279

ಕೆ. ೧೫೬೧/೬ **ಏಕೋತ್ತರ ಶತಸ್ಥಲ (ಸಟೀಕು)** ಹಾಡು, ಟೀಕು
೧೩.೫″ × ೨.೨″ ಜಕ್ಕಣಾರ್ಯ ಸು. ೧೪೩೦
೯೯-೨೪೫ ಪತ್ರ ೧೩ ಪಂಕ್ತಿ ೬೦ ಅಕ್ಷರ

**ಆದಿ:** ಶ್ರೀಗುರು ಬಸವಲಿಂಗಾಯ ನಮಃ॥ XXX ಜಕ್ಕಂಣಾಚಾರ್ಯರು ಸೇರಿಸಿದ ಜಕ್ಕಂಣಾಚಾರ್ಯರೆಂಬ ಶಿವಶರಣರು ಸೇರಿಸಿದ ಯೇಕೋತ್ತರ ಶತಸ್ಥಲಂಗಳು ನೂರೊಂದು ಸ್ಥಲಂಗಳು ಯಾ ಶಾಸ್ತ್ರಕ್ಕೆ ಯೇಕೋತ್ತರ ಶತಸ್ಥಲವೆಂಬಭಿದಾವು ಯೇನು ಕಾರಣ ಬಂತೆಲೆ ಸ್ವಾಮಿಯೆಂದು ಬೆಸಗೊಂಡೊಡೆ ಯೇಕಜ್ಞಾನ ಶೂನ್ಯಸ್ಥಲವೊಂದೆ ಉತ್ತರವೇಲಾದ ಸೀಮಂತಮಣಿಯಾಗಿ ಶತಸ್ಥಲXXಪ್ರಥಮದಲ್ಲಿ ಮೊತ್ತಮೊದಲೊಳಗೆ ಪಿಂಡಸ್ಥಲ

**ಅಂತ್ಯ:** ಯಿಂತಪ್ಪ ಗ್ಞಾನಶಾಸ್ತ್ರವನು ಪಾಠವ ಮಾಡಿಕೊಂಡು ಗ್ಞಾನಗುರುಗಳಿದ್ದೆಡೆಗೆ ಹೋಗಿ ದೀರ್ಘದಂಡ ನಮಸ್ಕಾರ ಮುಂತಾದ ಭಕ್ತ್ಯೋಪಚಾರಂಗಳಿಂದ ಯಿಾ ಶಾಸ್ತ್ರವ ಅರ್ಥ ಅಭಿಪ್ರಾಯಂಗಳನ್ನು ಶ್ರೋತ್ರಮುಖದಲ್ಲಿ ಕೇಳಿ ಮನೋಮುಖದಲ್ಲಿ ಹಾರೈಸಿ ಹೃದಯಮುಖದಲ್ಲಿ ಯಿಂಬುಗೊಂಡು ಅಂಗವ ಮಾಡಿಕೊಂಡಾಚರಿಸಿದಂಥಾ ಶಿವಶರಣರೆಲ್ಲರೂ ನಿರತಿಶಯಗ್ಞಾನನಿಜೈಶ್ವರ್ಯವನೆ ಪಡೆದು ಬಾಳುತ್ತಿಹರು ಯಂಬುದೀಗ ಮಂಗಳ ಮಹಾ ಶ್ರೀ ಶ್ರೀ.

**ವಿಷಯ:** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಕರಣಹಸಿಗೆ (ಸಟೀಕು) ಮೊದಲಾದ ೭ ಕೃತಿಗಳಿವೆ.

—ಜಿಜಿಎಂ

## 280

ಕೆ. ೧೬೧೧/೨ **ಏಕೋತ್ತರ ಶತಸ್ಥಲ (ಸಟೀಕು)** ಹಾಡು, ಟೀಕು
೧೯.೫″ × ೨.೪″ ಜಕ್ಕಣಾರ್ಯ ಸು. ೧೪೩೦
೧-೫೩ ಪತ್ರ ೧೦ ಪಂಕ್ತಿ ೬೬ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಪ್ರಭವ ಸಂವತ್ಸರದ ಫಾಲ್ಗುಣ ಬ ೮ ಚಂದ್ರವಾರದಲ್ಲು ಜಕ್ಕಂಣಾರ್ಯರು ಸಂಗ್ರಹಿಸಿದ ಏಕೋತ್ತರ ಶತಸ್ಥಲದ ಟೀಕೆಯು ಬರಉದಕ್ಕೆ ಶುಭಮಸ್ತು XX ಏಕೋತ್ತರ ಶತಸ್ಥಲಂ||ಏಕಜ್ಞಾನ ಶೂಂನ್ಯಸ್ಥಲವೊಂದು ವುತ್ತರ ಮೇಲಾಗಿ ಪಿಂಡಸ್ತಲವಾದಿಯಾಗಿ ಜ್ಞಾನ ಶೂಂನ್ಯಸ್ಥಲವೆ ಕಡೆಯಾಗಿ ನೂರೊಂದು ಸ್ಥಲವು ಪರಶಿವನಿಂ ನಿರೂಪಿಸಲ್ಪಟ್ಟ ಕಾಮಿತವೆಂಬ ಮಹಾಗಮದಲ್ಲಿಯ ಮೇಲುಭಾಗೆಯಲ್ಲಿ ಶ್ರೇಷ್ಠವಾದ ವೀರಶೈವ ಮತವು ಹೇಳಲ್ಪಟ್ಟಿತು||

**ಅಂತ್ಯ :** ಮತ್ತಂ|| ಜಪಾವ್ಯಕ್ತಾ ಯಾಂ ವಾಚಿಯಂದು ವ್ಯಕ್ತಾವಾಚಿಯು ಮಹಾಪೂಜ್ಯವಾದಂತಾ ದಿವ್ಯದೀಪ್ಯಮಾನವಾದಂಥ ಮಂತ್ರ ಧ್ಯಾನಗಳಿಂದ ಮಂತ್ರ ಪಂಚಾಕ್ಷರಿಯ ಮಂತ್ರದ ಧ್ಯಾನಗಳಿಂದ ಅಪರಮಿತಪರಿತವಲ್ಲದ ಸೇವನಾರತರಾಗಿ ಸೇವನಾಭಜನೆಯಲ್ಲಿರತರಾಗಿ

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ವೈದ್ಯ ಚಿಕಿತ್ಸೆ ಎನ್ನುವ ಗ್ರಂಥವೂ ಇದೆ.

—ಜಿಜಿಎಂ

## 281

| | | |
|---|---|---|
| ಕೆ. ೧೬೧೫ | **ಏಕೋತ್ತರ ಶತಸ್ಥಲ (ಸಟೀಕು)** | ಹಾಸು, ಟೀಕು |
| ೨೦.೫" × ೨.೪" | ಜಕ್ಕಣಾರ್ಯ | ಸು. ೧೪೩೦ |
| ೧-೧೫೦ ಪತ್ರ | ೧೧ ಪಂಕ್ತಿ | ೮೬ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಜಕ್ಕಂಣಾರ್ಯರು ಸಂಗ್ರಹಿಸಿದ ಏಕೋತ್ತರ ಶತಸ್ಥಲದ ಟೀಕೆಯು ಬರೆವುದಕ್ಕೆ ಶುಭಮಸ್ತು|| ಶ್ರೀ ನಿರತಿಶಯೈಶ್ವರ್ಯವನುಳ್ಳಂಥ ಶಿಷ್ಯರ ಜ್ಞಾನಾಂಧ.... ಚಿತ್ಕಳೆ ಸಮರಸವಾಗಿ ಅಖಂಡ ಗೋಳುಕಾರ ತೇಜೋಮೂರ್ತಿ| ಆ ಮಹಾಲಿಂಗ ಸ್ವರೂಪವಾದ ಬಸವೇಶ್ವರನೆಂಬ ಸದ್ಗುರುಮೂರ್ತಿಗೋಸ್ಕರ ನಮಃ||

**ಅಂತ್ಯ :** ಅಂತು ಅಙಕ್ಯನ ಮಹಾಲಿಂಗಸ್ಥಲಕ್ಕಂ ಸೇರಿದ ಪದನು ೪೭ಕ್ಕಂ| ಅಂಗಸ್ಥಲ ೪೭ಕ್ಕಂ ಸೇರಿದ ಪದನು ೨೫೩ಕ್ಕಂ| ಲಿಂಗಸ್ಥಲ ೫೭ಕ್ಕಂ ಸೇರಿದ ಪದನು ೨೯೭ಕ್ಕಂ ಉಭಯಂ ೫೫ಕ್ಕಂ ಯೇಕೋತ್ತರ ಶತಸ್ಥಲಂ ರೌದ್ರಿ ಸಂವತ್ಸರದ ಅಮುತ್ಯ್ರಮವಾಸಿಯು ತದಿಗಿ ಶುಕ್ರವಾರ ಶುಕ್ಲಪಕ್ಷದೊಳ್ ಸಂಪೂರ್ಣಮಸ್ತು ಮಂಗಳ ಮಹಾ|| ಶ್ರೀಶ್ರೀ||XX ಶ್ರೀ ವೊಪ್ಪತ್ತಿನ ಚರ ಮೂರ್ತಿಗಳಾದಂಥ ಚಂನವೀರಪ್ಪನವಗೆ| ಐದು ಗಣಂಗಳು ಬರದುಕೊಟ್ಟ ನೂರೊಂದುಸ್ಥಲ ಪುಸ್ತಕ||

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ ಕೃತಿ. ಮೋಡಿ ಅಕ್ಷರ. ಪ್ರತಿ ಸುದೃಢ.

—ಎಂಪಿಎಂ

## 282

ಕೆ ೧೭೫೧/೬ **ಏಕೋತ್ತರ ಶತಸ್ಥಲ** ಹಾಡು

೧೩.೮″ × ೨.೨″ ಜಕ್ಕಣಾರ್ಯ ಸು. ೧೪೩೦

೧೫-೪೨ ಪತ್ರ ೯ ಪಂಕ್ತಿ ೫೨ ಅಕ್ಷರ

**ಆದಿ :** ಶ್ರೀಗುರು ಚೆಂನವೀರೇಭ್ಯೋ ನಮಃ|| ಜಕಂಣಾಚಾರ್ಯರು ನಿರೂಪಿಸಿದ ಯೇಕೋತ್ತರಶತಸ್ಥಲಪ್ರಥಮದಲ್ಲಿ ಪಿಂಡಸ್ಥಲ|| ರಾಗ|| ಮಧುಮಾಧವಿ|| ತಾಳಮರು|| ಪಲ್ಲ||

ಬಿಂದು ಬಿಂನಾಣದೊಳಗಂಧವಿಟ್ಟಿಹ ಕಳಾ
ಸಂದ ಪಿಂಡೋದಯದ ಗ್ನಾನಸಿರುತಾ|| ಪದ||
ಕಾರಮೇಘದೊಳು ಮಿಂಚಡಗಿ ತೋರಿದ ತೆರದಿ
ನೀರೊಳಡಕಂಗೈದ ಕಿಚ್ಚಿನಂತೆ
ಬೀರುತಿಹ ಫಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ||೧||

**ಅಂತ್ಯ :** ಅಂತು ಭಕ್ತಿಸ್ಥಲ ೧೫ಕ್ಕಂ ಪದ ೧೦೧ಕ್ಕಂ ಮಾಹೇಶ್ವರ ಸ್ಥಲ ೯ಕ್ಕಂ ಪದ ೪೭ಕ್ಕಂ ಪ್ರಸಾದಿಸ್ಥಲ ೭ಕ್ಕಂ ಪದ ೩೯ಕ್ಕಂ ಪ್ರಾಣಲಿಂಗಿಸ್ಥಲ ೫ಕ್ಕಂ ಪದ ೨೫ಕ್ಕಂ ಶರಣಸ್ಥಲ ೪ ಪದ ೨೦ಕ್ಕಂ ಐಕ್ಯಸ್ಥಲ ೪ ಪದ ೨೨ಕ್ಕಂ ಅಂತು ಅಂಗಸ್ಥಲ ೪೪ಕ್ಕಂ ಪದ ೨೫೪ಕ್ಕಂ ಆಚಾರಲಿಂಗಸ್ಥಲ ಪದ ೫೩ ಗುರು ಲಿಂಗಸ್ಥಲ ೯ ಪದ ೪೯ ಶಿವಲಿಂಗಸ್ಥಲ ೯ ಪದ ೪೭ ಜಂಗಮಲಿಂಗಸ್ಥಲ.... ಪದ ೫೮ ಪ್ರಸಾದಲಿಂಗಸ್ಥಲ ೯ ಪದ ೪೩ ಮಹಾಲಿಂಗಸ್ಥಲ ೯ ಪದ ೪೭ ಅಂತು ಲಿಂಗಸ್ಥಲ ೫೦ ವೃಭಯಸ್ಥಲ ೧೦೧ಕ್ಕಂ ಸೇರಿದ ಪದ ೫೫೧ ಶ್ರೀಶ್ರೀ

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಹಿರಿಯಮಂತ್ರಗೋಪ್ಯ ಮೊದಲಾದ ಇತರ ೮ ಕೃತಿಗಳಿವೆ.

—ಜಿಜಿಎಂ

## 283

ಕೆ.ಬಿ. ೭೨೫ **ಏಕೋತ್ತರ ಶತಸ್ಥಲ (ಸಟೀಕು)** ಹಾಡು,ಟೀಕು

೧೩″ × ೪″ ಜಕ್ಕಣಾರ್ಯ ಸು. ೧೪೩೦

೧-೧೨೯ ಪುಟ ೧೩ ಪಂಕ್ತಿ ೭೭ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ॥ ಶ್ರೀಗುರುಶಾಂತ ವೀರೇಭ್ಯೋ ನಮಃ। ಶ್ರೀಗುರು ಬಸವಲಿಂಗಾಯ ನಮಃ॥ ಶ್ರೀಷಡ್ಗುಣೈಶ್ವರ್ಯ ಸಂಪತ್ಕರವ ನುಳ್ಳಂಥ। ಗುರು। ಮುಕ್ತಿಪ್ರದಾಯಕನಾದಂಥ ಗುರುಪೂಜಕ್ಕೆ ಪ್ರಭು ವಾದಂಥ। ಬಸವ॥ ಬಕಾರವೆ ಭವ ಹರಗುರು। ಸಕಾರವೆ ಸಕಲಚೈತಂನ್ಯಾ ತ್ಮಕವಪ್ಪ ಲಿಂಗವ। ವಕಾರವೆ ವಚಿಸುವದಕ್ಕೆ ಕಾರಣವಾದ ಮಹಾನುಭಾವ ಮೂರ್ತಿಯಪ್ಪ। ಜಂಗಮೂ। ಯಿಂತೀ। ಗುರುಲಿಂಗ ಜಂಗಮ ಸ್ವರೂಪ ವಾದಂಥ। ಲಿಂಗ। ಲ್ಲಯುಗಮನಂಗಳಿಗಾಲಯವಾದ ಮಹಾಲಿಂಗಮೂರ್ತಿ ಯುಆಯಾನಮು। ಆಯ। ಯಿಷ್ಟಿಸ್ವರೂಪವಾಧಾತನೆ ಬಸವೇಶ್ವರನು। ಅಂತಪ್ಪ ಸಂಗನ ಬಸವೇಶ್ವರಸ್ವಾಮಿಗಳೆಂಬ ಮಹಾಜ್ಞಾನ ಗುರಕರ್ತೃ ಗೋಸ್ಕರ। ನಮಃ।

ಜಕ್ಕಣಚಾರ್ಯರು। ಜಕ್ಕಂಣಾಚಾರ್ಯರೆಂಬ ಶಿವಾಚಾರ್ಯರು। ಸೇರಿಸಿದ ಸೇರ್ಪಡೆ ಮಾಡಿದ। ಯೇಕೋತ್ತರ ಶತಸ್ಥಲ ಯೇಕವೆಂದರೆ ಒಂದು। ಎತ್ತರವೆಂದರೆ

ಅಂತ್ಯ : ಶಬ್ದ ನಿಃಶಬ್ದವಾಗಿ ನಿಃಶ್ಯಬ್ದವನಾಹತವಾಗಿ। ಶಬ್ದ ನಿಃಶಬ್ದವೆಂಬ ಬುದ್ಧಿಯು ನಿರವಯವಾಗಿ। ಯಿದ್ದುದು ಹೋದುದೆಂಬುದನರಿಯದೆ ಪ್ಯಾರೆಗಟ್ಟಿ ನಿಃ ಶಬ್ದ ಗಂಭೀರ ಗೋಹೇಶ್ವರ ನಿಂಮ ಬಸವಣ್ಣಾ॥ ಟೀ॥ ಶಬ್ದ॥ ಶಬ್ದ ಸ್ವರೂಪವಾದ ಶರಣನಾಗಿ॥ ನಿಃಶಬ್ದವಾಗಿ। ನಿಃಶಬ್ದ ಸ್ವರೂಪವಾದಂಥ ಲಿಂಗವಾಗಿXಮಹಾಲಿಂಗ ನವವಿಧಸ್ಥಲ ಸಂಪೂರ್ಣಂ। ಅಂತು ಅಂಗಸ್ಥಲ ॥೪೪॥ ಲಿಂಗಸ್ಥಲ॥ ೫೩॥ ಉಭಯಸ್ಥಲ॥ ೧೦೧॥ ಕ್ಕೆ ಸೇರಿದ ಪದಂ ಗಳು॥ ೫೫೩ಕ್ಕಂ ಮಂಗಳ ಮಹಾಶ್ರೀ॥ ಅಂತು ಯೇಕೋತ್ತರಶತಶ್ಥಲಕ್ಕೆ ಶೇರಿದ ವಚನಂಗಳು॥ ೫೫೩ಕ್ಕಂ ಸಂಪೂರ್ಣಂ॥ ಶ್ರೀ ಜಕ್ಕಣಾಚಾರ್ಯರು ಶೇರಿಸಿದ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾಶ್ರೀ॥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ಯಾಲಿವಾಹನಸಕ ೧೮೨೫ನೆಯ ಪ್ರವರ್ತಮಾನೆ ಸೋಭಾನುಕೃತನಾಮ ಸಶ್ವೇರದಾಮಿತಿ॥ ಚೈತ್ರ ಬ॥ ೫ ಸುಕ್ರವಾರ ಮೊದಲನೆ ಜ್ಯಾವದಲ್ಲಿ॥ ಸ್ತಲದ ವ್ಯಾಖ್ಯಾನ ಪುಸ್ತಕವರಿ ಸಮಾಪ್ತ ಮಂಗಳ ಮಹಾ॥ ಯಿಾ ಪುಸ್ತಕ ಬರದವರ್‍ಯಾರದಂರೆ॥ ಹುಮುದಾಬಾಧಿ॥ ಮಾಗಾ ಯಿ ವೀರಪಾಕ್ಷಪ್ಪನು ಬಾರದು॥ ಯೇನು ಅರಿಯನ್ನು॥ ಬಲ್ಲಂಥಾ ಗ್ಞಾನಿಗಳು ತಿದ್ದಿಕೊಳ್ಳಬೇಕು॥ ಶ್ರೀ॥ ನಿರ್ಮಲವಾದ ನಿರತಿಶಯ ಜ್ಞಾನದ ನಿಜೈಶ್ವರ್ಯವನೆ ಪಡದು ಬಾಳುವರು ಯೆಂಬುದೀಗ ಶ್ರೀ ಶ್ರೀ ಬಸವ ಲಿಂಗಾಯ ನಮಃ

ವಿಷಯ : ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸ್ಫುಟಾಕ್ಷರ. ಕೃತಿ ಸಮಗ್ರವಾಗಿದೆ. ಹಳೆಯ ಕಾಗದ. ಕೆಲವು ಪತ್ರಗಳು ಹರಿದಿವೆ.

—ಎಸ್ ಎನ್ ಕೆ

## 284

ಕೆ. ೯೯೯/೬ — **ಏಕೋತ್ತರ ಶತಸ್ಥಲ** — ಸೂತ್ರ, ಹಾಡು

೮″ × ೨.೨″ — ಮಹಲಿಂಗ — ೧೪೩೦

೧೭-೫೦ ಪತ್ರ — ೧೩ ಪಂಕ್ತಿ — ೪೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಯೇಕೋತ್ತರ ಶತಸ್ಥಲ. ಪ್ರಥಮದಲ್ಲಿ ಪಿಂಡಸ್ಥಲ||
ರಾಗ ಮಧುಮಾಧವಿ|| ತಾಳರೂಪಕ||
ಪಲ್ಲವ|| ಬಿಂದು ಬಂನಾಣದೊಳಗಂಧವಿಟ್ಟಿಹ ಕಳಾ
ಸಂದ ಪಿಂಡೋದಯದ ಜ್ಞಾನನಿರುತಾ
ಪದ|| ಕಾರಮೇಘದೊಳು ಮಿಂಚಡಗಿ
ತೋಜದ ತೆಱದಿ ನೀರೊಳಡಕಂಗೆಯ್ದು ಕಿಚ್ಚಿನಂತೆ
ಬೀರುತಿಹ ಫಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕಮುತ್ತಿನಂತೆ ||೧||

**ಅಂತ್ಯ :** ಶಬ್ದನಿಃಶಬ್ದವಾಗಿ ನಿಃಶಬ್ದವನಾಹತವಾಗಿ ಶಬ್ದ ನಿಃಶಬ್ದವೆಂಬ ಬುದ್ಧಿಯು ನಿರ್ವಯಲಾಗಿ ಯಿದ್ದುದು ಹೋದದೆಂಬುದನರಿಯದೆ
ಮೇರೆಗೆಟ್ಟ ನಿಃಶಬ್ದ ಗಂಭೀರ ಗೊಹೇಶ್ವರಾ ನಿಂಮ ಬಸವಂಣಾ ||೭||
ಭಕ್ತಿಸ್ಥಲ ೧೫ಕ್ಕಂ ಪದನು ೧೦೧ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ. ಅಂಗಸ್ಥಲ ೪೪ಕ್ಕಂ ಸೇರಿಸಿದ ಪದನು ೨೫೪ ಲಿಂಗಸ್ಥಲ ೫೭ಕ್ಕಂ ಸೇರಿಸಿದ ಪದನು ೨೯೭ ಉಭಸ್ಥಲ ೫೫೧ಕ್ಕಂ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಕರಣಹಸಿಗೆಯೇ ಮೊದಲಾದ ಇತರ ೮ ಕೃತಿಗಳಿವೆ. ಅನ್ಯವಾದ ಕೋಲಾಹಲವೆಂಬ ಕೃತಿ ತೆಲುಗು ಭಾಷೆಯದು.

—ಜಿಜಿಎಂ

## 285

ಕೆ. ೧೧೫೫/೩ — **ಏಕೋತ್ತರ ಶತಸ್ಥಲ** — ಸೂತ್ರ, ಹಾಡು

೧೭″ × ೨″ — ಮಹಲಿಂಗ — ೧೪೩೦

೧೯೬-೨೯೬ ಪತ್ರ — ೧೪ ಪಂಕ್ತಿ — ೯೨ ಅಕ್ಷರ

**ಆದಿ :** ಶ್ರೀ ಗುರುಲಿಂಗಾಯ ನಮಃ। ಯೇಕೋತ್ತರ ಶತಸ್ಥಲ। ಸ್ವಸ್ತಿ ಸಮಸ್ತ ಭುವನಜನ ತಿಮಿರಹರ ಕಾರಣ ಸ್ವರೂಪರುಂ ಭಕ್ತದೇಹಿಕ ದೇವರುಂ। ಭಕ್ತಿವತ್ಸಲರುಂ। ಸರ್ವಾಂಗ ಪ್ರಾಣಲಿಂಗಮೂರ್ತಿ ವಿಲಾಸರು। ಪುಲಿಗೆಱೆಯ ಪುರವರಾಧೀಶ್ವರರುಂ ಅಪೂರ್ವ ಸ್ವಯಂಭು ಪ್ರಸನ್ನ ಚೆನ್ನ ದಕ್ಷಿಣ ಶ್ರೀ ಸೋಮನಾಥದೇವರ ದಿವ್ಯ ಶ್ರೀಪಾದ ಪದ್ಮಾರಾಧಕರ ಂ। ತ್ರಿಕಾಂಡ ನಿಷ್ಟರುಂ ಭುಗ್ಯಜುಃ ಸೋಮಾಥರ್ವಣಾಂತರ್ಗ್ಗತ ಪ್ರತಿಪಾದ್ಯ ಪ್ರಮುಖರುಂ। ಶೃತಿ ಸ್ಮೃತಿ ಪುರಾಣಗಮ ಇತಿಹಾಸಾದಿ ನಾನಾ ಶಾಸ್ತ್ರ ಕೋವಿದರುಂ। ಪರಮ ವೀರಶೈವಾಗಮಾಚಾರ್ಯರುಂ। ಸಕಲ ಪ್ರಸಾದ ಪಂಚಾಕ್ಷರೀಮಂತ್ರಸಿದ್ಧರುಂ। ನಿತ್ಯ ಪರಿಪೂರ್ಣ ಸಚ್ಚಿದಾನಂದ ನಿರಂಜನ ಪರಂಜ್ಯೋತಿಸ್ವರೂಪರುಮಪ್ಪ ಪರಮಗುರುಮೂರ್ತಿ ಜಗದಾರಾಧ್ಯರುಮಪ್ಪ ಮಹಾಲಿಂಗದೇವರ ಅನಾದಿಸಂಸಿದ್ಧ ಗುರುಕುಲ। ದನ್ವಯಮೆಂತೆಂದೊಡೆ ಪ್ರಥಮದಲ್ಲಿ ನಿತ್ಯನಿರ್ಮ್ಮಳ ನಿರಂಜನ ವಾಗ್ಮನಕ್ಕಗೋಚರನಪ್ಪ ಪರಶಿವನು।

**ಅಂತ್ಯ :** ಶಬ್ದಃ ನಿಃಶಬ್ದವಾಗಿ ನಿಃಶಬ್ದವನಾಹತವಾಗಿ ಶಬ್ದನಿಃಶಬ್ದವೆಂಬ ಬುದ್ಧಿಯು ನಿರ್ವಯಲಾಗಿ ಯಿದ್ದುದೂ ಹೋದುದೆಂಬುದನಱಿಯದೆ ಮೀರಿಗೆಟ್ಟೊ ನಿಃಶಬ್ದಗಂಭೀರ ಗೋಗೇಶ್ವರಾ ನಿಮ್ಮ ಬಸವಾ ॥೬॥ ಯಿಂತು ಐಕ್ಯಸ್ಥಲಕ್ಕೆ ಸಂಮಂದಿಶಿದ ಲಿಂಗಸ್ಥಲ ೯ಕ್ಕಂ ಸೇರಿದ ವಚನ ೬೧ಸ್ಥಲ ನಿರ್ದೇಶದ ಪದ ೪೭ ಉಭಯ ೧೦೮ಲಕ್ಕಂ ಸರ್ವಮಂಗಲಂ.

ಗದ್ಯ: ಸ್ವಸ್ತಿ ಸಮಸ್ತ ಭುವನಜನ ಭವತಿಮಿರಹರಣಕಾರಣ ಸ್ವರೂಪರುಂ। ಭಕ್ತದೇಹಕ ದೇವರುಂ। ಭಕ್ತಿವತ್ಸಲರುಂ। ಸರ್ವಾಂಗ ಪ್ರಾಣಲಿಂಗಮೂರ್ತಿ ವಿಲಾಸರುಂ।XXX ಶ್ರೀಮದನೇಕ ಬ್ರಹ್ಮಾಂಡ ಬಾಂಡ ಗರ್ಭಗುಬ್ಬಿಕೃತ ಮಹಾನಾಭವಿಧಿ ಮಧುಸೂಧನ ತ್ರಿಧನಾಧೀಶ್ವರಾಧ್ಯನೇಕ ದೇವತಾ ಮಣಿಮುಕುಟಗಣಕಿರಣ ಪ್ರಭಾ ಸಂಮಿಶ್ರಯದಶದಿಗ್ಭರಿತ ಮಯೂಕ ಮರ್ತುಕಾಶ್ರಯಗ ಕರಾಲಂಕೃತ ಪಾದಪಯೋಜ ಪರಶಿವ ಲೀಲಾಸ್ವೀಕೃತ ಕಳೆವರರುಮಪ್ಪ ಶ್ರೀ ನಂದಿನಾಥ ಶ್ರೀ ಭೃಂಗಿನಾಥ ಶ್ರೀ ವೀರಭದ್ರದೇವರು ಮುಖ್ಯರಾದ ದೇವ ಪೃಥ್ವಿ ಮಹಾಮಹತ್ತಿನೊಳಗಾದ ಶ್ರೀ ಮಹಾಮೇರುವಿನ ದಕ್ಷಿಣ ದಿಗ್ಭಾಗದಲ್ಲಿ ಪೊಪ್ಪುತಿರ್ಪ ಕಲ್ಯಾಣ ಪಟ್ಟಣದ ಹಾಳಿನ ಪಿರಿಯ ಹಂಪಯ್ಯ ಅಯ್ಯನವರು ಚಿಕ್ಕ ಹಂಪಯ್ಯ ಅಯ್ಯನವರು ಗುಂಮಳಾಪುರದ ಚೆನ್ನಮಲ್ಲಿಕಾರ್ಜುನದೇವರ ಶಿಷ್ಯರು ವಿರಕ್ತ ಜೆಡೆಸಿದ್ಧಲಿಂಗದೇವರು ಅಯ್ಯನವರಿಗೆ ಬರೆಯಿಸಿ ಭಕ್ತಿಮಾಡಿದ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾಶ್ರೀ ಸಾಧಾರಣ ಸಂವತ್ಸರದ ಆಷಾಢ

ಬಹುಳ ೧೦ ಬೃಹಸ್ಪತಿವಾರ ಗುಂಮುಳಾಪುರದಲ್ಲಿ ವಿಷಕಂಠಸೆಟ್ಟಿ ಮಗ ಕೆಂಪನು ಬರದು ಮುಗಿದ ಏಕೋತ್ತರ ಶತಸ್ಥಲ.

ವಿಷಯ : ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

ವಿಶೇಷ : ಸ್ಫುಟಾಕ್ಷರ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಪ್ರಭುದೇವರ ಟೀಕಿನ ವಚನ, ಲಿಂಗಲೀಲಾವಿಲಾಸ ಚಾರಿತ್ರ—ಈ ಗ್ರಂಥಗಳಿವೆ.

—ವೈಸಿಬಿ

## 286

| ಕೆ. ೧೨೦೦/೨ | **ಏಕೋತ್ತರ ಶತಸ್ಥಲ** | ಸೂತ್ರ,ಹಾಡು |
|---|---|---|
| ೧೧.೨" × ೧.೯" | ಮಹಲಿಂಗ | ೧೪೩೦ |
| ೧೧೪-೨೪೫ ಪತ್ರ | ೧೨ ಪಂಕ್ತಿ | ೬೦ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ।। ಯೇಕೋತ್ತರ ಶತಸ್ಥಲ।।
ಸ್ವಸ್ತಿ ಸಮಸ್ತ ಭುವನಜನ ತಿಮಿರಹರಣಕಾರಣ ಭಕ್ತದೇಹಿಕ ದೇವರುಂ ಸರ್ವಾಂಗ ಪ್ರಾಣಲಿಂಗಮೂರ್ತಿ ಮೂರ್ತಿ ವಿಲಾಸರುಂ XX ಪ್ರಥಮದಲ್ಲಿ ಪಿಂಡಸ್ಥಲ।। ಕಲ್ಲೊಳಗಣ ಪಾವಕನಂತೆ। ವುದಕದೊಳಗಣ ಪ್ರತಿಬಿಂಬ ದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಃಶಬ್ದದಂತೆ ಗುಹೇ ಶ್ವರಾ ನಿಮ್ಮ ಶರಣಸಂಬಂಧ ।।೧।।

ಅಂತ್ಯ : ಪಂಚೇಂದ್ರಿಯಾರ್ಪ್ಪಣ ದೀಕ್ಷೆ। ನಿರಪರಾಧಿ ಪ್ರಾಣಿಗಳ ಕೊಲ್ಲದಿಪ್ಪುದೆ। ....ಪಾವನ ಶರಣಂಗೆ ಅದೀಗ। ಅಹಿಂಸೆಯೆನಿಪ್ಪ ದೀಕ್ಷೆಜ್ಞಾತಜ್ಞಾನ ಜ್ಞಾಯಮೆಂಬ ಆದಿ ಮಧ್ಯ ಅವಸಾನರಹಿತಮಹ ಪರಶಿವಲಿಂಗವೆ ತಾನೆಂಬು ದೀಗ। ಲಿಂಗ ನಿಜದೀಕ್ಷೆ ಕರಸ್ಥಲದ ಯಿಷ್ಟಾಲಿಂಗದೊಳು ಮನವು ಲಯ ವನೈದಿಪ್ಪುದೀಗ ಮನೋರ್ಲಯ ದೀಕ್ಷೆ। ಅಂಗ ಮನ ಪ್ರಾಣಂಗಳು ಲಿಂಗ ದೊಳು ಬಿಚ್ಚಿದಾಗದೆ ಬೆರಸಿಪ್ಪುದೀಗ। ಸದ್ಯಸ್ಮುಕ್ತಿ ದೀಕ್ಷೆ। ಈ ಯೇಳನು ಗಮ ಸಂಬಂಧವಾದ ಕಾರಣ ತನುವಿಂಗೆ ಉಪದೇಶಿಸುವುದೀಗ। ಈ ಯೇಳನು ಮನಕ್ಕುಪದೇಶವ ಮಾಡುವುದೆಂಬ ಶಬ್ದಕ್ಕರ್ಥ।। ಇವೇಳು ಇಪ್ಪತ್ತೊಂದು ದೀಕ್ಷೆಕ್ರಮ... ಶ್ರೀಗುರು ಶಿಷ್ಯನ ಲಿಂಗ ಪ್ರಾಣ ಮನಂಗಳಿಗೆ ಉಪದೇಶಿಸುವುದೆ ಸಹಜ ದೀಕ್ಷೆಯೆಂಬುದೀಗ....

ವಿಷಯ : ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

ವಿಶೇಷ : ಅಸಮಗ್ರ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಪ್ರಭುದೇವರ ಟೀಕಿನ ವಚನಗಳು ಎಂಬ ಕೃತಿಯಿದೆ.

—ವೈಸಿಬಿ

## 287

ಕೆ. ೧೨೯೭ **ಏಕೋತ್ತರ ಶತಸ್ಥಲ** ಸೂತ್ರ, ಹಾಡು

೮.೬" × ೨.೫" ಮಹಲಿಂಗ ೧೪೩೦

೧-೬೪ ಪತ್ರ ೧೮ ಪಂಕ್ತಿ ೬೭ ಅಕ್ಷರ

**ಆದಿ :** ....ಸ್ವಸ್ತಿ ಸಮಸ್ತ ಭುವನಜನ ತಿಮಿರಹರಣ....ಪುಲಿಗೆಱೆಂಬ ಪುರವರಾಧೀಶ್ವರರುಂ ಅಪೂರ್ವ ಸ್ವಯಂಭು ಪ್ರಸನ್ನ ಚೆನ್ನ ದಕ್ಷಿಣ ಶ್ರೀ ಸೋಮನಾಥ ದೇವರ ದಿವ್ಯ ಶ್ರೀಪಾದಪದ್ಮಾರಾಧಕರುಂ। ತ್ರಿಕಾಂಡ ನಿಷ್ಠರುಂ। ರುಗ್ಯಜಃ ಸಾಮಥರ್ವಣಾಂತರ್ಗತ ಪ್ರತಿಪಾದ್ಯ ಪ್ರಮುಖರುಂ ಶೃತಿಸ್ಮೃತಿ ಪುರಾಣಾಗಮ ಇತಿಹಾಸಾದಿ ನಾನಾ ಶಾಸ್ತ್ರಕೋವಿದರುಂ ಪರಮ ವೀರಶೈವಾಗಮಾಚಾರ್ಯರುಂ ಸಕಲ ಪ್ರಸಾದ ಪಂಚಾಕ್ಷರೀಮಂತ್ರಸಿದ್ಧರುಂ ನಿತ್ಯ ಪರಿಪೂರ್ಣ ಸಚ್ಚಿದಾನಂದ ನಿರಂಜನ ಪರಂಜ್ಯೋತಿ ಸ್ವರೂಪರುಮಪ್ಪ ಪರಮ ಗುರುಮೂರ್ತಿ ಜಗದಾರಾಧ್ಯರುಮಪ್ಪ ಮಹಲಿಂಗದೇವರ ಅನಾದಿ ಸಂಸಿದ್ಧ ಗುರುಕುಲದನ್ವಯಮೆಂತೆಂದಡೆ

**ಅಂತ್ಯ :** ಶಬ್ದ ನಿಃಶಬ್ದವಾಗಿ ನಿಃಶಬ್ದವನಾಹತವಾಗಿ। ಶಬ್ದ ನಿಃಶಬ್ದವೆಂಬ ಬುದ್ಧಿಯು ನಿರ್ಣಯಲಾಗಿ। ಯಿದ್ದುದು ಹೋದುದುದೆಂಬುದನಱಿಯದೆ ಮೇರೆಗೆಟ್ಟ ನಿಃಶಬ್ದ ಗಂಭೀರ ಗುಹೇಶ್ವರಾ॥ ಅಂತು ಯೇಕೋತ್ತರ ಶತಸ್ಥಲಕ್ಕಂ ಸೇರಿದ ವಚನ ೯೩೪ ಸ್ಥಲ ನಿರ್ದೇಶದ ಪದ ೫೫ ರುಭಯಮಂ ೧೪೮೬ಕ್ಕಂ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಶಿಥಿಲ ಪ್ರತಿ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನ ಕೊನೆಯಲ್ಲಿ ವೀರಶೈವ ವಚನಗಳಿರುವ ೩ ಪತ್ರಗಳಿವೆ.

—ವೈಸಿಜ

## 288

ಕೆ. ೧೩೬೧/೪ **ಏಕೋತ್ತರ ಶತಸ್ಥಲ** ಸೂತ್ರ, ಹಾಡು

೬.೭" × ೧.೮" ಮಹಲಿಂಗ ೧೪೩೦

೩೨-೧೦೫ ಪತ್ರ ೧೦ ಪಂಕ್ತಿ ೩೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಏಕೋತ್ತರ ಸ್ಥಲ ಬರೆವುದಕ್ಕೆ ಶುಭಮಸ್ತು॥ ಪ್ರಥಮದಲ್ಲಿ ಪಿಂಡಸ್ಥಲ॥ XXರಾಗ ಮಧುಮಾಧವಿ॥ ತಾಳ ರೂಪಕ॥ ಪಲ್ಲವಾ॥

ಬಿಂದು ಬಿಂನಾಣದೊಳಗಂದವಿಟ್ಟಹ ಕಳಾ

ನಂದ ಪಿಂಡೋದಯದಜ್ಞಾನ ನಿರತಾ॥

ಪದ|| ಕಾರಮೇಘದೊಳು ಮಿಂಚಡಗಿ ತೋರುವ ತೆರದಿ
ನೀರೊಳಡಕಂಗೆಯ್ದ ಕಿಚ್ಚಿನಂತೆ||
ಬೀರುತಿಹ ಪಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ||೧||

**ಅಂತ್ಯ :** ಜ್ಞಾನಶೂನ್ಯಸ್ಥಲ ||೬|| ಶಬ್ಧಂ ನಿಃಶಬ್ದವನಾಹತವಾಗಿ ಶಬ್ದನಿಃಶಬ್ದವೆಂಬ ಬುದ್ಧಿ ನಿರ್ವ್ವರ್ಣಯಲಾಗಿ ಯಿದ್ದುದಂ ಹೋದುದೆಂಬುದನೆರಿಯದೇ ಮೋಜತಿಗೆಟ್ಟು ನಿಃಶಬ್ದಗಂಭೀರ ಗೋಹೇಶ್ವರ ನಿಂಮ ಬಸವಂಣಾ ||೭|| ಅಂತೂ ಐಕ್ಯಸ್ಥಲಕ್ಕೆ ಸಂಬಂಧಿಸಿದ ಲಿಂಗಸ್ಥಲ ೯ಕ್ಕಂ ಸೇರಿದ ಪದನು ೪೭ಕ್ಕಂ| ಅಂತೂ ಏಕೋತ್ತ್ರರ ಶತಸ್ಥಲ ೧೦೧ಕ್ಕಂ ಪದನು ೫೫೧ಕ್ಕಂ ಸೂತ್ರ ೧೦೦ಕ್ಕಂ ಸಂಪೂರ್ನ್ನ ಮಂಗಲ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಕೆಲವು ಪತ್ರಗಳಲ್ಲಿ ಅಕ್ಷರಗಳು ಮೋಡಿಯಾಗಿವೆ; ಬಾಕಿ ಪತ್ರಗಳಲ್ಲಿ ಸುಂದರವಾಗಿವೆ. ಈ ಕೃತಿಯೊಂದಿಗೆ ಮಿಶ್ರಾರ್ಪಣ ಮುಂತಾದ ಇತರ ೫ ಕೃತಿಗಳಿವೆ.

—ಎಂಪಿಎಂ

## 289

| ಕೆ. ೧೩೭೩/೧ | **ಏಕೋತ್ತರ ಶತಸ್ಥಲ** | ಸೂತ್ರ, ಹಾಡು, ವಚನ |
|---|---|---|
| ೪" × ೧.೮" | ಮಹಲಿಂಗ | ೧೪೩೦ |
| ೧-೫೯ ಪತ್ರ | ೧೪ ಪಂಕ್ತಿ | ೨೭ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಏಕೋತ್ತ್ರರ ಶತಸ್ಥಲ|| ಸ್ವರವಚನ ಪ್ರಥಮದಲ್ಲಿ... ಸ್ಥಲ|| ಪಲ್ಲವ||
ಬಿಂದು ಬಿಂನಾಣದೊಳಗಂದವಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನ ನಿರತಾ||

ಪದ|| ಕಾರಮೇಘದೊಳು ಮಿಂಚಡಗಿ ತೋರುವ ತೆರದಿ
ನೀರೊಳಡಕಂಗೆಯ್ದ ಕಿಚ್ಚಿನಂತೆ||
ಬೀರುತಿಹ ಪಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ||೧||

**ಅಂತ್ಯ :** ಶಬ್ದ ನಿಃಶಬ್ದವಾಗಿ ನಿಃಶಬ್ದದನಾಹತವಾಗಿ| ಶಬ್ದ ನಿಃಶಬ್ದವೆಂಬ ಬುದ್ಧಿ ನಿರ್ವ್ವರ್ಣಯಲಾಗಿ| ಯಿದ್ದುದು ಹೋದುದೆಂಬುದನಱಿಯದೆ ಮತಿಗೆಟ್ಟು ನಿಃಶಬ್ದ ಗಂಭೀರ ಗೊಹೇಶ್ವರಾ ನಿಂಮ ಬಸವಂಣಾ ||೭|| ಯಿಂತೂ ಐಕ್ಯಸ್ಥಲನವಪ್ರ|| ಮಹಾಲಿಂಗ ನವವಿಧ ಸಮಾಪ್ತ ಮಂಗಳ ಮಹಾಶ್ರೀ||

ಅಂತೂ ಅಂಗಸ್ಥಲ ೪೪ ಲಿಂಗಸ್ಥಲ ೫೭ ಉಭಯಂ ೧೦೧ಕ್ಕಂ ಸೇರಿದ ವಚನ ೫೫೩ಕ್ಕಂ ನೂರೊಂದು ಸ್ಥಲ ಸಮಾಪ್ತ ಮಂಗಲ ಮಹಾಶ್ರೀ||

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಕೃತಿ ಸಮಗ್ರ. ಕೆಲವು ಗರಿಗಳು ಮಧ್ಯದಲ್ಲಿ ಸ್ವಲ್ಪ ಸ್ವಲ್ಪ ತ್ರುಟಿತವಾಗಿವೆ. ಶಕಟರೇಫದ ಬಳಕೆ ಇದೆ. ಈ ಕೃತಿಯೊಂದಿಗೆ ಪಂಚೀಕರಣ ಮುಂತಾದ ಇತರ ೪ ಕೃತಿಗಳಿವೆ.

—ಎಂಪಿಎಂ

## 290

ಕೆ. ೧೪೦೪/೨ **ಏಕೋತ್ತರ ಶತಸ್ಥಲ** ಸೂತ್ರ, ಹಾಡು

೧೫.೫" × ೨" ಮಹಲಿಂಗ ೧೪೩೦

೧೦೪-೧೭೨ ಪತ್ರ ೧೩ ಪಂಕ್ತಿ ೧೦೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯೇ ನಮಃ|| ಪೀಠಿಕೆ||
ಸ್ವಸ್ತಿ ಸಮಸ್ತ ಭುವನಜನ ತಿಮಿರಹರಣ ಕಾರಣ ಸ್ವರೂಪರುಂ| ಭಕ್ತ ದೇಹಿಕ ದೇವರುಂXX ಭಕ್ತಿ ಭಂಡಾರಿ ಜಂಕಣ್ಣನು ಆ ಶ್ರೀ ಗುರುರಾಯಂಗೆ ಬಿಂನಪಂಗೆಯ್ದು ಪರಮ ಗುರುವೆ ನಿಂಮಡಿಗಳು ಯೆಂನ ಪೂರ್ವಜನ್ಮ ನಿವೃತ್ತಿಯಂ ಮಾಡಿ ಪುನಾಜ್ಜಾರ್ತನೆನಿಸಿ ಅಂಗದಲ್ಲಿ ಲಿಂಗಪ್ರತಿಷ್ಟೆಯ ಮಾಡಿ ಪ್ರಣವ ಪಂಚಾಕ್ಷರಿಯ ಪ್ರಾಣಸ್ಥಳದಲ್ಲಿ ಸ್ಥಾಪಿಸಿXXಆ ಷಡುಸ್ಥಲದಲ್ಲಿ|| ಅಂಗಸ್ಥಲ ೪೪ ಲಿಂಗಸ್ಥಲ ೫೭| ಉಭಯಸ್ಥಲ ಯೇಕೋತ್ತರ ಸ್ಥಲಂಗಳಾದವು| ಆ ಭೇದವೆಂತೆಂದೊಡೆ ಪ್ರಥಮದಲ್ಲಿ ಪಿಂಡಸ್ಥಲ||

**ಅಂತ್ಯ :** ಅಪ್ಪ ಮಹಾಲಿಂಗದೇವರು ತಂಮ ದಿವ್ಯ ಜ್ಞಾನಾನಂದ ಸಿದ್ಧವರ ಪ್ರಸಂಗ ಪ್ರಸಾದವನೂ ನಿಜತತ್ಸಿಷ್ಯ ಭಕ್ತಿ ಭಂಡಾರಿ ಜಕ್ಕಂನಾರ್‍ಯ್ಯಂಗೆ ಸತ್ಪ್ರೇಮ ಮಹಾನುಭಾವ ಸಂಬೋಧೆ ಸಂಬಂಧ ನಿರೂಪಣ ಕಾರಣಾರ್ತ್ಥ ವಿರಚಿತಮಪ್ಪ ಯೇಕೋತ್ತರ ಸ್ಥಲದೊಳೈಕ್ಯಸ್ಥಲಕ್ಕೆ ಸಂಮಂಧವಾದXXಲಿಂಗಸ್ಥಲ ನಾಲ್ವತ್ತನಾಲ್ಕಕ್ಕೆ ಸೇರಿದ ವಚನ ೪೬೩ಕ್ಕಂ ಸ್ಥಲನಿರ್ದೇಶದ ಪದ ೨೫೩ಕ್ಕಂ ಉಭಯಂ ವಚನ ೭೧೮ ಲಿಂಗಸ್ಥಲ ೫೭ಕ್ಕಂ ಸೇರಿದ ವಚನ ೪೬೨ಕ್ಕಂ ಸ್ಥಲನಿರ್ದೇಶದ ಪದ ೨೫೫ಕ್ಕಂ ಉಭಯ ವಚನ ೭೫೭ ಯಿಂತೂ ಕೂಡಲೂ ೧೦೬೭೫ಕ್ಕಂ ಪಿಂಡಾದಿ ಜ್ಞಾನ ಶೂನ್ಯಂತಮಾದ ಯೇಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾಶ್ರೀ ||೩||

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ೧೩೭, ೧೬೧ನೇ ಪತ್ರಗಳು ಮುರಿದಿವೆ. ೧೬೦ನೇ ಪತ್ರ ತ್ರುಟಿತವಾಗಿದೆ. ಶಕಟರೇಫದ ಬಳಕೆಯಿದೆ. ಬರವಣಿಗೆ ಸುಂದರವಾಗಿದೆ. ಇದರೊಂದಿಗೆ ಲಿಂಗಲೀಲಾವಿಲಾಸ ಚಾರಿತ್ರ ಎಂಬ ಇನ್ನೊಂದು ಕೃತಿಯಿದೆ.

—ಎಂಪಿಎಂ

## 291

ಕೆ. ೧೪೪೬/೧ | **ಏಕೋತ್ತರ ಶತಸ್ಥಲ** | ಸೂತ್ರ, ಹಾಡು

೧೧.೭″ × ೨″ | ಮಹಲಿಂಗ | ೧೪೩೦

೧-೧೨೭ ಪತ್ರ | ೧೦ ಪಂಕ್ತಿ | ೭೫ ಅಕ್ಷರ

**ಆದಿ :** ಶ್ರೀ ಗಂಗಾಧರಾಯ ನಮಃ॥ ಸ್ವಸ್ತಿ ಸಮಸ್ತ ಭುವನಜನ ತಿಮಿರಹರ ಕಾರಣ ಸ್ವರೂಪರುಂ....ಗೆಜ್ಜೆಯ ಪುರವರಾಧೀಶ್ವರರುಂXXನವದಶದಲ್ಲಿ ಬಂಕಯ್ಯದೇವರು ವಿಂಶತಿಯಲ್ಲಿ ಮಹಾಲಿಂಗದೇವರುXXಭಕ್ತಿಭಂಡಾರಿ ಜಕ್ಕಂಣನುXXಆಶ್ರೀಗುರುಸ್ವಾಮಿ ತಂಮ ಪರಮ ಜ್ಞಾನಾನುಭವ ಪಸನ್ನ ಪ್ರಕಾಶದಿಂ ಷಡುಸ್ಥಲವನು ಬಸವರಾಜ ದೇವರು ಚೆಂನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಪರಮವಾಕ್ಯಾ ಮೃತವಪ್ಪ ವಚನಂಗಳಿಂದ ಆತ ಶಿಷ್ಯಂಗೆ ಬೋಧಿಸುತ್ತಿರಲು

**ಅಂತ್ಯ :** ಗದ್ಯ॥ ಸ್ವಸ್ತಿ ಸಮಸ್ತ ಭುವನ ತಿಮಿರಹರಣ ಕಾರಣ ಸ್ವರೂಪರುಂ ಪುಲಿ ಗೆಜ್ಜೆಯ ಪುರವರಾಧೀಶ್ವರರುಂ। ಅಪೂರ್ವಸ್ವಯಂಭು ಪ್ರಸನ್ನ ಚೆನ್ನ ದಕ್ಷಿಣ ಸೋಮನಾಥದೇವರ ದಿವ್ಯಶ್ರೀಪಾದಪದ್ಮಾರಾಧಕರುಂXXನಿತ್ಯಪರಿ ಪೂರ್ಣ ಸಚ್ಚಿದಾನಂದ ನಿರಂಜನ ಪರಂಜ್ಯೋತಿ ಸ್ವರೂಪರುಮಪ್ಪ ಮಹಾ ಲಿಂಗದೇವರು ತಂಮXXನಿಜತಚ್ಛಿಷ್ಯ ಭಕ್ತಿಭಂಡಾರಿ ಜಕ್ಕಣಾರ್ಯಂಗೆ ಸತ್ಪ್ರೇಮ ಮಹಾನುಭಾವ ಸಂಬೋಧೆಯಂ ಸಂಬಂಧ ನಿರೂಪಣಕಾರ ಣಾರ್ತ್ಥಮಾಗಿ ವಿರಚಿತಮಪ್ಪ ಯೇಕೋತ್ತರ ಶತಸ್ಥಲ ದ್ವಾದಶ ಪರಿಚ್ಛೇದಃ

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಷಡುಸ್ಥಲ ಜ್ಞಾನಸಾರಾಮೃತ ಎನ್ನುವ ಕೃತಿಯಿದೆ. ಈ ಎರಡು ಕೃತಿಗಳಿಗೆ ನಡುವೆ ಮೂರು ಗರಿಗಳಲ್ಲಿ ಯಂತ್ರಗಳಿವೆ.

—ಜಿಜಿಎಂ

## 292

ಕೆ. ೧೪೪೮/೪ | **ಏಕೋತ್ತರ ಶತಸ್ಥಲ** | ಸೂತ್ರ, ಹಾಡು

೮.೧″ × ೨″ | ಮಹಲಿಂಗ | ೧೪೩೦

೨೦-೬೬ ಪತ್ರ | ೧೦ ಪಂಕ್ತಿ | ೪೪ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಯೇಕೋತ್ತರ ಶತಸ್ಥಲ॥
ರಾಗ ಮಧುಮಾಧವಿ। ತಾಳ ರೂಪಕ। ಪಲ್ಲವ
ಬಿಂದು ಬಿನ್ನಾಣದೊಳಗಂದವಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನಸಿರುತಾ॥
ಪದ॥ ಕಾರಮೇಘದೊಳು ಮಿಂಚಡಗಿ ತೋರುವ ತೆರದಿ
ನೀರೊಳಡಕಂಗೆಯ್ದು ಕಿಚ್ಚಿನಂತೆ
ಬೀರುತಿಹ ಪಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ

**ಅಂತ್ಯ :** ಉರಿಕಪ್ಪುರವೊಡಗೂಡಿ ಯರಡು ಅಳಿದ ಬಳಿಕಾ
ಮರಳಿ ನೋಡಿಹೆನೆಂದಡೆ ಭಸ್ಮವಿಲ್ಲ ನೋಡಾ

X X X

ನಿಜದಲ್ಲಿ ನಿರ್ಣಯವಡಗಿ ಗತಿಮತಿ ನಷ್ಟವಾಗಿ
ಕಳೆಯೊಳಗಣ ಬೆಳಗು ತಾನೆಂದು ತೋರುತಲಿರ್ಪಾ
ತೊಳಗಿ ಬೆಳಗುವ ಚೈತನ್ಯ ತಂನಲ್ಲಿ ತಾನೆ ನಿಃ
ಕಳೆಯಾಗಿ ನಿಜಮೊಳು ನೀಶೂ

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಪ್ರಭುದೇವರ ಪುರಾಣದ ನಾಂದ್ಯ ಮೊದಲಾದ ೪ ಕೃತಿಗಳಿವೆ

—ಜಿಜಿಎಂ

## 293

ಕೆ. ೧೫೫೪/೧ | **ಏಕೋತ್ತರ ಶತಸ್ಥಲ** | **ಸೂತ್ರ, ಹಾಡು**

೧೦.೯″ × ೨.೪″ | ಮಹಲಿಂಗ | ೧೪೩೦

೧-೭೯ ಪತ್ರ | ೧೩ ಪಂಕ್ತಿ | ೫೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಏಕೋತ್ತರ ಶತಸ್ಥಲ॥ ಸ್ವಸ್ತಿ ಸಮಸ್ತ ಭುವನಜನದ ತಿಮಿರಹರಕಾರಣ ಸ್ವರೂಪರುಂ ಭಕ್ತದೇಹಿಕದೇವರುಂ XXಭಕ್ತಿಭಂಡಾರಿ ಜಕ್ಕಂಣನು ಆ ಶ್ರೀಗುರುರಾಯಂಗೆ ಬಿಂನಪಂಗೆಯ್ದು ಪರಮಗುರುವೆ ನಿಂಮಡಿಗಳು ಎಂನ ಪೂರ್ವಜನ್ಮ ನಿವೃತ್ತಿಯಂ ಮಾಡಿ ಪುನರ್ಜಾತನೆನಿಸಿ XX ಎನ್ನ ಕೃತಾರ್ಥನಂ ಮಾಡಿದಿರಿ XX ಆ ಶ್ರೀಗುರು ಸ್ವಾಮಿತಂಮ ಪರಮಜ್ಞಾನಾನುಭವ ಪ್ರಸಂಗ ಪ್ರಕಾಶದಿಂದ ಷಟಸ್ಥಳ ವನುಂ ಬಸವರಾಜದೇವರು ಚೆಂನಬಸವಾಜದೇವರು ಪ್ರಭುದೇವರ ಮುಖ್ಯ ವಾದ ಅಸಂಖ್ಯಾತ ಮಹಾಗಣಂಗಳ ಪರಮವಾಕ್ಯಾಮೃತಮಪ್ಪ ವಚನಂ ಗಳಿಂದ ಆ ತತ್ಶಿಷ್ಯಂಗೆ ಬೋಧಿಸುತ್ತಿರಲು

**ಅಂತ್ಯ :** ಮಹಾಲಿಂಗದೇವರು ತಂಮ ದಿವ್ಯಜ್ಞಾನಾನಂದ ಸಿದ್ಧವರ ಪ್ರಸಂಗಪ್ರಸಾದ ನಿಜಶತ್ರಿಷ್ಯ ಭಕ್ತಿಭಂಡಾರಿ ಜಕ್ಕಂಣಾಚಾರ್ಯರಿಗೆ ಸತ್ರೇಮ ಮಹಾನು ಭಾವ ಸಂಬೋಧೆ ಸಂಬಂಧ ನಿರೂಪಣಕಾರಣಾರ್ಥ ವಿರಚಿತಮಪ್ಪ ಏಕೋ ತ್ತರ ಸತಸ್ಥಲದೊಳು ಐಕ್ಯಸ್ಥಲ ಸಂಮಂಧವಾದ ಲಿಂಗಸ್ಥಲನಮಮಂ ದ್ವಾದಶ ಪರಿಚ್ಛೇದಂXXXಶಾಲಿವಾಹನಶಕ ವರ್ಷಸಂದು ೧೬೫೩ ವಿರೋಧಿ ಕೃತನಾಮ ಸಂವತ್ಸರ ಕಾರ್ತಿಕ ಶುದ್ಧ ತದಿಗೆ ಸುಕ್ರವಾರದಿನದಲ್ಲಿ ಏಕೋ ತ್ತರ ಶತಸ್ಥಲ ಸಮಾಪ್ತ ಮಂಗಳಮಹಾಶ್ರೀ ಶ್ರೀ ಬಿದರೂರ ಪಾದಪೂಜೆ ಮಾಟದ ವೀರಮಾಹೇಶ್ವರ ಚರಮೂರ್ತಿ ಸಿದ್ಧವೀರಸ್ವಾಮಿಗಳ ಮರಿ ಶಿವ ಲಿಂಗ ದೇಶಿಕ ಬರದು ಸಮಾಪ್ತಿ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಪಂಚಸ್ತೋತ್ರ(ಸಂ)ವಿದೆ.

—ಜಿಜಿಎಂ

## 294

| ಕೆ. ೧೬೬೧/೭ | **ಏಕೋತ್ತರ ಶತಸ್ಥಲ** | ಸೂತ್ರ,ಹಾಡು |
|---|---|---|
| ೯.೪" × ೧.೭" | ಮಹಲಿಂಗ | ೧೪೩೦ |
| ೪೬-೯೪ ಪತ್ರ | ೯ ಪಂಕ್ತಿ | ೪೩ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಯೇಕೋತ್ತರ ಷಡುಸ್ಥಲದ ವಚನ॥
ಪ್ರಥಮದಲ್ಲಿ ಪಿಂಡಸ್ಥಲ॥
ಬಿಂದು ಬಿಂನಾಣದೊಳಗಂದವಿಟ್ಟಹ ಕಳಾ
ನಂದ ಪಿಂಡೋದಯದ ಜ್ಞಾನನಿರುತ

ಪದ॥ ಕಾರಮೇಘದೊಳು ಮಿಂಚಡಗಿ ತೋಱದ ತೆಱದಿ
ನೀರೊಳಡಕಂಗೆಯ್ದ ಕಿಚ್ಚಿನಂತೆ
ಬೀಱುತ್ತಿಹ ಫಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ॥೧॥

**ಅಂತ್ಯ :** ಶಬ್ದ ನಿಃಶಬ್ದವಾಗಿ ನಿಃಶಬ್ದ ಪನಾಹತವಾಗಿ ಶಬ್ದಃಶಬ್ದವೆಂಬ ಬುದ್ಧಿಯು ನಿರ್ವ್ವಯಲಾಗಿ ಯಿಃದುದೂಹೋದುದೆಂಬುದನರಿಯದೆ ಮೇರೆಗೆಟ್ಟ ನಿಃ ಶಬ್ದ ಗಂಭೀರ ಗೊಹೇಶ್ವರ ನಿಂಮ ಬಸವಂಣಾ ॥೭॥ ಅಂತು ಏಕೋತ್ತರ ಶತಸ್ಥಲ ಸಮಾಪ್ತ ಅಂತು ಅಂಗಸ್ಥಲ ೪೪ ಲಿಂಗಸ್ಥಲ ೫೭ಕ್ಕಂ ಯಿಂತೀ ವುಭಯಸ್ಥಲ ೧೦೧ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಆಚರಣೆಯ ವಚನ, ಶೀಲದ ವಿವರ, ಮಿಶ್ರಸ್ತೋತ್ರ, ಸಂಬಂಧದ ವಚನಗಳು ಇವೇ ಮೊದಲಾದ ೧೫ ಕೃತಿಗಳಿವೆ ಮತ್ತು ಗುರುತಿಸಲಾಗದ ಕೆಲವು ಪತ್ರಗಳಿವೆ.

—ವೈಸಿಬಿ

## 295

| ಕೆ. ೧೮೫೪/೧ | **ಏಕೋತ್ತರ ಶತಸ್ಥಲ** | ಸೂತ್ರ, ಹಾಡು |
|---|---|---|
| ೧೨.೪"×೨" | ಮಹಲಿಂಗ | ೧೪೩೦ |
| ೧-೮೭ ಪತ್ರ | ೧೨ ಪಂಕ್ತಿ | ೬೦ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಏಕೋತ್ತರ ಶತಸ್ಥಲ॥ ಸ್ವಸ್ತಿ ಸಮಸ್ತ ಭುವನಜನ ತಿಮಿರಹರಣಕಾರಣ ಸ್ವರೂಪರಂ। ಭಕ್ತದೇಹಿಕ ದೇವರುಂ। ಭಕ್ತಿವತ್ಸಳರುಂ। ಸರ್ವಾಂಗಪ್ರಾಣಲಿಂಗಮೂರ್ತಿ ವಿಲಾ....। ಹುಲಿಗೆಜೆ೩ಯ ಪುರವರಾಧೀಶರರುಂ। XXX ಪ್ರಥಮದಲ್ಲಿ ಪಿಂಡಸ್ಥಲ॥ ವಚನ॥ ಕಲ್ಲೊಳಗಣ ಪಾವಕನಂತುದಕದೊಳಗಣ ಪ್ರತಿಬಿಂಬದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಃಶಬ್ದದಂತೆ ಗೊಹೇಶ್ವರ ನಿಮ್ಮ ಶರಣರ ಸಂಬಂಧ ॥೧॥

**ಅಂತ್ಯ :** ಗದ್ಯ॥ ಸ್ವಸ್ತಿಸಮಸ್ತ XXX ನಿತ್ಯ ಪರಿಪೂರ್ನ ಸಚ್ಚಿದಾನಂದ। ನಿರಂಜನ ಪರಂಜ್ಯೋತಿ ಸ್ವರೂಪರುಮಪ್ಪ ಮಹಾಲಿಂಗದೇವರು। ತಮ್ಮ ದಿವ್ಯ ಜ್ಞಾನಾನಂದ ಸಿದ್ಧ ವರಪ್ರಸನ್ನ ಪ್ರಸಾದವನೂ। ನಿಜತಸ್ಸಿಷ್ಯ ಭಕ್ತಿಭಂಡಾರಿ ಜಕ್ಕಣಾಚಾರ್ಯರ್ಗಂಗೆ ಸತ್ಪ್ರೇಮ ಮಹಾನುಭಾವ ಸಂಬೋಧೆ ಸಂಬಂಧ ನಿರೂಪಣಕಾರಣಾರ್ಥ ವಿರಚಿತಮಪ್ಪ। ಯೇಕೋತ್ತರ ಶತಸ್ಥಲದೊಳು ಅಯಿಕ್ಯಸ್ಥಲಕ್ಕೆ ಸಂಬಂಧವಾದ ಲಿಂಗಸ್ಥಲ ನವಮದ್ವಾದಶ ಪರಿಚ್ಛೇದಃ॥ ಅಂಗಸ್ಥಲ ೪೪ಕ್ಕೆ ಸೇರಿದ ವಚನ ೪೬೫ಕ್ಕಂ ನಿರ್ದೇಶದ ಪದನು ೨೫೩ಕ್ಕಂ ವುಭಯಂ ೭೧೮ಕ್ಕಂ ಲಿಂಗಸ್ಥಲ ೫೭ಕ್ಕಂ ಸೇರಿದ ವಚನ ೪೩೨ಕ್ಕಂ ನಿರ್ದೇಶದ ಪದನು ೨೮೨ಕ್ಕಂ ವುಭಯಂ ೭೧೯ಕ್ಕಂ ಅಂಗಸ್ಥಲ ೪೪ಕಂ ಲಿಂಗಸ್ಥಲ ೫೭ಕಂ ವುಭಯಂ ವಚನ ಪದನು ಅಂತು ೧೪೩೨ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಪ್ರಭುದೇವರ ಟೀಕಿನ ವಚನ ಮತ್ತು ಸಕಲ ಪುರಾತನರ ವಚನ ಎಂಬ ಕೃತಿಗಳಿವೆ.

—ವೈಸಿಬಿ

## 296

ಕೆ.೧೧೨೫/೬ **ಏಕೋತ್ತರ ಶತಸ್ಥಲ** ವಚನ,ಹಾಡು
೫.೫" × ೨.೧" ? ?
೧-೪೨ ಪತ್ರ ೧೩ ಪಂಕ್ತಿ ೩೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಸುಭಮಸ್ತು ಏಕೋತ್ತರ ಶತಸ್ಥಲ ಪಿಂಡಸ್ಥಲ॥ ಬಿಂದು ಬಿಂನಾಣದೊಳಗಂಧವಿಟ್ಟಿಹ ಕಳಾನಂದ ಪಿಂಡೋದಯದ ಗ್ನಾನನಿರುತ॥ ಪದ॥
ಕಾರಮೇಘದೊಳು ಮಿಂಚಡಗಿ ತೋಱಂದ ತೆಱದಿ
ನೀರೊಳಡಕಂಗೆಯ್ದ ಕಿಚ್ಚಿನಂತೆ
ಬೀಱುತ್ತಿಹ ಫಳರಸದೊಳಿಪ್ಪ ನವರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ॥೧॥

**ಅಂತ್ಯ :** ಶಬ್ದ ನಿಃಶಬ್ದವಾಗಿ ನಿಃಶಬ್ದವನಾಹತವಾಗಿ ಶಬ್ದ ನಿಃಶಬ್ದವೆಂಬ ಬುದ್ಧಿ ನಿರ್ವಯಲಾಗಿ ಯಿದ್ದುದು ಹೋದುದೆಂಬುದನಱಿಯದೆ ಮೀರಿಗೆಟ್ಟ ನಿಃಶಬ್ದ ಗಂಭೀರ ಗೊಹೇಶ್ವರಾ ನಿಂಮ ಬಸವಾ ॥೭॥ ನೂಱಿಒಂದನೆಯ ಸ್ಥಲ ಸಮಾಪ್ತ ಮಂಗಳ ಮಹಾಶ್ರೀ ಶ್ರೀ. ರೌದ್ರಿ ಸಂವತ್ಸರದ ಮಾಗ ಸುದ್ಧ ೮ ಶೆನಿವಾರ ಷಟ್ಸ್ಥಲ ಜ್ಞಾನರಾದ ಆಚಾರ್ಯರು ಪೌರಾಣದ ಚೆನ್ನವೀರಸ್ವಾಮಿಗಳಿಗೆ ನೂರೊಂದನೆಯ ಸ್ಥಲ ಬರದು ಮುಗಿಯಿತು

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ ಇತ್ಯಾದಿ ೯ ಕೃತಿಗಳಿವೆ. ಈ ಕಟ್ಟಿನಲ್ಲಿ ಮೂರು ಓಲೆಗರಿ ಕಟ್ಟುಗಳ ಪತ್ರಗಳು ಸೇರಿಕೊಂಡಿವೆ. ಅವುಗಳ ಕ್ರಮಸಂಖ್ಯೆ ೧-೨೨ ಪತ್ರಗಳು, ೧-೪೨ ಪತ್ರಗಳು ಮತ್ತು ೧೦೮-೧೨೪ ಪತ್ರಗಳಾಗಿವೆ.

—ಜಿಜಿಎಂ

## 297

ಕೆ. ೧೮೧೭ **ಏಕೋತ್ತರ ಶತಸ್ಥಲ** ವಚನ,ಟೀಕು
೧೩.೭" × ೨" ? ?
೧೧೦ ಪತ್ರ ೧೩ ಪಂಕ್ತಿ ೭೦ ಅಕ್ಷರ

**ಆದಿ :** ....ಕ್ಷರಿಮ ಕೂಡಿ ೧೦೮ ಮಂತ್ರಮಣಿಮಾಲಿಕೆ ಜಪಮಾಡಿಕೊಂಡಾಚರಿಪಿ ಪ್ರಣೋಪಾನವ್ಯನಪಥಾನಸಮಾನನಾದಂ ಕೂರ್ಮಕೃ....ದೇವದತ್ತ ಧನಂಜಯವ ಮುಚ್ಚದೆ ಪ್ರಾಣಾದಿ ಧನಂ ಜಯಾಂತ್ಯಮಾದ ದಶವಾಯುುದಳ

ಪ್ರಕೃತಿಯನು ಸೋಂಕದೆ ಹಾಡಿದನು। ಮಂತ್ರ ನೀಲಂಗಳ ಮಾಡಿಕೊಂಡಾ ಚರಿಸಿದನೆಂಬುದರ್ಥ ॥೨॥

**ಅಂತ್ಯ :** ಪವನದಭ್ರಮರ ಬ್ರಹ್ಮರಂಧ್ರದನಿಹಾರ
ಪ್ರಾಣಗುಹೇಶ್ವರಲಿಂಗವೆನಲು ನಾಚಿತ್ತು

ಟೀಕು॥ ಪವನದ ಭ್ರಮರ ಬ್ರಹ್ಮರಂಧ್ರದನಿಹಾರ। ಪ್ರಾಣವಾಯುವ ತುಂಬಿಕೊಂಡಿರ್ದ ಅಜರಂಧ್ರದಲ್ಲಿಹ ಶ್ಲೇಷ್ಮಾಮೃತವನು ಸೇವಿಸುವ ಹರಣಾತ್ಮಕನೆ। ಗುಹೇಶ್ವರ ಲಿಂಗವೆನಲು ನಾಚಿತ್ತು। ಭಿನ್ನಯೋಗಿಗಳು ಸರ್ವರ ಹೃದಯಂತರಿನೂಮಿಯಾದ ಪರಶಿವಲಿಂಗನೆಂದು ಹೇಳಲದಂ ಕೇಳಿ ಶಿವಯೋಗ ಸಂಪನ್ನನಾದ ಶರಣನ ಮಾನಸ್ತವು ಅಭಿಮಾನಿಸಿತ್ತೆಂಬುದರ್ಥ ೬॥

ಸೂತ್ರ॥ ಸೂಚನೆ ಮುಃಶ್ಚತೆಯೆಂದು। ಇಂತು। ಈ ಪ್ರಕಾರದ ದೆಶೆಇಂದೆ। ಕ್ರಿಯಾನಿಷ್ಪತಿ। ಕ್ರಿಯಾ ನಿಷ್ಪತಿ ಸ್ವರೂಪವನೆಯ್ದಿ ಇಷ್ಟಲಿಂಗವು। ಭಾವನಿಷ್ಪತಿ। ಭಾವನಿಷ್ಪತಿ ಸ್ವರೂಪವನೆಯ್ದಿದ ಪ್ರಾಣಲಿಂಗವು

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಅಸಮಗ್ರ. ಸ್ವಲ್ಪಮಟ್ಟಿಗೆ ಶಿಥಿಲ.

—ವೈಸಿಬಿ

## 298

ಕೆ. ಎ. ೫೦೫/೩ **ಏಕೋತ್ತರ ಶತಸ್ಥಲ** ಗದ್ಯ

೮.೧″ × ೧೨.೭″ ? ?

೧-೨ ಪುಟ ೨೬ ಪಂಕ್ತಿ ೧೯ ಅಕ್ಷರ

**ಆದಿ :** ಪಿಂಡಸ್ಥಲ। ಪಿಂಡಜ್ಞಾನಸ್ಥಲ। ಸಂಸಾರ ಹೇತುಸ್ಥಲ। ಗುರುಕರುಣಸ್ಥಲ। ಲಿಂಗಧಾರಣಸ್ಥಲ। ಪಂಚಾಕ್ಷರಿಯಸ್ಥಲ। ಭಕ್ತಿಸ್ಥಲ। ಉಭಯಸ್ಥಲ। ತ್ರಿವಿಧ ಸಂಪತ್ತಸ್ಥಲ। ಚತುರ್ವಿಧ ಸಾರಸ್ಥಲ। ಉಪಾಧಿಮಾ....ಸ್ಥಲ। ನಿರುಪಾಧಿಸ್ಥಲ। ಸಹಜಮಾಟ ಸ್ಥಲ। ಅಂತು ಭಕ್ತಿಸ್ಥಲ ೧೫॥ ದ್ವಿತಯದಲ್ಲಿ— ಮಾಹೇಶ್ವರ ಸ್ಥಲ। ಲಿಂಗನಿಷ್ಠಾಸ್ಥಲ। ಪೂರ್ವಾಶ್ರಯ ನಿರಸನ ಸ್ಥಲ। ವಾಗಾದ್ವಯಿತ ನಿರಸನ ಸ್ಥಲ। ಆಹ್ವಾನ ಸರಸನ ಸ್ಥಲ। ಅಷ್ಟಮೂರ್ತಿ ನಿರಸನಸ್ಥಲ। ಶಿವಜಗ....ಗ ಸ್ಥಲ। ಭಕ್ತಿದೇಹಿಸ್ಥಲ॥ ಅಂತು ಮಾಹೇಶ್ವರ ಸ್ಥಲ ೯॥

**ಅಂತ್ಯ :** ಮಹಾದಾಕಾಶ ಸ್ಥಲ। ಕ್ರಿಯಾಪ್ರಕಾಶಸ್ಥಲ। ಭಾವಪ್ರಕಾಶ ಸ್ಥಲ। ಜ್ಞಾನಪ್ರಕಾಶ ಸ್ಥಲ। ಜ್ಞಾನಪ್ರಕಾಶ ಸ್ಥಲ। ಕೊಂಡುದು ಪ್ರಸಾದಸ್ಥಲ। ನಿಂದುದೊಗರ ಸ್ಥಲ। ಚರಾಚರಾನಾಸ್ಥಿಸ್ಥಲ। ಭಾಂಡಸ್ಥಲ। ಭಾಜನಸ್ಥಲ।

ಅಂಗಲೇಪಸ್ಥಲ। ಸ್ವಯಪರಸರಿಯದಸ್ಥಲ। ಭಾವಾಭಾವನಸ್ಥಲ। ಜ್ಞಾನಸೂನ್ಯಸ್ಥಲ। ಅಂತು ಲಿಂಗಸ್ಥಲ ೫೭॥ ಉಭಯಸ್ಥಲ ಏಕೋತ್ತರ ಸ್ಥಲಕ್ಕೆ ಮಂಗಳಮಹಾಶ್ರೀ॥

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಪುಸ್ತಕದಲ್ಲಿ ಧವಳದ ಹಾಡುಗಳು, ಶಿವಲೋಕಾಸ್ಥಾನ, ಷಟ್ಸ್ಥಲ ವಚನ, ವಿಶ್ವಾರ್ಪಣ ಮಲ್ಲಿಕಾಮಾಲೆ ಎಂಬ ಕೃತಿಗಳಿವೆ.

—ವೈಸಿಬಿ

## 299

ಕೆ. ೬೬೦/೫ **ಏಕೋತ್ತರ ಶತಸ್ಥಲದ ಟೀಕೆ** ಟೀಕು

೧೯.೩" × ૭.૭" ಮರಿಬಸವಲಿಂಗದೇವರು **ಸು.** ೧೮೦೦

೩೫-೧೧೭ ಪತ್ರ ೧೨ ಪಂಕ್ತಿ ೧೦೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಟ್ಯೊ ಶ್ರೀ ಐಶ್ವರ್ಯಪ ಲಕ್ಷಿತವಾದ। ಗುರು ಆಚಾರ್ಯ್ಯಗಾಎ। ಬಸವಲಿಂಗಾಯ ನಮಃ। ಬಸವೇಶ್ವರ ನಮಸ್ಕಾರವೆಂದು। ಯಿಾ ಶಾಸ್ತ್ರಪ್ರಾರಂಭದಲ್ಲೀಗ ಆಚಾರ್ಯರು ಗುರು ನಮಸ್ಕಾರಮಂ ಮಾಡಿ। ಯಿಾ ಶಾಸ್ತ್ರವನು ವುದ್ಧರಿಸುತ್ತಿರ್ದ್ದರು। ಏಕೋತ್ತರ ಶತಸ್ಥಲ। ಜ್ಞಾನಶೂನ್ಯಸ್ಥಲವಂದೆ ವುತ್ತರವಾಗಿ। ನೂರುಸ್ಥಲವೆಕಯಾಗಿ। ನೂರೊಂದು ಸ್ಥಲವು ಶಿವನಿಂದ ನಿರೂಪಿಸಲ್ಪಟ್ಟ ಕಾಮಿಕಾವೆಂಬಗಮದಲ್ಲಿಯುಮೆಲುಬಃಗೆ ಎಲ್ಲಿ ಶ್ರೇಷ್ಠವಾದ ವೀರಶೈವ ಮಥವು ಹೇಳಲ್ಪಟ್ಟಿತು। ಅದನು ರೇವಣಸಿದ್ಧೇಶ್ವರನು ಅಗಸ್ಥಂಗೆ ಬೋಧಿಸಿದರು। ಅದೆ ವೀರಶೈವರುಗಳಿಗೆ ಸ್ಥಲಭೇದದಿಂದ ಆ ಶಾಸ್ತ್ರವು ಆರು ಪ್ರಕಾರನುಳ್ಳುದಹುದು ಮೊದಲಲ್ಲಿ ಭಕ್ತಿಸ್ಥಲ। ೧೫ ಮಾಹೇಶ್ವರ ಸ್ಥಲ ೯ ಪ್ರಸಾದಿಸ್ಥಲ ೭ ಪ್ರಾಣಲಿಂಗಿಸ್ಥಲ ೫ ಶರಣಸ್ಥಲ ೪ ಐಕ್ಯಸ್ಥಲ ೪ ಅನಂತರ ಅಂಗಸ್ಥಲಂಗಳಾಶ್ರೈಸಿದಲ್ಲಿ ಲಿಂಗಸ್ಥಲಂಗಳೊಳಗೆ ಆಚಾರಲಿಂಗಸ್ಥಲ ೯। ಗುರುಲಿಂಗಸ್ಥಲ ೯ ಶಿವಲಿಂಗಸ್ಥಲ ೯। ಜಂಗಮಲಿಂಗಸ್ಥಲ ೧೨। ಪ್ರಸಾದಲಿಂಗಸ್ಥಲ ೯। ಮಹಾಲಿಂಗಸ್ಥಲ ೯। ಅಂಗಸ್ಥಲ ೪೪। ಲಿಂಗಸ್ಥಲ ೫೭। ವುಭಯಂ ಪಿಂಡಜ್ಞಾನ ಶೂನ್ಯಾಂತ ೧೦೧ ಸ್ಥಲಂಗಳು। ಅವನೆ ನಿರೂಪಿಸಿದ ಪುರಾತನರ ಹ ಹಾ ವಚನಂಗಳೊಳಗೆ ಜಕ್ಕಂಣಾಚಾರ್ಯರು ಆದರೊಳಗೆ ಸಾರವಾದ ೧೦೧ ಸ್ಥಲದ ವಚನಂಗಳ ತೆಗೆದುಕೊಂಡು ಸೂತ್ರವಿಟ್ಟು ಸಂಗ್ರಹಿಸಿದರು.

**ಅಂತ್ಯ :** ಶಬ್ದ ನಿಃಶಬ್ದವಾಗಿ ನಿಃಶಬ್ದವನಾಹತವಾಗಿ ಶಬ್ದವೆಂಬ ಬುದ್ಧಿ ನಿರ್ವಯಲಾಗಿ। ಯಿದ್ದುದು ಹೋದುದೆಂಬುದನರಿಯದೆ ಮೇರೆಗೆಟ್ಟ ನಿಃಶಬ್ದ ಗಂಭೀರ ಗುಹೇಶ್ವರ ನಿಂಮ ಬಸವಂಣ॥

ಟೀಕು|| ಶಬ್ದ| ಶರಣನು| ನಿಃಶಬ್ದವಾಗಿ| ನಿಃಶಬ್ದವನಾಹತವಾಗಿ| ಆ ಲಿಂಗವು ಸಿತ್ಯ ಸ್ವರೂಪವಾಗಿರ್ದಿತು| ಶಬ್ದ ನಿಃಶಬ್ದವೆಂಬ| ಶರಣಲಿಂಗವೆಂಬ ಬುದ್ಧಿ ನಿರ್ವಯಲಾಗಿ| ಜ್ಞಾನ ಸಮರಸವಾಗಿ| ಯಿದ್ದುದ ಹೋದುದೆಂಬುದನರಿಯದೆ| ಶರಣಲಿಂಗವಾಗಿ| ಆಚರಿಸುತ್ತಿರ್ದುದನು| ಶರಣಲಿಂಗ ಸಂಬಂಧದ ಆಚರಣೆಯಂ ಅಡಗಿ ಹೋಯಿತ್ತೆಂಬುದನು ಅರಿಯದೆ| ಮೀರೆಗೆಟ್ಟ| ಸ್ಥಲ ಕುಳಂಗಂಗಳ ಆಚರಣೆಯ ಶೀವೆದಪ್ಪಿದ| ನಿಃಶಬ್ದ ಗಂಭೀರ ಗುಹೇಶ್ವರ ನಿಂಮ ಬಸವಂಣ| ಜ್ಞಾನಶೂಂನ್ಯವಾಗಿ ಮಹಾಲಿಂಗದಲ್ಲಿ ಐಕ್ಯವಾಗಿರ್ದನು ಬಸವಂಣನೆಂದು ಪ್ರಭುದೇವರು ಸ್ತುತಿಸುತ್ತಿರ್ದರೆಂಬುದರ್ಥ|| ಅಂತು ಮಹಾಲಿಂಗಸ್ಥಲ ಸಮಾಪ್ತ ಮಂಗಳ ಮಹಾಶ್ರೀ|| ಅಂಗಸ್ಥಲ ೪೪ಕ್ಕಂ|| ಪದನು|| ೨೫೩ಕ್ಕೆ|| ಲಿಂಗಸ್ಥಲ ೫೭ಕ್ಕಂ|| ಪದನು ೬೯೭ಕ್ಕಂ ವುಭಯಂ ಸ್ಥಲ|| ೧೦೧ಕ್ಕಂ|| ಪದನು ೫೪೦ಕ್ಕಂ|| ಏಕೋತ್ತರ ಶತಸ್ಥಲ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಕೃತಿ ಪೂರ್ಣವಾಗಿದೆ. ಸ್ಫುಟಾಕ್ಷರ. ಇದರೊಡನೆ ಪಂಚೀಕರಣ, ವಿಶ್ರಾಪರ್ಣ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಹಿರಿಯ ಮಂತ್ರಗೋಪ್ಯ ಈ ಕೃತಿಗಳೂ ಇವೆ.

—ಎಸ್ ಎನ್ ಕೆ

## 300

| ಕೆ. ೧೪೦೨/೩ | **ಏಕೋತ್ತರ ಶತಸ್ಥಲ ಸಾರಾಮೃತ** | ವಚನ,ಟೀಕು |
|---|---|---|
| ೧೬″ × ೨″ | ? | ? |
| ೧-೫೭ ಪತ್ರ | ೧೨ ಪಂಕ್ತಿ | ೯೪ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಏಕೋತ್ತರ ಶತಸ್ಥಲ ಸಾರಾಮೃತ|| ಪಿಂಡಸ್ಥಲ|| ಶಿಲೆಯೊಳಗಣ ಪಾವಕನಂತೆ ಉದಕದೊಳಗಣ ಪ್ರತಿಬಿಂಬದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಃಶಬ್ದದಂತೆ ಗೂಹೇಶ್ವರಾ ನಿಂಮ ಶರಣ ಸಂಬಂಧಾ|| ಟೀಕು|| ಶಿಲೆಯೊಳಗಿಪ್ಪಗ್ನಿವ್ಯೈದೋಜಿದ ಹಾಂಗೆ ಪರಬ್ರಂಹ್ಮವು ಪಿಂಡಸ್ಥಲವಾಗಿರ್ದು ಕಾಣಿಸಬಾರದೆಂಬುದೀಗ ಶಿಲೆಯೊಳಗಣ ಪಾವಕನಂತೆಯೆಂಬ ಶಬ್ದಕ್ಕರ್ಥ

**ಅಂತ್ಯ :** ಅಂತು ಜ್ಞಾನ ಶೂನ್ಯಸ್ಥಲಕ್ಕೆ ವಚನ ೩೭ಕ್ಕಂ ಅಂತು ಲಿಂಗಸ್ಥಲಕ್ಕೆ ವಚನ ೨೩೪ಕ್ಕಂ ಅಂತು ಅಂಗಸ್ಥಲ ಲಿಂಗಸ್ಥಲ ವುಭಯ ಕೂಡಲು ವಚನ ೪೬೪ಕ್ಕೆ ಏಕೋತ್ತರ ಶತಸ್ಥಲ ಸಾರಾಮೃತ ಸಂಪೂರ್ಣ ಮಂಗಳಮಹಾಶ್ರೀಶ್ರೀ.

**ವಿಷಯ :** ವೀರಶೈವ ಸಿದ್ಧಾಂತ; ನೂರೊಂದು ಸ್ಥಲದ ವಿವರಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಸಂಪಾದನೆಯ ಸಾರಾಮೃತ ಮೊದಲಾದ ೫ ಕೃತಿಗಳಿವೆ.

—ಜಿಜಿಎಂ

## 301

ಕೆ. ೧೩೭೬/೧೬ **ಏಕೋದೇವ ಪ್ರತಿಷ್ಠಾ ತ್ರಿವಿಧಿ** ತ್ರಿಪದಿ

೨.೧" × ೮.೮" ? ?

೬೧-೬೮ ಪತ್ರ ೧೧ ಪಂಕ್ತಿ ೩೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಯೇಕೋದೇವ ಪ್ರತಿಷ್ಟಾ ತ್ರಿವಿಧಿ
ಶ್ರೀಗುರುವೆ ಕರುಣಾಮೃತಸಾಗರವೆ ಅಭೆಯಾಕರ
ಶ್ರೀಗುರುವೆ ಮುಕ್ತಿ ಪ್ರದಾಯಕನೆ ಸಲಹೆಂದು
ಶ್ರೀಗುರುಪದವ ಸ್ತುತಿಸುವೆ ॥೧॥
ಕೋಟಿದೇವರು ಶಿರನ ನಾಟಿಸುವ ಪದದಿಂದೆ
ಮಿಾಟಿನಿಸಿ ಸುರರ ಶಿರಮಾಲೆ ಕರದ ಕ
ರೋಟಿಯಿಂ ಮೆಱವ ಪ್ರಭು ಶರಣು ॥೨॥

**ಅಂತ್ಯ :** ಸಚರಾಚರ ಪ್ರಾಣಿಗಳ ರಚಿಸಿ ಸರದಾನವರ
ನಿಚಯಾಧಿಪನಾಗಿ ಕರರುಹದಿ ನೆಲಸಿದರು
ಣಚಲೇಶ ಶರಣು ಶರಣಾರ್ತಿ ॥೭೯॥
ಯೇಕೋದೇವರ ಪ್ರತಿಷ್ಟಾ ತ್ರಿವಿಧಿ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ಶಿವಾಧಿಕ್ಯ ಸ್ಥಾಪನೆ.

**ವಿಶೇಷ :** ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು, ಗಣನಾಮ ಸ್ತೋತ್ರದ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲವಂತಯ್ಯನ ಆತ್ಮಲಿಂಗ ಸಂಯೋಗ ಸ್ಥಲವಿದೆ.

—ಜಿಜಿಎಂ

## 302

ಕೆ. ೧೭೫೨/೨ **ಏಕೋದೇವ ಪ್ರತಿಷ್ಠಾ ತ್ರಿವಿಧಿ** ತ್ರಿಪದಿ

೫" × ೧.೭" ? ?

೨೬-೪೧ ಪತ್ರ ೮ ಪಂಕ್ತಿ ೨೪ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಯೇಕೋದೇವ ಪ್ರತಿಷ್ಟಾ ತ್ರಿವಿಧಿ॥
ಶ್ರೀಗುರುವೆ ಕರುಣಾಮೃತ ಸಾಗರವೆ ಕರುಣಾಮೃತ ಅಭಯಾಕರ
ಶ್ರೀಗುರುವೆ ಮುಕ್ತಿಪ್ರದಾಯಕನೆ ಸಲಹೆಂದೂ
ಶ್ರೀಗುರುಪದವಾ ಸ್ತುತಿಸೂವೆ ॥೧॥

ಕೋಟಿದೇವರು ಶಿರವ ನಾಟಿಸೂವ ಪದದಿಂದ
ಮಿಾಟಿಸಿಪಾ ಸುರರಾ ಶಿರಮಾಲೆ ಕರದ ಕ
ರೋಟಿಯಂ ಮೆಱವಾ ಪ್ರಭೂ ಶರಣೂ ||೨||

**ಅಂತ್ಯ :** ಸಚರಾಚರ ಪ್ರಾಣಿಗಳಾ ರಚಿಸಿ ಸುರದಾನವರ
ನಿಚಯಾಧಿಪನಾಗಿ ಕರರುಹದಿ ನೆಲಸಿದರು
ಣಾಚಲೇಶಾ ಶರಣು ಶರಣಾರ್ತಿ ||೧೨||
ಯೇಕೋದೇವರ ಪ್ರತಿಷ್ಟ ತ್ರಿವಿಧಿ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ಶಿವಾಧಿಕ್ಯ ಸ್ಥಾಪನೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಬಸವ ಸ್ತೋತ್ರದ ತ್ರಿವಿಧಿ ಮೊದಲಾದ ೧೭ ಕೃತಿಗಳಿವೆ.

—ಜಿಜಿಎಂ

## 303

| ಕೆ. ೮೩೪/೨ | **ಐರಾವತ** | ಭಾಮಿನೀಷಟ್ಪದಿ |
|---|---|---|
| ೧೫" × ೧.೩" | ? | ? |
| ೧೮-೩೩ ಪತ್ರ | ೬ ಪಂಕ್ತಿ | ೬೮ ಅಕ್ಷರ |

**ಆದಿ :** ಐರಾವತ||
ಗಜಮುಖ ನಮೋ ವೇಕದಂತನೆ
ನಿಜಗು.... ಪರಶುಧಾತನೆ
ರಜತಗಿರಿಗೊಡೆಯನ ಕುಮಾರನೆ ವಿದ್ಯವಾರಧಿಯೆ||
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿಮ್ಮನು
ತ್ರಿಜಗವಂದಿತ ಗಣಪ ಸಲಹುಗೆ ಮತಿಗೆ ಮಂಗ್ಗಳವಾ
ಯಿಂದ್ರನೈರಾವತ ಧರಣಿಗೆ
ತಂದು ನಿಜಮಾತೆಯುನಂನೊಪ್ಪಿಸ
ಲೆಂದ್ದು ಫಲುಗುಣ ಕೀರ್ತಿವಡದನು ಮೂರುಲೋಕದಲಿ|| ಪ||

**ಅಂತ್ಯ :** ರಾಯ ಭೀಷ್ಮನು ಸಕಲ ಲೋಕದ
ರಾಯುರನು ಉಚಿತದಲಿ ಕಳುಹಿದ
ರಾಯ ಪಾರ್ಥನ ಹೊಗಳುತವೆ ಹೊಕ್ಕರು ಪುರಾಂತರವಾ
ರಾಯ ಧರ್ಮಜ ತಂಮ್ಮಿದಿರು ಸಹ
ರಾಯ ಹರಕೆಯಲಿದ್ದ್ರ ಗದುಗಿನ
ರಾಯ ನಾರಾಯಣನ ಕ್ರುಪೆಯಲಿ ರಾಯ ಕೇಳೆಂದಾ ||೧೪೫||

ಶುಭಮಸ್ತು ಅಯಿರಾವತಂ ಸಂಪೂರ್ಣಂ ಮಂಗ್ಗಳ ಮಹಾಶ್ರೀ.

**ವಿಷಯ :** ಕುಂತಿಯು ಐರಾವತ ಪೂಜೆಯನ್ನು ಮಾಡಿದ ಕಥೆ.

**ವಿಶೇಷ :** ಸಮಗ್ರ. ಕೆಲವು ಗರಿಗಳಿಗೆ ಹುಳು ಹೊಡೆದಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ವಿದುರ, ಛಂದೋಂಬುಧಿ ಮೊದಲಾದ ಇತರ ಎಂಟು ಕೃತಿಗಳಿವೆ.

—ಕೆಆರ್‌ಎಸ್

## 304

| ಕೆ. ೮೭೨/೧ | **ಐರಾವತ** | ಭಾಮಿನೀಷಟ್ಪದಿ |
|---|---|---|
| ೧೩.೮" × ೨" | ? | ? |
| ೧-೧೧ ಪತ್ರ | ೯ ಪಂಕ್ತಿ | ೭೬ ಅಕ್ಷರ |

**ಆದಿ :** ಶ್ರೀ ಗಣಾದಿಪತಯೇಂ ನಮಃ|| ಐರಾವತನ ಬರವದಕ್ಕೆ ಶುಭಮಸ್ತು ನಿರ್ವಿಗ್ನಮಸ್ತು|| ಶಕುನಿರಂಗಸ್ವಾಮಿ ಪಾದ
ಯಿಂದ್ರನೈರಾವತವ ಧರಣಿಗೆ
ತಂದು ನಿಜಮಾತೆಯ ಮನೋನಿಸ
ಲೆಂದು ಫಲುಗುಣ ಕೀರ್ತಿವಡದನು ಮೂರುಲೋಕದಲ್ಲಿ ||ಪಲ್ಲ||
ಕೇಳು ಜನಮೇಜಯ ಧರಿತ್ರೀ
ಪಾಲ ಹಸ್ತಿನಪುರಿಗೆ ಮುನಿಗಳ
ಮಉಳಿ ಬಿಜಯಂಗೈದ ವೇದವ್ಯಾಸನೊಂದುದಿನಾ
ಕೇಳಿದನು ಧ್ರುತರಾಷ್ಟ್ರ ಭೀಷ್ಮಗೆ
ಹೇಳಿದನು ರುಷಿಬರವ ಹರುಷದಿ
ಲೀಲೆ ಮಿಗಲಿದಿರ್ಗೊಂಡು ತಂದರು ರಾಜಮಂದಿರಕೆ ||೧||

**ಅಂತ್ಯ :** ಭೂತಳಾಧಿಪ ಧರ್ಮಸುತ ನಿಜ
ಮಾತೆಗೆಂದನು ಮೂರು ಲೋಕಕೆ
ಖ್ಯಾತಿಯಾದೆವು ಯಿಂದ್ರ........
........ಪ್ತ ಮಂಗಳ ಮಹಾಶ್ರಿ.

**ವಿಷಯ :** ಕುಂತಿಯು ಐರಾವತವನ್ನು ಪೂಜೆಮಾಡಿದ ಕಥೆ.

**ವಿಶೇಷ :** ಸಮಗ್ರವಾಗಿದೆ. ಅಲ್ಲಲ್ಲಿ ಹುಳು ಹೊಡೆದಿದ್ದು ಪತ್ರಗಳಲ್ಲಿ ರಂಧ್ರಗಳಾಗಿವೆ. ಇದೇ ಕಟ್ಟಿನಲ್ಲಿ ರಂಗನಾಥಕ್ಷೇತ್ರಮಹಿಮೆ ಮತ್ತು ಉತ್ತರಗೀತೆ ಎಂಬ ಕೃತಿಗಳಿವೆ. ಅನಂತರ ದೊರೆಯುವ ಏಳು ಗರಿಗಳು ಸ್ಪಷ್ಟವಾಗಿ ಯಾವ ಗ್ರಂಥಕ್ಕೆ ಸೇರಿದುವೆಂಬುದು ತಿಳಿಯುವುದಿಲ್ಲ.

—ಕೆಆರ್‌ಎಸ್

305

ಕೆ. ೧೩೨೧ | ಐರಾವತ | ಯಕ್ಷಗಾನ
೭.೧" × ೭" | ? | ?
೧-೭೦ ಪತ್ರ | ೯ ಪಂಕ್ತಿ | ೨೧ ಅಕ್ಷರ

**ಆದಿ :** ಶ್ರೀ ಗಣಾದಿಪತಯೇ ನಮಃ॥ ಶ್ರೀ ಶಾರದ ಗುರುಭ್ಯೋ ನಮಃ॥ ಶುಭ ಮಸ್ತು XXX ಯಕ್ಷಗಾನದ ಐರಾವತದ ಪ್ರಸಂಗವನ್ನು ಬರವುದಕ್ಕೆ ಶುಭಮಸ್ತು॥ ರಾಗಾ॥ ಸೌರಾಷ್ಟ್ರ॥ ತ್ರಿವುಡೇ॥
ಶರಣು ಶರಣು ಸದಾಶಿವಾನಂತ
ಶರಣು ಸುರಗಣ ಸೇವಿತಾ
ಶರಣು ಸಕಲಾಬಿಷ್ಟದಾಯಕ
ಶರಣು ಶ್ರೀ ವಿಘ್ನನಾಯಕ ಶರಣು ಶರಣೂ ॥ಪಲ್ಲ॥
ಕರಿವದನ ಕಮನೀಯ ರೂಪನ
ಕರುಣನಿಧಿ ಸುಪ್ರಿತಾಪನಾ
ಪರಮಪಾವನ ಪಂಕಜೇಕ್ಷಣ
ನಿರುತ ಭಕ್ತಾಪೇಕ್ಷಣ ಶರಣು ಶರಣೂ ॥೧॥

**ಅಂತ್ಯ :** ಹರಿಯ ಕಳುಹಿದರು ದ್ವಾರಕಾಪುರಕೆ। ಪಾಂಡವರ ಅರಮನೆಯೊಳಿದ್ದ ರಾರು ಅನೇಕ ದಿವಸಾ। ಸುಖ ಸಾಮ್ರಾಜ್ಯಾಕರಮಾಗಿ। ಸುಖಶರಧಿಯೊಳ್ ಮುಳುಗುತ್ತನುದಿನವೂ। ಹುಣ್ಣಿಮೆಚಂದ್ರಮನಂದದಿ ಸೆರೆ ಬಾಣ ಜನಮೇಜಯ ಕ್ಷಿತಿಪಗೆ ಈ ಪರಿಯಲೈರಾವತ ಪ್ರಸಂಗವಿದೀಗಲೆ ಎಂದು ವರದ ವೈಶಂಪಾಯನ ಮುನಿ॥ ಯಿದ ಕೇಳ್ದರಿಗೆ ಕಣ್ವಾಪುರಿ ಕೃಷ್ಣನೊಲಿದು ಕರವಿಡಿದು ಸಲಹುವನಾಕ್ಷಣಾ ॥೧॥ ಶ್ರೀ XXX ದುರ್ಮುಖನಾಮ ಸಂವತ್ಸರದ ನಿಜ ಆಷಾಡ ೧ ಲ್ಲೂ ಬರದಂತ್ತಾ ಯಕ್ಷಗಾನದ ಐರಾವತ ಪುಸ್ತಕಕ್ಕೆ ಶುಭಮಸ್ತು॥

**ವಿಷಯ :** ಕುಂತಿಯು ಐರಾವತ ಪೂಜೆಯನ್ನು ಮಾಡಿದ ಕಥೆ.

**ವಿಶೇಷ :** ಸಮಗ್ರ. ಸುಂದರ ಬರಹ.

—ವೈಸಿಬಿ

306

ಕೆ. ೧೩೬೯/೨ | ಐರಾವತ | ಯಕ್ಷಗಾನ
೯.೩" × ೧.೫" | ? | ?
೭೨ ಪತ್ರ | ೯ ಪಂಕ್ತಿ | ೩೪ ಅಕ್ಷರ

ಆದಿ : ಶ್ರೀ ಗಣೊಧಿಪತಯೇ ನಮಃ|| ಶ್ರೀ ರಾಮಚಂದ್ರಾಯಂ ನಮಃ|| ಶುಭ ಮಸ್ತು|| ಐರಾವತದ ಪುಸ್ತಕ ಬರಉದಕ್ಕೆ ಆಚಂದ್ರಾರ್ಕಮಸ್ತು|| ರಾಗ|| ಸೌರಾಷ್ಟ್ರ ತ್ರಿಉಡೇ||
ಶರಣು ಶರಣು ಸದಾಶಿವಸುತಾ
ಶರಣು ಸುರಗಣಸೇವಿತಾ
ಶರಣು ಸಕಲಾಭೀಷ್ಟದಾಯಕ
ಶರಣು ಶ್ರೀ ಗಣನಾಯಕಾ ಶರಣು ಶರಣೂ ||ಪಲ್ಲ||
ಕರಿವದನ ಕಮನೀಯ ರೂಪನಾ
ಕರುಣನಿಧಿ ಸುಪ್ರಕಾಶನಾ
ಪರಮಪಾವನ ಪಂಕಜೇಕ್ಷಣ
ನಿರುತ ಭಕ್ತಾಪೇಕ್ಷಣ ಶರಣು ಶರಣೂ ||೧||

ಅಂತ್ಯ : (೬೦ನೆಯ ಪತ್ರ)
ಕಂಜಾಲ ಕಂಣೀರಲೀ ಕೆಸರಾದಳು ಕುಂತೀದೇವಿ
ಬಂದು ಸೆಜ್ಜೆಯ ಮನೆಯ
ಮಂಚದ ಮೇಲೊರಗಿದಳ್ಕುಂತೀದೇವಿ ||೫||

ವಿಷಯ : ಕುಂತಿಯು ಐರಾವತ ಪೂಜೆಯನ್ನು ಮಾಡಿದ ಕಥೆ.

ವಿಶೇಷ : ಅಸಮಗ್ರ. ಶಿಥಿಲಪ್ರತಿ. ಕೆಲವು ಗರಿಗಳಿಗೆ ಹುಳು ಹಿಡಿದಿದೆ. ಕೆಲವು ಗರಿಗಳು ಮುರಿದು ತುಂಡಾಗಿವೆ. ಇದೇ ಕಟ್ಟಿನಲ್ಲಿ ಸಾನಂದಗಣೇಶ್ವರ ಸಾಂಗತ್ಯ ಎಂಬ ಮತ್ತೊಂದು ಗ್ರಂಥವಿದೆ.

—ವೈಸಿಬಿ

## 307

| ಕೆ. ೧೬೨೦/೧ | ಐರಾವತ | ನಾಟಕ |
|---|---|---|
| ೧೨.೩" × ೧.೩" | ? | ? |
| ೧-೮೪ ಪತ್ರ | ೫ ಪಂಕ್ತಿ | ೩೮ ಅಕ್ಷರ |

ಆದಿ : ಶ್ರೀ ಗಣಾಧಿಪತಯೆ ನಮಃ XXX ನಾಟಕ ಐರಾವತ ಪೊಸ್ತಕ ಬರೆಯುದಕ್ಕೆ ನಿರ್ವಿಘ್ನಮಸ್ತು|| ವಿಘ್ನೇಶ್ವರನ ಸ್ತುತಿ XXX ಯಿಂಥಾ ಗಜ ಹಸ್ತಿನಾಪುರಿ ಪಟ್ಟಣದಲ್ಲಿ ಜನಮೇಜಯ ರಾಯನು ವೈಶಂಪಾಯನ ಮುನೀಶ್ವರರು ಸಹಾವೊಡ್ಡೋಲಗದಲ್ಲಿ ಯಿರುವಂಥಾ ವೇಳೆಯಲ್ಲಿ ಆ ಮುನೀಶ್ವರರಿಗೆ ಸಾಷ್ಟಾಂಗ ದಂಡಪ್ರಣಾಮದಿಂದ ನಮಸ್ಕರಿಸಿ ಆಃ ಸ್ವಾಮಿ ಗುರುಪರೇಂಣ್ಯಾ ಯಿಕೊ ಹಿಂದಕ್ಕೆ ಭಾರತ ಕಥಾಪ್ರಸಂಗದಲ್ಲಿ ಅಷ್ಟದಶ

ಪರ್ವ ಉಂಟಲ್ಲ ಅವರೊಳಗೆ ಆದಿಪರ್ವದಲ್ಲಿ ಐರಾವತ ಪ್ರಸಂಗವನ್ನು ಯುಕ್ತಾಯುಕ್ತವಾಗಿ ಸವಿಸ್ತಾರವಾಗಿ ನೇಮಿಸಬೇಕು.

**ಅಂತ್ಯ :** ರಾಯರಾಯರಿಗೆ ಉಡುಗೆರೆಗಳಂ ಕೊಡಿಸಿ ಪಾಂಡವರು ಗಜನೋಹಿ ಯೆಂನ್ನು ಕ್ರಿಷ್ಣಾರ್ಪಣೆಯಂಗೈದರೂ॥ ರಾಕ್ಷಸ ಸಂವತ್ಸರದ ಶ್ರಾವಣ ಸುದ್ಧ ೩ ಸೌಮ್ಯವಾರಗಳ ೨೨ಲ್ಲು ಮಂಗಲಡ ಚಿಪ್ಪಲಿಗ ರಂಗೈಯನ ಐರಾವತದ ಪೊಸ್ತಕ ಬರದು ಸಂಪೂರ್ನವಾಯಿತು ಜಯ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಕುಂತಿ ಐರಾವತದ ನೋಂಪಿ ಮಾಡಿದುದು.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ನಳಚರಿತ್ರೆಯೂ ಇದೆ.

—ಜಿಜಿಎಂ

## 308

| ಕೆ. ೧೬೪೭ | **ಐರಾವತ** | ಯಕ್ಷಗಾನ |
|---|---|---|
| ೮.೫″ × ೧.೫″ | ? | ? |
| ೧-೬೬ ಪತ್ರ | ೬ ಪಂಕ್ತಿ | ೩೩ ಅಕ್ಷರ |

**ಆದಿ :** ಶ್ರೀ ಗಣಾಧಿಪತಯೇ ನಮಃ॥ ಐರಾವತದ ಪ್ರಸಂಗ ಬರಉದಕ್ಕೆ ಮಂಗಲ ಮಸ್ತು ರಾಗ................ವಿಡೆ।

ಶರಣು ಶರಣು ಸದಾಶಿವಸುತ
ಶರಣು ಸುರಗಣ ಸೇವಿತಾ
ಶರಣು ಸಕಲ ವಿದ್ಯಾದಾಯಕ
........ಣ ನಾಯಕಾ
....ಕರಿವದನ ಕಮನೀಯ್ಯರೂಪನ
ಕರುಣನಿಧಿ ಸುವ್ರತಿ.......

**ಅಂತ್ಯ :** ಬಾಲಕರ್ಕ್ನಚೆಂದ್ರನಿಗೆ ಬಾಲಕೋಟಿತೇಜನಿಗೆ
ಮೂಲೋಕದೊಡೆಯನಿಗೆ ಮುರವೈರಿಗೆ
ಜಯಮಂಗಳಂ। ಸದಾ ಶುಭಮಂಗಳಂ ॥೧॥
ವರಹವತಾರನಿಗೆ ದುರಿತಸಂಹಾರನಿಗೆ
ಪರಮಪಾವನಗೆ ಪಾಪವಿನಾಶಗೆ
ಧರೆಯೊಳತ್ಯಧಿಕವೆನಿಸುವಾ ಕಣ್ವಪುರದೊಳಗೆ
ಸ್ಥಿರವಾಗಿ ನೆಲಸಿರುವ ಶ್ರೀಕೃಷ್ಣಗೆ
ಜಯಮಂಗಳಂ ಸದಾ ಶುಭಮಂಗಳಂ ॥೨॥
ವಾರ್ಧಿಕ।

**ವಿಷಯು :** ಕುಂತಿಯು ಐರಾವತ ಪೂಜೆಯನ್ನು ಮಾಡಿದ ಕಥೆ.

**ವಿಶೇಷ :** ೧, ೨, ೩, ೪, ೫— ಈ ಪತ್ರಗಳ ಅಂಚು ಮುರಿದು ಗ್ರಂಥ ಲುಪ್ತ ವಾಗಿದೆ. ಅಸಮಗ್ರಪ್ರತಿ.

—ವೈಸಿಬಿ

## 309

ಕೆ. ೧೬೮೬/೧ **ಐರಾವತ** ಭಾಮಿನೀಷಟ್ಪದಿ
೯.೪″ × ೧.೪″ ? ?
೧-೨೮ ಪತ್ರ ೬ ಪಂಕ್ತಿ ೪೪ ಅಕ್ಷರ

**ಆದಿ :** ಶುಭಮಸ್ತು XXX ಐರಾವತವ ಬರೆಯುವದಕ್ಕೆ ನಿರ್ವಿಘ್ನಮಸ್ತು||
ಯಿಂದ್ರನೈರಾವತವ ಧರಣಿಗೆ
ತಂದು ನಿಜಮಾತೆಯನು ನೋಂಪಿಸ
ಲೆಂದು ಫಲುಗುಣ ಕೀರ್ತಿವಡದನು ಮೂರುಲೋಕವಲಿ ||ಪದನೂ||
ಕೇಳು ಜನಮೇಜಯ ಧರಿತ್ರೀ
ಪಾಲ ಹಸ್ತಿನಾಪುರಿಗೆ ಮುನಿಗಳ
ಮುಳುಳಿ ಬಿಜಯಂಗೈದ ವೇದವ್ಯಾಸನೊಂದುದಿನಾ
ಕೇಳಿದನು ಧೃತರಾಷ್ಟ್ರ ಭೀಷ್ಮಂಗೆ
ಹೇಳಿದನು ಋಷಿ ಬರವ ಹರುಷದ
ಯೇಳಿಗೆಲಿದಿರ್ಗೊಂಡು ತಂದರು ರಾಜಮಂದಿರಕೆ ||೧||

**ಅಂತ್ಯ :** ರಾಯಧರ್ಮಜ ತಂದು....
ತಾಯಹರಕೆಯನಿರ್ದು ಗದುಗಿನ ವೀರನಾ
ರಾಯಣನ ಕೃಪೆಯಲಿ ರಾಯ ಕೇಳೆಂದಾ ||೯೩||
ಅಂತೂ....ಕಂ ಪದನೂ ೪೫೭ಕಂ ಮಂಗಳ ಮಹಾ ಶ್ರೀ ಶ್ರೀ.

**ವಿಷಯು :** ಕುಂತಿಯು ಐರಾವತ ಪೂಜೆಯನ್ನು ಮಾಡಿದ ಕಥೆ.

**ವಿಶೇಷ :** ಸಮಗ್ರ. ಕಡೆಯ ಗರಿ ಸ್ವಲ್ಪ ಮುರಿದಿದೆ. ಇದರ ಜೊತೆಯಲ್ಲಿ ಜಯ ದೇವನ ಗೀತಗೋವಿಂದ (ಸಂ) ಕೃತಿಯಿದೆ.

—ಜಿಜಿಎಂ

## 310

ಕೆ. ೧೭೬೬ **ಐರಾವತ** ಯಕ್ಷಗಾನ
೧೦″ × ೧.೫″ ? ?
೧-೭೧ ಪತ್ರ ೬ ಪಂಕ್ತಿ ೪೦ ಅಕ್ಷರ

**ಆದಿ :** ಗಣಾಧಿಪತಯೇಂ ನಮಃ ಶ್ರೀ ಶಾರದಾಂಭಾಯು ನಮಃ ಶ್ರೀ ಮಾದೇಶ್ವರ ಲಿಂಗಾಯು ನಮಃ ಯಕ್ಷಗಾನದಲ್ಲಿ ಐರಾಪತ ಬರೆವದಕ್ಕೆ ಆಯುರಾರೋಗ್ಯಾದಿ ವೃದ್ಧಿರಸ್ತು ಶುಭಮಸ್ತು.

ಶರಣು ಶರಣು ಸದಾಶಿವಸುತಾ
ಶರಣು ಸುರಗಣಸೇವಿತಾ
ಶರಣು ಸಕಲ ವಿದ್ಯಾಪಾವಕ
ಶರಣು ಶ್ರೀ ಗಣನಾಯುಕ ||೧||

**ಅಂತ್ಯ :** ವರಹಾವತಾರನಿಗೆ ತರುಣ ಶ್ರೀಕೃಷ್ಣನಿಗೆ
ಶರಣು ಹೊಕ್ಕರ ಕಾಯ್ವ ಕರುಣಾಸಿಧಿಗೆ
ಧರೆಯೊಳತ್ಯಧಿಕವೆನಿಸಿಪ ಶ್ರೀ ಕಣ್ವಪುರದೊಳಗೆ
ಸ್ಥಿರವಾಗಿ ನೆಲಸಿರುವ ಶ್ರೀಕೃಷ್ಣಗೆ ಜಯು ಮಂಗಲ
ನಿತ್ಯ ಶುಭಮಂಗಳಂ.

ಯಕ್ಷಗಾನ ಐರಾವತ ಪುಸ್ತುಕಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಯಕ್ಷಗಾನದ ಐರಾವತ ಬರೆದು ಹೆಚ್ಚಿತು ಬರೆದಾತನು ಶಿಲಾಪುರಿಯಲ್ಲಿರುವಂತ್ತಾ ವುಪಾಧ್ಯರ ಸಂದ್ಯಪ್ಪಾಯ್ಯನವರ ಶ್ರೀ ದತ್ತಕುಮಾರನಾದಂತ ಸುಬ್ರಾಯುನು ಬರೆದು ಶ್ರೀ ಮಾದೇಶ್ವರ ಸ್ವಾಮಿಯುವರ ಬೆಟ್ಟದಲ್ಲಿ ಇರುವ ಪುಟ್ಟಗವುಡನ ಮಾದ ತಮ್ಮಡಿ ಮಗನಾದ ಹಲಗೆವೀರ ತಮ್ಮಡಿಗೆ ಪುತ್ರ ಪೌತ್ರಾದಿರಾರೋಗ್ಯ ಐಶ್ವರ್ಯ ಧನಕನಕ ವಸ್ತುವಾಹನವಾಗಿ ಬಾಳಲಿಯೆಂದು ಹರಶಿ ಕೊಟ್ಟಂತಾ ಐರಾವತ ಪುಸ್ತುಕಕೆ ಜಯು ಮಂಗಳ ಮಹಾ ಶ್ರೀ ಶ್ರೀ.

**ವಿಷಯು :** ಕುಂತಿ ಐರಾವತ ಪೂಜೆ ಮಾಡಿದ ಕಥೆ.

**ವಿಶೇಷ :** ಹಸ್ತಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ಹಕರಾ

## 311

| ಕೆ. ೧೮೦೩/೬ | ಐರಾವತ | ಭಾಮಿನೀಷಟ್ಪದಿ |
|---|---|---|
| ೧೦.೯" × ೨" | ? | ? |
| ೨೨ ಪತ್ರ | ೮ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀ ಗಣಾಧಿಪತಯೇ ನಮಃ|| ಶುಭಮಸ್ತು|| ನಿರ್ವಿಘ್ನಮಸ್ತು||
ಇಂದ್ರನೈರಾವತವ ಧರಣಿಗೆ
ತಂದು ನಿಜಮಾತೆಯುನು ನೊಸ
ಲೆಂದು ಫಲುಗುಣ ಕೀರ್ತಿಪಡಡನು ಮೂರುಲೋಕದಲಿ ||ಪಲ್ಲ||

ನೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕರಿಸಿಯೆ ನಿರಂತರ ಪರಮ ಚಿ
ದ.ಕಾಶಾಂಗನೆನಿಸಿ ಸುಖಿಸುತ್ತಿಹುದೆಂದನು ದೇಶಿಕನೂ ||೧೦೨||

ಕಲ್ಯಾಣೇಶ್ವರ ಮದ್ವಂದ್ವಂ ಸದಸಂಖ್ಯಾಪದಾನಿತಂ
ಗ್ನ್ಯಾನಂ ಸಮುಭ್ಯಸೆನ್ನಿರ್ತ್ಯಂ ದೇಶಿಕೇಂದ್ರ ಪ್ರಸಾದತಃ
ಲಿಖಿತಂ ಗುರುಪುತ್ರೇಣಸಂ ಜಿನಾಥಧಿಮತಃ ||೧೦೩||
ಅಂತು ಸಂಧಿ ೧ಕ್ಕಂ ಪದನು ೧೦೩ಕ್ಕಂ ಶ್ರೀ ಕಲ್ಯಾಣೇಶ್ವರ ಸಮಾಪ್ತಿ.

**ವಿಷಯ :** ವೀರಶೈವತತ್ತ್ವ ನಿರೂಪಣೆ.

**ವಿಶೇಷ :** ಸಮಗ್ರ. ಶಕಟರೇಫ ಇದೆ. ಈ ಕೃತಿಯ ಇತರ ಪ್ರತಿಗಳಿಗೆ ಕ.ಹ.ವ ಸೂ.ಯ ಒಂದನೆಯ ಸಂಪುಟ ನೋಡಿ. ಇದೇ ಕಟ್ಟಿನಲ್ಲಿ ಶಿವಯೋಗಾಂಗಭೂಷಣ, ಸುದ್ಗುರು ರಹಸ್ಯ—ಮೊದಲಾದ ಇತರ ಏಳು ಕೃತಿಗಳಿವೆ.

—ಬಿಎಸ್ಎಸ್

## 420

| ಕೆ. ೧೦೪೦/೩ | **ಕಲ್ಯಾಣೇಶ್ವರ** | ಪರಿವರ್ಧಿನೀಷಟ್ಪದಿ |
|---|---|---|
| ೫.೨" × ೧.೯" | ಗುರುಬಸವೇಶ | ೧೪೩೦ |
| ೮೨-೧೦೩ ಪತ್ರ | ೧೦ ಪಂಕ್ತಿ | ೩೨ ಅಕ್ಷರ |

**ಆದಿ :** ಕಲ್ಯಾಣೇಶ್ವರ|| ರಾಗ ಶಾಂತಮುಲಹರಿ||

ಪಲ್ಲವ|| ಕಲ್ಯಾಣೇಶ್ವರನಾಮಯ ವಿ
ವೇಕದೂರನ ಸಜ್ಜಡ ಮಾಯಾ
ಭೀಕರನಾನತ ಜನನಾಶ್ರಯ ಹೃದ್ದಿವ್ಯ ಪಾರಾವಾರ

ಪದ|| ರಾಕನಖಂಡ ಸುಖಾಸ್ಪದ ಸಗ್ಗುಣನ
ನೇಕ ಜಗಂ ನಟನಾಶ್ರಯ ವಿಮಳ ಚಿ
ದಾಕಾಶಂಗನೆನಿಪ ಗುರುಬಸವನು ನೆಲಸಿರಲೆಂನೊಳಗೆ ||೧||

**ಅಂತ್ಯ :** ಈ ಕಲ್ಯಾಣೇಶ್ವರಮೂರ್ತಿಯನಾ
ಲೋಕಿಸಿದವನತಿಮುದದಿಂ ತಿಳಿಯಲ
ನೇಕ ಭವಾಶ್ರಯವಾಹ ಭೌತಿಕ ಸಂಸಾರಿಕಜಾಲವನೊ
ನೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕೀಕರಿಸಿಯೆ ನಿರಂತರ ಪರಮ ಚಿದಾ
ಕಾಶಾಂಗನೆನಿಸಿ ಸುಖಿಸುತ್ತಿಹದೆಂದನು ದೇಶಿಕನೂ ||೧೦೨||

ಕಲ್ಯಾಣೇಶ್ವರ ಮದ್ವಂದಂ ಸಥಂ ಸಂಖ್ಯಾಪದಾನ್ವಿತಂ
ಗ್ಞಾನಂ ಸಮಭ್ಯಸೇನ್ನಿರ್ತ್ಯಂ ದೇಶಿಕೇಂದ ಪ್ರಶಾದತಃ॥
ಲಿಖಿತಂ ಗುರು ಪುತ್ರೇಣಸಂ ಜಿಂನಾದಿಮತಃ ॥೧೦೬॥

ಅಂತೂ ಸಂಧಿ ೧ಕ್ಕಂ ಪದನು ೧೦೩ಕಂ ಮಂಗಳಂ ಕಲ್ಯಾಣೇಶ್ವರ ಸಂಪೂರ್ನಂ ಮಂಗಳಂ ಮಹಾಶ್ರೀ.

**ವಿಷಯ:** ವೀರಶೈವ ತತ್ತ್ವಬೋಧೆ.

**ವಿಶೇಷ:** ಸಮಗ್ರ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಶಿವಯೋಗಾಂಗ ವಿಭೂಷಣ, ಸದ್ಗುರು ರಹಸ್ಯ, ಸ್ವರೂಪಾಮೃತ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯ ಕಾವ್ಯಗಳೂ ಇವೆ. [ಕ.ಹ.ಪ ವ.ಸೂ. ಪ್ರಥಮ ಸಂಪುಟ ಪುಟ ೨೬೦-೨೬೧; ಕ್ರಮಾಂಕ 257-258 ನೋಡಿ]

—ಕೆಆರ್ ಎಸ್

## 421

| ಕೆ. ೧೧೦೩/೮ | **ಕಲ್ಯಾಣೇಶ್ವರ** | ಪರಿವರ್ಧಿನೀಪಟ್ಪದಿ |
|---|---|---|
| ೧೪.೨" × ೨" | ಗುರುಬಸವೇಶ | ೧೪೩೦ |
| ೧೭೮-೦೮೨ ಪತ್ರ | ೧೩ ಪಂಕ್ತಿ | ೯೫ ಅಕ್ಷರ |

**ಆದಿ:** ಶ್ರೀಗುರು ಬಸವಲಿಂಗಾಯ ನಮಃ॥ ಪರಿವರ್ಧಿನಿ॥ ಕಲ್ಯಾಣೇಶ್ವರ॥ ರಾಗ ಶಾಂತಮಲಹರಿ॥

ಪಲ್ಲವ॥ ಶ್ರೀ ಕಲ್ಯಾಣೇಶ್ವರನಾಮಾಮ್ನಾಯ ವಿ
ವೇಕವಿದೂರನ ಸಜ್ಜಡಮಾಯಾ
ಭೀಕರನಾನತಜನಹೃದ್ದಿವ್ಯಸುಧಾ ಪಾರಾವಾರಾ
ರಾಕನಖಂಡ ಸುಖಾಸ್ಪದ ಸಗುಣನ
ನೇಕ ಜಗಂ ನಟನಾಶ್ರಯ ವಿಮಳ ಚಿ
ದಾಕಾಶಾಂಗನೆನಿಪ ಗುರುಬಸವನು ನೆಲಸಿರಲೆನ್ನೊಳಗೆ ॥೧॥

**ಅಂತ್ಯ:** ಯಿಾ ಕಲ್ಯಾಣೇಶ್ವರ ಮೂರ್ತಿಯನಾ
ಲೋಕಿಸಿದವನತಿಮುದದಿಂ ತಿಳಿಯಲ
ನೇಕ ಭವಾಶ್ರಯವಹ ಭೌತಿಕ ಸಂಸಾರಿಕ ಜಾಲವನೂ
ನೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕೀಕರಿಸಿ ನಿರಂತರ ಪರಮ ಚಿ
ದಾಕಾಶಾಂಗನೆನಿಸಿ ಸುಖಿಸುತ್ತಿಹುದೆಂದನು ದೇಶಿಕನು ॥೧೦೨॥

ಶ್ಲೋಕ॥ ಕಲ್ಯಾಣೇಶ್ವರ ಮದ್ವಂದಂ ಸತ ಸಂಖ್ಯ ಪದಾನ್ವಿತಂ
ಗ್ನಾ ್ಯನಂ ಸಮಭ್ಯಸೇನ್ನಿರ್ತ್ಯಂ ದೇಶಿಕೇಂದ್ರ ಪ್ರಸಾದತಃ
ಲಿಖಿತಂ ಗುರುಪುತ್ರೇಣನಂಜಿನಾಥ ಧೀಮತಃ ॥೧೦೩॥
ಅಂತು ಸಂಧಿ ೧ಕ್ಕಂ ಪದನು ೧೦೩ಕ್ಕಂ ಅಂತು ತೃತೀಯ ಕಾವ್ಯಕ್ಕಂ ಪದನು ೬೧ಲಕ್ಕಂ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ತತ್ತ್ವಬೋಧೆ.

ವಿಶೇಷ : ಇದರ ಜೊತೆಯಲ್ಲಿ ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಪುರಾಣದ ಕಥೆಗಳು, ಬಸವಪುರಾಣ ಮತ್ತು ಭೈರವೇಶ್ವರ ಪುರಾಣದ ಕಥೆಗಳಿಗೆ ಸಂಸ್ಕೃತ ಆಧಾರ ಮತ್ತು ಸಪ್ತಕಾವ್ಯದ ಗುರುಬಸವನ ಕೃತಿಗಳಿವೆ.

—ಜಿಜಿಎಂ

## 422

ಕೆ. ೧೩೭೨/೩ **ಕಲ್ಯಾಣೇಶ್ವರ** ಪರಿವರ್ಧಿನೀಷಟ್ಪದಿ
೯" × ೨" ಗುರುಬಸವೇಶ ೧೪೩೦
೩೯-೪೭ ಪತ್ರ ೧೨ ಪಂಕ್ತಿ ೬೨ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯೇ ನಮಃ। ಶ್ರೀ ಸಚ್ಚಿದಾನಂದಾಯೇ ನಮಃ। ಶ್ರೀ ಶಿವಾಯ ನಮಃ॥ ಕಲ್ಯಾಣೇಶ್ವರ॥ ರಾಗಾ॥ ಶಾಂತಮಲಹಂ॥

ಪಲ್ಲವಾ॥ ಶ್ರೀ ಕಲ್ಯಾಣೇಶ್ವರನಾಮ್ನಾಯ ವಿ
ವೇಕ ವಿದೂರನ ಸಜ್ಜಡಮಾಯಾ
ಭೀಕರನಾನತಜನ ಹೃದಿವ್ಯಸುಧಾ ಪಾರಾವಾರಾ
ರಾಕನಖಂಡ ಸುಖಾಸ್ಪದ ಸಗುಣವ
ನೇಕ ಜಗಂನ್ನಟನಾಶ್ರಯ ವಿಮಳ ಚಿ
ದಾಕಾಶಾಂಗನೆನಿಪ ಗುರುಬಸವನು ನೆಲಸಿರಲೆಂನೊಳಗೇ ॥೧॥

ಅಂತ್ಯ : ಯಿಾ ಕಲ್ಯಾಣೇಶ್ವರ ಮೂರ್ತಿಯನಾ
ಲೋಕಿಸಿದವನತಿಮುದದಿಂದ ತಿಳಿಯಲ
ನೇಕ ಭವಾಶ್ರಯವಹ ಭೌತಿಕ ಸಂಸಾರಿಕ ಜಾಲವನೂ
ಸೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕೀಕರಿಸಿಯೆ ನಿರಂತರ ಪರಮ ಚಿ
ದಾಕಾಶಾಂಗನೆನಿಸಿ ಸುಖಿಸುತ್ತಿಹುದೆಂದನು ದೇಶಿಕನೂ ॥೧೦೨॥

ಕಲ್ಯಾಣೇಶ್ವರ ಮದ್ವಂದ್ವಂ ಶತಸಂಖ್ಯಾಪದಾನ್ವಿತಂ
ಜ್ಞಾನಂ ಸಮಭ್ಯಸೇ ನಿತ್ಯಂ ದೇಶಿಕೇಂದ್ರ ಪ್ರಸಾದತಃ॥

ಕಲ್ಯಾಣೇಶ್ವರ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ||
ಯಿಂತು ಅಧ್ಯಾಯ ೧ಕ್ಕಂ ಪದನು ೧೦೨ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ತತ್ತ್ವಬೋಧೆ.

**ವಿಶೇಷ :** ಇದು ಗುರುಬಸವೇಶನ ಷಟ್ಕಾವ್ಯಗಳಲ್ಲಿ ಒಂದು. ಈ ಕೃತಿಯ ಜತೆಯಲ್ಲಿ ಸದ್ಗುರು ರಹಸ್ಯ ಮೊದಲಾದ ಇನ್ನೂ ೭ ಕೃತಿಗಳಿವೆ. ಕೃತಿ ಸಮಗ್ರ. ಸುಂದರಾಕ್ಷರ. ಹಾಳೆಗಳು ಸದೃಢವಾಗಿವೆ.

—ಎಂಪಿಎಂ

## 423

ಕೆ.ಎ. ೪೭೮/೨ | **ಕಲ್ಯಾಣೇಶ್ವರ** | ಪರಿವರ್ಧಿನೀಷಟ್ಪದಿ
೧೨" × ೯.೮" | ಗುರುಬಸವೇಶ | ೧೪೩೦
೭೫-೧೦೦ ಪುಟ | ೨೪ ಪಂಕ್ತಿ | ೧೫ ಅಕ್ಷರ

**ಆದಿ :** ಕಲ್ಯಾಣೇಶ್ವರ ಶ್ರೀಗುರುಬಸಲಿಂಗಾಯ ನಮಃ| ರಾಗ ಶಾಂತಮಲಹರಿ||

ಪದ|| ಶ್ರೀ ಕಲ್ಯಾಣೇಶ್ವರನಾಮ್ನಾಯ ವಿ
ವೇಕವಿದೂರನ ಸಚ್ಚಡ ಮಾಯಾ
ಭೀಕರನಾನತಜನ ಹೃದ್ದಿವ್ಯ ಸುಧಾ ಪಾರಾವಾರ
ರಾಕನಖಂಡ ಸುಖಾಸ್ಪದ ಸಗುಣನ
ನೇಕ ಜಗನ್ನಟನಾಶ್ರಯ ವಿಮಲ ಚಿ
ದಾಕಾಶಾಂಗನೆನಿಪ ಗುರುಬಸವನು ನೆಲಸಿರಲೆನ್ನೊಳಗೆ ||೧||

**ಅಂತ್ಯ :** ಈ ಕಲ್ಯಾಣೇಶ್ವರ ಮೂರ್ತಿಯನಾ
ಲೋಕಿಸಿದವನತಿಮುದದಿಂ ತಿಳಿಯಲ
ನೇಕ ಭವಾಶ್ರಯವಹ ಭೌತಿಕ ಸಂಸಾರಿಕ ಜಾಲವನು
ನೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕೀಕರಿಸಿ ನಿರಂತರ ಪರಮ ಚಿ
ದಾಕಾಶಾಂಗನೆನಿಸಿ ಸುಖಿಸುತ್ತಿಹುದೆಂದನು ದೇಶಿಕನು ||೧೦೨||

ಗ್ರಂಥ|| ಕಲ್ಯಾಣೇಶ್ವರ ಮದ್ವಂದ್ವಂ ಶತಸಂಖ್ಯಪದಾನ್ವಿತಂ
ಜ್ಞಾನಂ ಸಮುಭ್ಯಸೆ ನಿತ್ಯಂ ದೇಶಿಕೇಂದ್ರ ಪ್ರಸಾದತಃ||
ಕಲ್ಯಾಣೇಶ್ವರ ಸಂಪೂರ್ಣಂ ಮಂಗಳ ಮಹಾಶ್ರೀ.

**ವಿಷಯ :** ಬಸವನ ಸಹಚರಿಯಾದ ನಂದಿನಿ ತನ್ನ ಕಿಂಕರನಾದ ವಿಚಿತ್ರಕನೆಂಬ ಗಣೇಶ್ವರನು ಸುಜ್ಞಾನ ಚರಿತ್ರನಾಗಲು ಮಾಡಿದ ಜ್ಞಾನಬೋಧೆಯನ್ನು ದೇಶಿಕನು ಶಿಷ್ಯನಿಗೆ ನಿರೂಪಿಸಿದಂತೆ ಹೇಳಿದೆ. (ವೀರಶೈವ ತತ್ತ್ವಬೋಧೆ).

**ವಿಶೇಷ :** ಇದನ್ನು 1952 ರಲ್ಲಿ ಎಂ. ಗೋಪಾಲಕೃಷ್ಣ ಭಟ್ಟರು ಮದರಾಸಿನ ಪ್ರಾಚ್ಯ ಕೋಶಾಗಾರದ ಡಿ. 458 ರ ಮೂಲಪ್ರತಿಯಿಂದ ನಕಲು ಮಾಡಿದ್ದಾರೆ. ಇದರೊಡನೆ ಶಿವಯೋಗಾಂಗ ವಿಭೂಷಣ, ಸ್ವರೂಪಾಮೃತ ಮೊದಲಾದ ಇತರ ನಾಲ್ಕು ಗ್ರಂಥಗಳಿವೆ.

—ಬಿಎಸ್ಎಸ್

## 424

| ಕೆ.ಎ. ೫೦೮ | **ಕಲ್ಯಾಣೇಶ್ವರ** | ಪರಿವರ್ಧಿನೀಷಟ್ಪದಿ |
|---|---|---|
| ೮.೩″ × ೧೩″ | ಗುರುಬಸವೇಶ | ೧೪೩೦ |
| ೧-೨೪ ಪುಟ | ೨೬ ಪಂಕ್ತಿ | ೧೭ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಕಲ್ಯಾಣೇಶ್ವರ॥
ರಾಗ॥ ಶಾಂತಮಲಹರಿ॥ ಪದ॥ ಪರಿವರ್ಧಿನಿ ಷಟ್ಪದಿ॥
ಶ್ರೀ ಕಲ್ಯಾಣೇಶ್ವರನಾಮ್ನಾಯ ವಿ
ವೇಕವಿದೂರನ ಸಜ್ಜಡ ಮಾಯಾ
ಭೀಕರನಾನತಜನಹೃದ್ದಿವ್ಯಸುಧಾಪಾರಾವಾರಾ
ರಾಕನಖಂಡ ಸುಖಾಸ್ಪದ ಸಗುಣನ
ನೇಕ ಜಗನ್ನಟನಾಶ್ರಯ ವಿಮಲ ಚಿ
ದಾಕಾಶಾಂಗನೆನಿಪ ಗುರುಬಸವನು ನೆಲಸಿರಲೆನ್ನೊಳಗೆ ॥೧॥

**ಅಂತ್ಯ :** ಈ ಕಲ್ಯಾಣೇಶ್ವರ ಮೂರ್ತಿಯನಾ
ಲೋಕಿಸಿದವನತಿಮುದದಿಂ ತಿಳಿಯಲ
ನೇಕ ಭವಾಶ್ರಮವಹ ಭೌತಿಕ ಸಂಸಾರಿಕ ಜಾಲವನು
ನೀಕರಿಸಿಯೆ ನಿರ್ಮಳವಹ ಲಿಂಗದೊ
ಳೇಕೀಕರಿಸಿ ನಿರಂತರ ಪರಮ ಚಿ
ದಾಕಾಶಾಂಗನೆನಿಸಿ ಸುಖಿಸುತ್ತಿಹುದೆಂದನು ದೇಶಿಕನು ॥೧೨೬॥

ಶ್ಲೋಕ॥ ಕಲ್ಯಾಣೇಶ್ವರ ಮದ್ವಂದ್ವಂ ಶತಸಂಖ್ಯಾಪದಾನ್ವಿತಂ
ಜ್ಞಾನಂ ಸಮುಭ್ಯಸೇನ್ನಿತ್ಯಂ ದೇಶಿಕೇಂದ್ರ ಪ್ರಸಾದತಃ॥
ಕಲ್ಯಾಣೇಶ್ವರ ಸಂಪೂರ್ಣಂ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ತತ್ತ್ವಬೋಧೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

—ವೈಸಿಬಿ

425

ಕೆ. ಬಿ. ೫೧೦/೧ **ಕಲ್ಲೆ ಲಿಂಗೇಶ್ವರನ ಚಾರಿತ್ರ** ಸಾಂಗತ್ಯ

೮.೨" × ೬.೬" ಬಸವ ?

೧-೧೫೦ ಪತ್ರ ೧೫ ಪಂಕ್ತಿ ೧೨ ಅಕ್ಷರ

**ಆದಿ :** ಕಲ್ಲೇ ಲಿಂಗೇಶ್ವರ ಚಾರಿತ್ರ ಬರೆಯುವುದಕ್ಕೆ ಶುಭಮಸ್ತು
ಷಟ್ಪದಿ|| ವರುಷ ಸರ್ವಧಾರಿ ಮಾಸ ಪಾಲ್ಗುಣ ಬಹುಳ
ನೆರೆ ಪಕ್ಷ ತಿಥಿಯು ಅವತಾರದಲ್ಲಿರುವ ದಿನ
ಭರದಿ ಸುಧಕರನ ನಕ್ಷತ್ರ ಉತ್ರಾಷಾಢ ತ್ವರಿತಗಳಿಗೆಯನುಸುರ್ವೆನೂ
ಪರಮ ಷಡ್ರುಚಿಯು ಮೂಹೂರ್ತದಲಿ ಶಿರಿಗೆರೆಯಲ್ಲಿ
ಹರುಷದಿಂ ಜಂಬೈಯನಾಲಾಯದಿ ಯೀ ಲಿಖಿತ
ಕರುಣೆ ಗುರು ಕಲ್ಲೆ ಲಿಂಗೇಶ್ವರನ ಚಾರಿತ್ರ ಬರೆಯೆ ಪ್ರಾರಂಭ ಶರಣೂ||೧||
ಸಂಗತ್ಯ|| ಪದನೂ
ಗುರುಸ್ಮರಣೆಯು ಮಾಡಿ ಪರಶಿವನ ಕೊಂಡಾಡಿ
ಹರಶರಣರ ಪಾದಕೆರಗೀ
ಪರಮ ಪಾವನಮೂರ್ತಿ ವಿರೂಪಾಕ್ಷ ಲಿಂಗಾನ
ಚರಣಾವ ನಾ ಬಲಗೊಂಬೇ (೩ನೆಯ ಪತ್ರದಿಂದ) ||೧||

**ಅಂತ್ಯ :** ವರಪುತ್ರ ಬಸವನು ಹರುಷದಿ ಸಿರಿಗೆರೆ
ಭರದಿ ಜಂಬೈಯನಾಲಯದಿ
ವರ ಶಾಸ್ತ್ರವೋದಿಸುತ ಗುರುಪಾದ ಸ್ಮರಿಸುತಾ
ಬರದಂಥ ಕಥೆಗೆ ಜಯ ಜಯತೂ ||೬೧||

X X X

ಇದು ಕಥೆ ಭಕ್ತರ ಮನಕೆ ಅಮೃತಸೋನೆ
ಇದು ಶರಣರ ಮನೋತ್ಸಹವೂ
ಇದನೋದಿ ಬರದು ಕೇಳ್ದರೆ ಮುಕ್ತಿಸಾಮ್ರಾಜ್ಯ
ಪದವೀವ ಪಾರ್ವತೀಕಾಂತಾ ||೬೫||
ಅಂತೂ ಸಂಧಿ ೧೧ಕ್ಕಂ ಪದನೂ ೧೯೯೬ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಹಿರಿಯಾಳಪುರದ ಶಿವಶರಣ ಕಲ್ಲೆಲಿಂಗನ ಕಥೆ.

**ವಿಶೇಷ :** ಬರಹವು ಮುದ್ದಾಗಿದೆ. "ಚಿತ್ರದುರ್ಗ ತಾಲ್ಲೂಕು ಸಿರಿಗೆರೆ ಜಗದ್ಗುರು ತರಳ ಬಾಳ ಮಠದ ಏಜೆಂಟ್ ಶ್ರೀ ರುದ್ರಪ್ಪಯ್ಯನವರಿಂದ ತರಿಸಿಕೊಳ್ಳಲಾಗಿದ್ದ ಓಲೆ ಪ್ರತಿಯಿಂದೀ ಪ್ರತಿ ತಯಾರು ಮಾಡಿದೆ" ಎಂದು ಗ್ರಂಥದ ಕೊನೆಯಲ್ಲಿದೆ. ಪ್ರತಿ ಮಾಡಿದವರು ಶ್ರೀ ಎಂ. ಎಸ್. ಬಸವರಾಜಯ್ಯಅವರು.

ಇದೇ ಪುಸ್ತಕದಲ್ಲಿ ವಂಶಾವಳಿ ಟೀಕು, ಮಣ್ಣೇಶ್ವರ ನಾಂದ್ಯ, ಗುರುಮುರಿ ಗೇಂದ್ರ ಷಟ್ಪದಿ ಎಂಬ ಇತರ ಮೂರು ಕೃತಿಗಳಿವೆ.

—ಕೆಆರ್ಎಸ್

## 426

ಕೆ.ಬಿ. ೭೨೩/೮ **ಕವಡಕಂಟಕ ಫಲಶ್ರುತಿ** ಗದ್ಯ

೬.೫" × ೮.೫" ? ?

೧೨೪ನೆಯ ಪುಟ ೧೯ ಪಂಕ್ತಿ ೨೪ ಅಕ್ಷರ

**ಆದಿ :** ಫಾಲ್ಗುಣ–ಚೈತ್ರ–ವೈಶಾಖ ಯೀ ಮೂರು ತಿಂಗಳು ಪಶ್ಚಿಮಕ್ಕೆ ತಲಿ–ಪೂರ್ವಕ್ಕೆ ಕಾಲು–ಉತ್ತರಕ್ಕೆ ಯಡಹಸ್ತ ದಕ್ಷಿಣಕ್ಕೆ ಬಲಹಸ್ತ। ಯೀ ಪ್ರಕಾರ ಅಂಗಾತ ಮಲಗುವನು। ಮೊದಲು ಮಾಸ ೧೫ ದಿವಸ ಕಸಾ ಗೂಡಿಸುವನು। ೧೫ ದಿನ ಅಡ್ಗಿ ಮಾಡುವನು॥

**ಅಂತ್ಯ :** ಮನಿ ತರ ಹಾಕಿಸಬೇಕಾದರೆ ತಲಿ ಕಡಿಗಿಂದ ಕಾಲು ಕಡಿಗೆ ತರ ಹಾಕಿ ಕೋತ ಹೋಗಬೇಕು ಅಂದ್ರೆ ಸುಖವಾಗುವದು। ದಾವಕಾರ್ಯಕ್ಕಾದರೂ ಅಡ್ಗಿ ಮಾಡುವಾಗ ಅಥವ ರಾಜಯೋಗ ಮಾಡುವಾಗ ಶುಭ ಉಳ್ಳದ್ದು ಮುಖ್ಯವಾಗಿ ಗೃಹತರ ಹಾಕಿಸುವ ವಿಷಯದಲ್ಲಿ ಯೀ ವಾಸ್ತಾಪುರುಷಂದು ಬಹು ಯಚ್ಚರದಿಂದ ಮಾಡುಬೇಕು। ಶುಭಮಸ್ತು॥ ಶ್ರೀ॥

**ವಿಷಯ :** ವಾಸ್ತುಪುರುಷನ ಚಲನವಲನಗಳ ವಿಚಾರ. ಅಂದರೆ, ಮನೆಕಟ್ಟಲು ಬೇಕಾದ ಕಾಲವಿಚಾರ.

**ವಿಶೇಷ :** ಸಮಗ್ರ ಕೃತಿ. ಸುದೃಢ ಪ್ರತಿ. ಮೋಡಿ ಅಕ್ಷರ. ಇದರೊಂದಿಗೆ ನಕ್ಷತ್ರ ತಾರಾವಳಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 427

ಕೆ.ಎ. ೪೭೦/೧ **ಕವಿಕಂಠ ಪಾಶ** ಶ್ಲೋಕ,ಟೀಕು

೮.೧" × ೧೨.೬" ? ?

೧-೧೨ ಪುಟ ೨೬ ಪಂಕ್ತಿ ೧೭ ಅಕ್ಷರ

**ಆದಿ :** ಅಕ್ಷರದ ಲಕ್ಷಣದ ಶ್ರುತಿ। ಸಂಸ್ಕೃತದಲ್ಲಿ ಮೂಲಗ್ರಂಥ। ಎಲ್ಲಾ ಕವಿಗಳ ಜೀವಾಳ। ಈಶ್ವರ ಉವಾಚ॥

ಅಕಾರಂ ಕೃಷ್ಣವರ್ಣಸ್ತುಪಮಾಂಸ್ವೆ ವಿಷ್ಣುದೇವತಾ
ತತ್ಫಲ ಮರಣಂ ಪ್ರಾಪ್ತಿ ಕವಿತ್ವಂ ನ ಪ್ರಜಾಯತೆ

ಅಕಾರೆ ಯದ್ವಶೊನಾಯ್ಯ ದೇವತಾ ಶಂಭುನುಜ್ಞ ಸೇ
ವಿನಿಯೋಗ ಕರಣಸ್ಯಾ ಶುಭು ಸೌಭಾಗ್ಯಂ ಪದಂ ಮುಚ್ಯತೆ

ಟೀ|| ಅಕಾರವೆ ಕಪ್ಪು| ವಿಷ್ಣು ಅಧಿದೇವತೆ| ಆ ಅಕಾರವು ಪದದೊಳಗೆ ಮೊದಲು ಬಂದರೆ ಕಾವ್ಯಕರ್ತಂಗೆ ಹಾನಿ| ಪದ ಹೇಳಿಸಿಕೊಂಡವ ನಷ್ಟ ನಹನು| ಇನು ಅಕಾರಾಕ್ಷರ ಬರೆ ಲೇಸು| ಅಕಾರಕೆ ಶಂಭು ಅಧಿದೇವತೆ ಅದು ಕಪೋತವರ್ಣ| ಆ ಆಕಾರವು ಪದದ ವಡಿಗೆ ಬಂದರೆ ಪದನ ಹೇಳಿಸಿ ಕೊಂಡಾತಂಗೆ ಸಿರಿಸೌಭಾಗ್ಯ| ಹೇಳಿದಾತಗೆ ವ್ಯಾಧಿ ||೧||

ಅಂತ್ಯ: ಇನ್ನು ಜ, ಞ, ಣ, ನ, ಮ| ಈ ಐದು ಅಕ್ಷರವು ನಪುಂಸಕ ಲಿಂಗ| ಇನ್ನು ಅಲ್ಪಪ್ರಾಣ ಮಹಾಪ್ರಾಣಾಕ್ಷರಗಳಲ್ಲಿ ಕ ಗ ಚ ಜ ಟ ಡ ತ ದ ಪ ಬ ಯೆಂಬಕ್ಷರವೆ ಸ್ತ್ರೀಲಿಂಗ| ಮಿಕ್ಕಾದ ಮಹಾ ಪ್ರಾಣಾದ್ಯಕ್ಷರವೆ ಪುಲಿಂಗ| ಯಕಾರವೆ ಸ್ತ್ರೀಲಿಂಗ| ರಕಾರವೆ ಪುಲಿಂಗ ಅಕಾರವೆ ಸ್ತ್ರಿಲಿಂಗ| ವಕಾರವೆ ....ಗ ಶಕಾರವೆ ಪುಲಿಂಗ| ಷಕಾರವೆ ಪುಲಿಂಗ ಸಕಾರ ನಪುಂಸಕ ಲಿಂಗ| ಹಕಾರ ಪುಲಿಂಗ| ಳಕಾರ ನಪುಂಸಕ ಲಿಂಗ| ಕ್ಷಕಾರ ಸ್ತ್ರೀಲಿಂಗ| ಈ ಆದಿ ಭರತವು ಉಮಾ ಮಹೇಶ್ವರರ ಸಂವಾದದಿಂದಾದ ವರ್ಣ ಉತ್ಪತ್ತಿ ವಿವ ರಣಂ........

ವಿಷಯ: ಅಕ್ಷರಗಳ ಲಕ್ಷಣ.

ವಿಶೇಷ: ಅಸಮಗ್ರ. ಇದೇ ಪುಸ್ತಕದಲ್ಲಿ ನಾನಾರ್ಥ ರತ್ನಾಕರ, ಮಂಗರಾಜ ನಿಘಂಟು, ಅಭಿನವ ನಿಘಂಟು ಎಂಬ ಕೃತಿಗಳಿವೆ

—ವೈಸಿಬಿ

428

| ಕೆ. ೧೧೧೨/೨ | **ಕವಿರಾಜಮಾರ್ಗ** | ಪದ್ಯ |
|---|---|---|
| ೧೩" × ೨" | ನೃಪತುಂಗ | ೯೦೮ |
| ೧-೧೧ ಪತ್ರ | ೮ ಪಂಕ್ತಿ | ೫೭ ಅಕ್ಷರ |

ಆದಿ: ಶ್ರೀ ವೀತರಾಗಾಯ ನಮಃ ಶುಭಮಸ್ತು ಕವಿರಾಜಮಾರ್ಗದ ಶಬ್ದಾಲಂಕಾರ

ಕಂದ|| ಶ್ರೀ ಮಣಿಚಾದವತಾರಕ
ನಾಮೋತ್ಸಾಹದಿಪು............
............ ನವಕುಮುದ
ಶಾಮುಮಹಾಮಹಿಮ ಶಙಣು ಶರಣ್ಯೆ ರಾಮಾ|

ಅಂತ್ಯ: ದೀಪಕ ಮೃಗನಯನೆಯರೊಲವುಂಬ
ಳಗೊಣ್ದು ಕಳ್ತಡದಿ ಪೊಳೆದು ಮಿಂಚುವ ಮಿಂಚುಂ

ಬಗೆವಾಗಲಿಲ್ಲವದೋಂ
ದು ಗುಳಿಗೆಯಿಂದ ಘನ ನಿಬದ್ಧಮೆನೆ ಸಂದಿದ್ದು೯||

ವಿಷಯ: ಅಲಂಕಾರ ಗ್ರಂಥ.

ವಿಶೇಷ: ೧-೧೧ಲ ವರೆಗೆ ಮಾತ್ರ ಕಂದಪದ್ಯಗಳಿವೆ. ಅಕ್ಷರ ಚೆನ್ನಾಗಿದೆ.

—ಎಂಸಿಪಿ

## 429

| ಕೆ.ಎ. ೫೪೦ | **ಕವಿಲಿಂಗನ ಪದಗಳು** | ಹಾಡ,ವೃತ್ತ |
|---|---|---|
| ೯.೪" × ೧೦.೩" | ಕವಿಲಿಂಗ | ? |
| ೧-೬೦ ಪುಟ | ೨೦ ಪಂಕ್ತಿ | ೨೭ ಅಕ್ಷರ |

ಆದಿ: ರಾಗ ಮುಖಾರಿ||

ಮನಮೋಹನದವಳಾರು ಪೇಳೊಲಿದು ಅಂಬುಜಾನನೆ ಮಚ್ಚುಗಾತಿಯರ
ಮೊಹರದೊಳೆನಗೆ|| ಪಲ್ಲ||

ರಂಗಮಾಣಿಕಧರೆಗೆ ರಂನದ ಕಂಕಣವಿತ್ತು ಭೃಂಗಕುಂತಳೆಗೆ ಮುಡಿ
ಹೂವನಿತ್ತಾ
ಪೊಂಗಳಸದ ಕುಚೆಗೆ ಪಚ್ಚೆಯು ಪದಕವನಿತ್ತ| ತಿಂಗಳ ಮೊಗಗಳಿಗೆ ತಿಲಕವ
ನಿತ್ತ ರಮಣಿ ||೧||

ಕಳಹಂಸೆಗ....ದುಗೆಯಿತ್ತ ಮನವೊಲಿದುರೆಳೆನಡುವಿನಳಿಗೆ ಕಾಂಚಿದಾಮ
ಿತಿತ್ತಾ|
ಲಲಿತಾಂಗಿಗನುಲೇಪನವ ಕಂಜವದನೆಗೆ ತೊಳಪ ಮುತ್ತಿನ ಕಂಠಮಾಲೆ
ಯಿತ್ತ ರಮಣೀ ||೨||

ಯಿಂಗಿತವರಿಯಲೆಂದೀ ನಾರಿಯರಿಗಿತ್ತ ಮಂಗಳಾಲಂಕಾರ ಸಮವಾಗಿರೆ|
ಅಂಗಜ ಕಲಾನಿಪುಣ ಗಂಡಭೇರುಂಡ ಕವಿಲಿಂಗನತಿಜಾಣ ಕವಿನಾಳ್ವಗೆ
||೩||

ಯಿಾ ಪದಕ್ಕೆ ಸೂತ್ರ ವೃತ್ತ||

ಅಳಿಗುರುಳ್ಗೆ ಸೂತಿಲಕವಿಂದುನಿಭಾನನೆಗಂ ಲತಾಂ ನಿಗಂ
ಮಲಯುಜ ನೂಪುರಂ ಕಳಮರಾಳಸೂಯಾನೆಗೆ ಮುತ್ತಿನೆಚ್ಚರಂ
ನಳಿನನಿಭಾಸ್ಯೆಗಂ ಪದಕ ಮೋಹ ಘನಸ್ತನೆಗಂ ಸುರರತ್ನ ಕಂ
ಗೊಳಿಸುವ ಕಂಕಣಂ ಪ....ಳ ಬಾಯ್ದೆರೆಯುಳ್ಗೆ ನಿತಂಬಸೂತ್ರಮಂ
ನೆಳೆನಡುವೊಪ್ಪುವಳ್ಗೊಲಿದು ನಾಯುನಿತ್ತನದೆಂ ಮನಃಪ್ರಿಯಾ ||೧||

**ಅಂತ್ಯ :** ರಾಗ ಭೈರವಿ|| ಮೋಹಿಯ ಮಾಡುಬೇಕಾದ.... ಕಂಡಾ ಶಿವನೆ|| ಪಲ್ಲ|| ....ತೆಗೆದೂ||
ಸವಿಗುಟುಕನೊಂದನೊಗಡಿಸದೆ ಸವಿದು ವಿಕ್ರಾ ಕಲೆಯು
...............ಬಂದಿಸುವ ಬಗೆವ....ಕಂಡಾ ||೧||
ಜುಂಮುದಟ್ಟುವಾಗಲೊಯನೆ ಕಂಗಳು ಮರಳಿ ದಿಂಮುದಿಗಿವುಬ್ಬಿ ಬಟ್ಟ ಮೊಲೆಯಾ
ಗಂಮನಡರಿ ಪಿಡಿದಂತಿಂತೆಂ........ಮಿಂಚುತಿಹ ಪೊಂಬಣ್ಣ ಣಾ||

**ವಿಷಯ :** ಹಾಡುಗಳು.

**ವಿಶೇಷ :** ಅಸಮಗ್ರ.

—ವೈಸಿಬಿ

## 430

| ಕೆ. ಅ೩೪/ಜ | **ಕಳಿಂಗನೀತಿ** | ಭಾಮಿನೀಷಟ್ಪದಿ |
|---|---|---|
| ೧ಜ" × ೧.೩" | ಕುಮಾರವ್ಯಾಸ | ಸು. ೧೪೩೦ |
| ೬೪-೭೬ ಪತ್ರ | ಜ ಪಂಕ್ತಿ | ೬೬ ಅಕ್ಷರ |

**ಆದಿ :** ಕಳಿಂಗ ನೀತಿ||
ವಾಯುಸುತನುರಿವನೆಯು ಕೌರವ
ರಾಯಕೃತಕವ ಕಳೆದು ಹೊಕ್ಕನು
ತಾಯು ಮೊಟೆವುಟ್ಟಿದರು ಸಹಿತ ಮಹಾ ವನಾಂತ್ತರವಾ|| ಪಲ್ಲ||
ಕೇಳು ಜನಮೇಜಯ ಧರಿತ್ರೀ
ಪಾಲ ಗಜನಗರದಲಿ ಪಾಂಡ್ಡವ
ರಾಳ ಕೌರವರಾಳ ಸೆಣಸಿನ ಕಾಲುಮೆಟ್ಟುಗಳಾ
ಸೂಳೆ ಮಚ್ಚರ ಬಿರುದು
ಜೋಳಿಗಲಹದ ಕದಡು ಜೂಜಿನ
ತೋಳುವಲದೊಳತೋಟಿ ಮಸಗಿತು ದಿವಸ ದಿವಸದಲಿ ||೧||

**ಅಂತ್ಯ :** ದಾಟಿದರು ಗಂಗೆಯನು ರಾಯನ
ಹೂಟದಲಿ ಹಲುಮುರಿದವೆ ನಂ
ಮ್ಮಾಟಕಿದು ಹಿರಿದಲ್ಲ ಹಾಯೆನುತ್ತೈವರಡಿಗಡಿಗೆ
ಕೋಟಲೆಯ ಕೊಲ್ಲಣಿಗೆಯ ಮೆಯಿ
ಸೋಟಕಲಸದೆ ಬಿಸಿಲಲೆಸರು ಮ
ಹಾಟವೀ ಮಧ್ಯವನು ಹೊಕ್ಕರು ನೃಪತಿ ಕೇಳೆಂದ್ದ ||೯೬||
ಕಳಿಂಗನೀತಿ ಸಂಪೂರ್ಣಂ ಮಂಗಳ ಮಹಾಶ್ರೀ.

**ವಿಷಯ :** ದುರ್ಯೋಧನನಿಗೆ ಶಕುನಿಯು ಬೋಧಿಸಿದ ಭೇದ ನೀತಿ.

**ವಿಶೇಷ :** ಸಮಗ್ರ. ಕುಮಾರವ್ಯಾಸ ಭಾರತದಲ್ಲಿ ಬರುವ ಒಂದು ಸಂಧಿ. ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ವಿದುರ ನೀತಿ, ಐರಾವತ, ಸನತ್ಸುಜಾತ ನೀತಿ ಮೊದಲಾದ ಇತರ ಎಂಟು ಗ್ರಂಥಗಳಿವೆ.

—ಕೆಆರ್‌ಎಸ್

## 431

| ಕೆ.ಬಿ. ೭೧೫/೪ | **ಕಳಿಂಗನೀತಿ** | ಯಕ್ಷಗಾನ |
|---|---|---|
| ೧೦.೧" × ೭.೮" ೭ ಪತ್ರ | ? | ೧೯ನೆಯ ಶತಮಾನ |
| ೮" × ೬.೨" ೭ ಪತ್ರ | ೨೦ ಪಂಕ್ತಿ | ೨೨ ಅಕ್ಷರ |

**ಆದಿ :** ಶ್ರೀ ಗಣಾಧಿಪತಯೆ ನಮಃ ಶ್ರೀ ಶಾರದಾಗುರುಭ್ಯೊ ನಮಃ
ಯಕ್ಷಗಾನದಲಿ ಕಳಿಂಗನೀತಿ ಬರಿಯುುವದಕ್ಕೆ ಶುಭಮಸ್ತು॥

ವಾರ್ದಿಖ್ಯ॥ ಯಿ ಪ್ರಾಕಾರದಲ್ಲಿ ಶಾರದಾದೇವಿಯಂ ಭಜಿಸಿ
ಸಕಲ ದೇವತಾ ಪ್ರಾರ್ಥನೆಯಂ ಮಾಡಿ
ಭಾರತಾಮೃತದಲ್ಲಿ ವಿಸ್ತಾರವಾಗಿರುವ ಕಳಿಂಗನೀತಿಯುನ್ನು
ಯಕ್ಷಗಾನದಲ್ಲಿ ಕಾಂಣ್ವಪುರಿ ಶ್ರೀಕೃಷ್ಣನ
ಕಟಾಕ್ಷದಿಂದ ಪೇಳುತಿರ್ದನು॥

**ಅಂತ್ಯ :** ಬಿದ್ದ ದನುಜನಂ ಹೆಣಬಂಡಿಯುಲಿ ಬಂದಿಸಿ ಪುರದ ಬಾಗಿಲಿಗೆ ತಂದು ಶೀಳಿ ವಂದು ಹೋಳ ಪುರಕೆ ಬಿಸುಡಲ್‌ಕೆ ಜನರೆಲ್ಲಾ ಕಂಡು ಹರುಷದಲಿ ಬಂದು ಕೊಂಡಾಡಿದರು ನಿಮ್ಮ ದೆಶೆಯಿಂದ ಧಂನ್ಯರಾದೆವು ನಾವೆಂದು ಸಕಲರು ಪೊಗಳಿದರು ಜಯು ಜಯುವೆಂದು ಶಾಶೆಯುನಿಟ್ಟು ಮಂನಿಸಿ ಪುರಕೆ ಕರ ತಂದು ಮಂನಿಸುತಿರ್ದರು ಶ್ರೀ ಶ್ರೀ.

**ವಿಷಯ :** ಮಹಾಭಾರತದ ಕಳಿಂಗನೀತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಇಂದ್ರಕೀಲ ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 432

| ಕೆ.ಎ. ೪೫೧/೧ | **ಕಾಮಂದಕ ನೀತಿ** | ಚಂಪು |
|---|---|---|
| ೯.೩" × ೧೦.೫" | ಚಿಕ್ಕುಪಾಧ್ಯಾಯ | ೧೬೭೨ |
| ೧-೩೦ ಪುಟ | ೨೦ ಪಂಕ್ತಿ | ೩೦ ಅಕ್ಷರ |

**ಆದಿ :** ಶ್ರೀಮತೆ ರಾಮಾನುಜಾಯ ನಮಃ॥ ಶುಭಮಸ್ತು॥ ಕಾಮಂದಕ ನೀತಿ ಶಾಸ್ತ್ರ। ಕಾಮಂಧಮ ನೀತಿ
ಶ್ರೀಮದಸಾಂಗಲಬ್ಧ ವಿಭವಾಜ ಭವೇಂದಿರೆಯಾಣ್ಮನಾತ್ಮಧಾ
ಮಾನುಳ ಪುಷ್ಪಲೋಲಮುನಿ ಪಾಳಿಸು ಕೌಸ್ತುಭಹರನಚ್ಯುತಂ
ಭೂಮನಿಜಾಂಶುಫುಲ್ಲ ಯದುಸೈನ್ಯಮುಖಾಂಬುಜ ಚಕ್ರಧಾರೆಯು
ದ್ದಾಮ ಪವಿತ್ರ ಸಿಂಧುಪದವಿಗೆ ವಿನೋದಿ ಜಗಕ್ಕೆ ರಾಗಮಂ ॥೧॥

**ಅಂತ್ಯ :** ಯಿವೆಲ್ಲವು ಬಹಿಃಕರಣಂ। ಸಂಕಲ್ಪಾಧ್ಯವಸಾಯಾಖ್ಯಾಮಿತಿ। ಸಮ್ಯಗ್ಭೂತ ಕಲ್ಪನಂ। ಅಧ್ಯವಸಾಯಂ ಪ್ರಯತ್ನವೆ। ತಾಭ್ಯಾಂಸಿದ್ಧಿಃ। ಅವರಿಂ ಸಿದ್ಧಿ। ಅಸ್ಯ ಈ ಉಪಭೋಸ್ತ್ರವಾದ ಆತ್ಮಂಗೆ ಪೇಳಲ್ಪಟ್ಟುದು। ತದ್ಯಥಾ। ಅದೆಂತೆಂದೊಡೆ। ಆತ್ಮನಾಂ ಪ್ರಯ........

**ವಿಷಯ :** ಅರ್ಥಶಾಸ್ತ್ರ.

**ವಿಶೇಷ :** ಇದರೊಂದಿಗೆ ಪಶ್ಚಿಮರಂಗನಾಥ ಶತಕ ಎಂಬ ಗ್ರಂಥವಿದೆ.

— ವೈಸಿಬಿ

## 433

ಕೆ. ೧೭೨೫/೩ **ಕಾಮಚಾಂಡಾಲಿನೀಕಲ್ಪ ಇತ್ಯಾದಿ** ಶ್ಲೋಕ,ಟೀಕು
೧೮.೮″ × ೧.೪″ ? ?
೭೩-೧೧೫ ಪತ್ರ ೯ ಪಂಕ್ತಿ ೬೦ ಅಕ್ಷರ

**ಆದಿ :** ಶ್ರೀ ವೀರಧಿ ನಮಾನಮ್ಯೆ ಖಂಡಿತ ರಷ್ಮರಸಾಯಕಂ
ವಕ್ಷ್ಯೆಹಂ ಕಾಮ ಚಾಂಡಾಲಿನೀ ಕಲ್ಪಮಿಷ್ಟಫಲಪ್ರದಂ ॥೧॥
ಕಾಡಬಸಲೆಯ ಸಮೂಲನಂನ್ನು ಅರೆದು ಹರವಿಯವಳಗಲಾ ಘೋರಗೂ ಪೂಸಿಅಯೊಳು ಯೇಳು ಯಿಟ್ಟಿಗೆಯಗಿಿಸಿದಡಿಯೊಳಾ ಹಃಯ್ಯೊ ಹರವಿ ನಡೆಯದು॥ (೭೪ ನೆಯ ಪತ್ರದಿಂದ)

**ಅಂತ್ಯ :** ಜೇಳಿನ ವಿಷಕ್ಕೆ ಅಲ್ಲಿ ಪರಸ। ಶುಕ್ಲಮೇಹಕ್ಕೆ ಲೊಕ್ಕಿರಸ। ಸಿಕತಾ ಮೇಹಕ್ಕೆ ಕುಡಿಹಾಲು। ಪೈತ್ಯಗಂಡಿಗೆನೆ ನೆಲ್ಲಿಕಾಯ ಲೇಪ। ಹೊಟ್ಟೆಬೇನೆಗೆ ಮೊಸರು ॥ಶ್ರೀ॥

**ವಿಷಯ :** ವೈದ್ಯ; ತಿಲಕ ವಶ್ಯ ವಿವರ.

**ವಿಶೇಷ :** ಕೆಲವು ಗರಿಗಳ ಅಂಚುಗಳು ಮುರಿದಿವೆ. ಇದೇ ಕಟ್ಟಿನಲ್ಲಿ ವೈದ್ಯತಂತ್ರ(ಸಂ), ಮೂಲಿಕಾಕಲ್ಪ, ವೈದ್ಯ ಯಂತ್ರಗಳು ಎಂಬ ಗ್ರಂಥಗಳಿವೆ.

—ಕೆಆರ್‌ಎಸ್

## 434

ಕೆ.ಎ. ೫೪೩/೯ **ಕಾಮದೇವನ ತೊರವಿ** ಹಾಡು

೧೮.೪" × ೯" ? ?

೬೪-೮೫ ಪುಟ ೨೦ ಪಂಕ್ತಿ ೨೬ ಅಕ್ಷರ

ಆದಿ : ಶ್ರೀಮದುಜ್ವಲಬೋಧದಾ
ನೇಮಿಗಾನತನಾಗಿಯೆ
ಪ್ರೇಮದಿಂದಭಿವರ್ಣಿಪೆಂ
ಕಾಮದೇವನ ತೊರವಿಯಾ ॥೧॥
ಚಕ್ರಿತಾಂಕರ ಚಕ್ರದಿಂ ಪರ
ಚಕ್ರಮಂ ಬೆಸಗೆಯಿಸಿ ಭೂ
ಚಕ್ರಮಂ ಪ್ರತಿಪಾಲಿಸಿ
ಚಕ್ರವಿಕ್ರಮನಪ್ಪಿನಂ ॥೨॥

**ಅಂತ್ಯ :** ಉತ್ತಮಮಪ್ಪ ಬಸ....
ನಿತಿತಾಜಿನದಂತೆ ಕಾದು ಮಡಗದೆ ದಾನಪೂ....
ಯೊಳ್ಕಳೆ ಪೆಚ್ಚುಗುಂ ಸುರಭಿಗಳ್ಕಱತಗಾವಗ....
ಧರೆಯೊಳೀ ಕೃತಿಬಂಧಮಂ ಬರೆದು ಬಾಜಿಸಿ....
ನುಜರೆಯ್ದುಗೆ ಮೋಕ್ಷಮಂ ॥೪೧೧॥
ಕಾಮದೇವ
ಜೈನಕದಂಬ ಅಸಮಗ್ರಂ॥

**ವಿಷಯ :** ಜೈನಧರ್ಮದ ಕಾಮನ ಕಥೆ.

**ವಿಶೇಷ :** ಸಮಗ್ರ. ತ್ರುಟಿತ. ಈ ಪುಸ್ತಕದಲ್ಲಿ ಜಿನಾಕ್ಷರ ಮಾಲೆ ಮೊದಲಾದ ಇತರ ೮ ಕೃತಿಗಳಿವೆ.

—ಜಿಜಿಎಂ

## 435

ಕೆ. ೭೨೩/೬ **ಕಾಮನಬಿಲ್ಲಿನ ಲಕ್ಷಣ** ಗದ್ಯ

೬.೫" × ೮.೫" ? ?

೭೭-೮೦ ಪುಟ ೧೨ ಪಂಕ್ತಿ ೨೦ ಅಕ್ಷರ

ಆದಿ : ಚೈತ್ರ–ವೈಶಾಖ–ಜೇಷ್ಠ–ಯಿಾ ಮೂರು ಮಾಸದೊಳು। ಕರ್ತಿಕಾ–ರೋಹಿಣಿ-ಮೃಗಶಿರ-ಆರಿದ್ರ-ಪುನರ್ವಸು– ಯಿಾ ನಕ್ಷತ್ರ ಪೈಕಿ ಪಡವಲು ಕಾಮನಬಿಲ್ಲು ಮೂಡಿದರೆ। ಮಳೆಖಡವು। ತೃಣವಂ ಜೋಕೆ ಮಾಡವದು।

ಆಷಾಡ-ಶ್ರಾವಣ-ಭಾದ್ರಪದ ಯಿವು ಮೂರು ಮಾಸದೊಳು-ಮಘೆ-ಹುಬ್ಬೆ-ಉತ್ರೆ-ಹಸ್ತಾ-ಚಿತ್ತೆ-ಯಿಾ ಯೇಳು ತಾರೆ ಪಡುವಲು ಕಾಮನ ಬಿಲ್ಲು ಮೂಡಿದರೆ। ಮಳೆಯಾದೀತು। ಮಳೆ ಬೆಳೆಯಕ್ಕು ಭೂಮಿಗೆ ಸುಖವಕ್ಕು ॥೨॥

**ಅಂತ್ಯ:** ಜೇಷ್ಟ ಮೊದಲಾ ಮೂರು ಮಾಸದೊಳಗೆ ಅಭಿಜಿತು ಶ್ರವಣ ಮೊದಲಾಗಿ ೫ ನಕ್ಷತ್ರದೊಳಗೆ ಪಡಪಲು ಕಾಮನ ಬಿಲ್ಲು ಮೂಡಿದರೆ ಮಳೆಯಿಲ್ಲಾ, ಅರಸರು ಸಾಯ್ವುರು। ಮಂತ್ರಿಗಳು ಕೆಡುವರು ಪ್ರಜೆಗಳು ಲಯವಾಗುವರು ॥೮॥ ಶ್ರೀ XXX। ಯಿಾಗ ೩ ತಿಂಗಳು ಮಳೆ ಬಂದರೆ ಮುಂದೆ ೩ ತಿಂಗಳು ಮಳೆಯಿಲ್ಲವು। ಯಿಂತ್ತಿ ಸಮಾಪ್ತ ಫಲವು॥ ಮಂಗಳ ಮಹಾಶ್ರೀ॥

**ವಿಷಯ:** ಕಾಮನಬಿಲ್ಲು ಮೂಡಿದ ಫಲಾಫಲಗಳ ವಿಚಾರ.

**ವಿಶೇಷ:** ಸಮಗ್ರ ಕೃತಿ. ಸುದೃಢ ಪ್ರತಿ. ಇದರೊಂದಿಗೆ ನಕ್ಷತ್ರ ಚೂಡಾಮಣಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 436

| ಕೆ. ೮೧೩ | **ಕಾಮಶಾಸ್ತ್ರ** | ಭಾಮಿನೀಷಟ್ಪದಿ |
|---|---|---|
| ೮.೨″ × ೧.೭″ | ಮಲ್ಲರಸ | ? |
| ೧-೧೧೪ ಪತ್ರ | ■ ಪಂಕ್ತಿ | ೩೮ ಅಕ್ಷರ |

**ಆದಿ:** ಶ್ರೀಗುರು ಬಸವಲಿಂಗಾಯ ನಮಃ॥ ಶ್ರೀಯಾನ್ಗೊಡಮಠದ ಚರಂತಿ ದೇವರ ಪುಸ್ತಕಂ! ಕಾಮಶಾಸ್ತ್ರ ಬರವುದಕ್ಕೆ ಶುಭಮಸ್ತು। ನಿರ್ವಿಘ್ನಮಸ್ತು XX ಶ್ರೀ ಸಿದ್ಧಲಿಂಗಾಯ ನಮಃ॥ ಕಾಮಶಾಸ್ತ್ರ॥ ಶ್ರೀಶಿಪಲ್ಲಿ।

ಸಕಲ ಪವುರಾಣವನು ಕೇಳ್ದರೆ
ವಿಕಳಗೊಂಬುದು ಮನವು ಜಗದೊಳು
ಸುಖದಸಾಗರ ಯುಕುತಿಯಾಗರ ಕಾಮಶಾಸ್ತ್ರವಿದು॥

ಪದನು॥ ನೆಲಣ ಮೇಲಣ ಗಿರಿಗೆ ವೆಗ್ಗಳ
ವೆನಿಪ ಹೇಮಾಚಲದ ಘಟದ
ಲಲಿತ ಚಂದನ ಗಂಧಿ ಲಲನಾಕುಲಸಿರೋಮಣಿಯು
ಚಲುವಿಕೆಯ ಚೈತನ್ಯಚಂದ್ರಿಕೆ
ಯಳಿನಗೆಯ ಸಿರಿಮೊಗದ ಶಂಕರ
ಗೊಲಿದದೇವನೆ ಸಲಹು ಶ್ರೀಗಿರಿ ಮಲ್ಲಿಕಾರ್ಜುನನೆ ॥೧॥

ಅಂತ್ಯ : ನಿತ್ಯ ಕುಡಿವುದು ಮೇಲೆ ರಾತ್ರಿಗೆ
ಉತ್ತುಮದ ಪಾಲ್ಗ್ಗ್ರುತವು ಶರ್ಕರೆ
ಮತ್ತೆ ಬಿಡು ಪುಳಿತೆ ಸಾಸುವೆ ಲವಣವೆಂಬದನೂ
ಅರ್ಥಿಕಾಮನ ಬಾಣವಿದು ಪುರು
ಷಾರ್ಥ ಲೋಕಕೆಯೆಂದು ಮುನಿ
ಪೃಥ್ವಿಪಾಲಗೆ ವರದ ತಂತ್ರದ ರಾಜಯೋಗವನು ||೧೦೫||
ಕಾಮಶಾಸ್ತ್ರ ಸಂಪೂರ್ನ|| ಮಂಗಳ ಮಹಾ ಶ್ರೀ.
ಶ್ರೀಯಾಗುಂಟನೂರ ಹೀರೆಮಠಕ್ಕೆ ಕಾರಣಕರ್ತರಾದ ಮಠಾಧ್ಯಕ್ಷ ಚರಂತಿ ದೇವರ ಕರಕಮಲಸಂಜಾತ ಬಸವಪ್ಪೈಯನ ವರಕುಮಾರ ಸಿದ್ಧಲಿಂಗಪ್ಪ ನವರು ಲಿಖಿಸಿದ ಕಾಮಶಾಸ್ತ್ರ ಸಂಗ್ರಹ ದಶಮೋಧ್ಯಾಯು ಸಮಪ್ತಃ

ವಿಷಯ : ಕಾಮಶಾಸ್ತ್ರ.

ವಿಶೇಷ : ಸಮಗ್ರ ಕೃತಿ. ಬರಹವು ಚೆನ್ನಾಗಿದೆ. ೨ನೆಯ ಪತ್ರದಲ್ಲಿ ಒಂದು ಪಂಕ್ತಿ ಮಾತ್ರ ಬರೆದಿದ್ದು ಉಳಿದ ಭಾಗ ಖಾಲಿಯಾಗಿದ್ದರೂ ಗ್ರಂಥವು ೩ ನೆಯ ಪತ್ರದಿಂದ ಮುಂದುವರೆದಿದೆ. ಖಾಲಿ ಬಿಟ್ಟಿರುವ ಪತ್ರಕ್ಕೆ 'ತೆಳ್ಳಪಟ' ಎಂದು ಬರೆದಿದೆ. ಅಂತ್ಯದಲ್ಲಿ ಪ್ರತಿಮಾಡಿದ ಮಾಡಿಸಿದವರ ವಿವರವಿದೆ. ಈ ಪ್ರತಿ ಮಾಡಿಸಿದ ಕಾಲ ಕೊನೆಯಲ್ಲಿ ಹೀಗೆ ತಿಳಿಸಿದೆ "ಶ್ರೀಮನ್ನೃಪ ಶಾಲಿವಾಹ ಶಖ ೧೭೬೪ನೆ ಪ್ರವರ್ತಿಪ ಶುಭಕೃತ ಸಂ| ಭಾದ್ರಪದಲ್ಲಿ ೪ ಸ್ಥಿರವಾರ ಸೂರ್ಯೋದಯವಾದ ಘಟಿಕಾಃ| ೬ ಲ್ಲು ಸಂಪೂರ್ನ".

—ಕೆ ಆರ್ ಎಸ್

## 437

| ಕೆ. ೧೭೬೧/೪ | ಕಾಲಚಕ್ರ | ವಚನ |
|---|---|---|
| ೧೦.೫" × ೧.೧" | ಚೆನ್ನಬಸವಣ್ಣ (?) | ಸು. ೧೧೬೦ |
| ೨೨-೨೩ ಪತ್ರ | ೪ ಪಂಕ್ತಿ | ೪೪ ಅಕ್ಷರ |

ಆದಿ : ಶುಭಮಸ್ತು ಕಾಲಚಕ್ರ| ಏಕೈಕವಸ್ತು ವಸ್ತುವಾ ಬಲ್ಲುದ ಲೋಕಾದಿಗಳರಿಯರಾಗಿ ಸ್ಥೂಲಸೂಕ್ಷ್ಮಮಾದ ದೇವರೂ ತ್ರಿಪುರಸಂಹಾರದಲ್ಲಿ ಆಕೃತಿ ತ್ತಾನಲೆಂಭ್ರುಮೆಯಲ್ಲಿ ಪೂತ ಪ್ರಾಣಗಳೆ ಬಲರಾಯಾ ಆತನ ಘವವನಾರು ಅರಿಯರ್‍ರೈ ಅಂತು ಚಿಟುಕು

ಅಂತ್ಯ : ಯಿಂಂಸು ಹದಿನೆಂಟು ಯುಗಂಗಳಾಪವುವೆಂದಡೆ ಅನಂತಾ ಅಬ್ಬುತಾ ತಾಮುಂದ ತಾರಜ ಕಂಡಜಾ ಬಿಂಗಜ ಬಿಯನಯುಕ್ತ ಅವ್ಯಾಯುಕ್ತ ಅಮುಂದಯುಕ್ತ ಮಣಿರಣ ಮಾಂನ್ಯಾರಣ ವಿಸ್ವನಸು ವಿಸ್ವರಣ ಅಲಂ

ಕ್ರುತಾ ಕೃತಯುಗಾ ತ್ರೇತಾಯುಗಾ ದ್ವಾಪರಯುಗಾ ಕಲಿಯುಗಾ ಇಂತಿ ಹದಿನೆಂಟು ಯುಗಂಗಳು ಕಾಲಚಕ್ರಂಗಳಾಗಿ ತಿರುಗುತಿಹವೂ ಯಿಂದ ದೇವರು ಕಟೆದ ಕಟ್ಲೆಳೆ ಅಯುಗಂಗಳ ಪೆಸರೂ

**ವಿಷಯ :** ವೀರಶೈವ ಸಿದ್ಧಾಂತದ ಪ್ರಕಾರ ಕಾಲದ ವಿವರ.

**ವಿಶೇಷ :** ಅಸಮಗ್ರ. ಇದರ ಜೊತೆಗೆ ಗಂಗೆಗೌರಿ ಸಂವಾದ, ಷಡುಚಕ್ರ, ಭೂಚಕ್ರ ಎನ್ನುವ ೩ ಕೃತಿಗಳಿವೆ.

—ಜಿಜಿಎಂ

438

ಕೆ. ೧೭೬೩/೮ **ಕಾಲಚಕ್ರ** ವಚನ

೯.೫″ × ೧.೪″ ಬಸವಣ್ಣ ಸು. ೧೧೬೦

೧೧ ಪತ್ರ ೬ ಪಂಕ್ತಿ ೩೨ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇಂನ್ನಮಃ|| ಶ್ರೀಗುರು ಬಸವಲಿಂಗ್ಗಾಯ ನಮಃ|| ಕಾಲಚಿಕ್ರಾ||

ಏಕೈಕ ವಸ್ತುವ ತಂದ್ದೀಗಯಿದಿರಾಗಿ ಸೂಲಸೂಕ್ಷ್ಮದೇವನು ತ್ರಿಪುರ ಸಂಹ್ವಾರದಲ್ಲಿ ಆತಾಯಿಯಾತನೆಂಬ್ಬ ಭ್ರುವೆಯಲ್ಲಿ ಭೂತಪ್ರಾಣಿಗಳೇನು ಬಲ್ಲರೈಯ್ಯ ಆತನ ಘನವನಾರು ಅರಿಯರೈಯ್ಯ ಅಂತ್ತೂ ಚಿಟುಕು ೩೬೦ ಕ್ಕಾಗಲೂ ವಂದ್ದು ವಿಘಳಿಗೆಯುಂಟಾಗಲೂ ವಂದುಜಾವಾ ಅಂತಾಜಾವ ನಾಲ್ಕಾಗಲೂ ವಂದುದಿವಾ ರಾತ್ರಿ ಅಂತಾ ದಿವಾ ರಾತ್ರೆ ೩೦ ತ್ತಾಗಲೂ ವಂದು ಮಾಸ ಅಂತಾ ಮಾಸ ೧೨ ಆಗಲೂ ವಂದು ವರುಷ ಅಂತಾ ವರುಷ ೬೦ತ್ತಾಗಲೂ ವಂದು ಸಂವತ್ಸರ ಅಂತ್ತಾಸಂವತ್ಸರಂಗಳೂ ಮರಳಿ ಯಿಂತ್ತ ಪರಿಯಲ್ಲಿ ಕಾಲಚಿಕ್ರಗಳಾಗಿ ತಿರುಗುತ್ತಿರ್ದ್ಧವೂ

**ಅಂತ್ಯ :** ಸದ್ಯೋಜಾತ ಮಹಾದೇವಾ ಅಘೋರ ತತ್ಪುರುಷ ಯಿಶಾಂನ್ಯನೆಂಬ್ಬ ಪಂಚ್ಚ ವಸ್ತ್ರ ಆದಿಲಿಂಗ ಅನಾದಿಯ ಶರಣ ಯಿವರೆಲ್ಲಾ ಬಲ್ಲರೂ ಸಾಕ್ಷಿ ಯಾಗಿ ಕೂಡಲ ಸಂಗಮದೇವೈಯ್ಯ ವಿಶ್ವಖರ್ಮಣ ಜಗದ್ಗುರು ಕಾಲ ಚಿಕ್ರ ಸಂಪೂರ್ನ ಮಂಗ್ಗಳ ಮಹಾ ಶ್ರೀ ಶ್ರೀ ಶ್ರೀ.

**ವಿಷಯ :** ವೀರಶೈವದಂತೆ ಕಾಲದ ವಿವರ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದಲ್ಲದೆ ಕಾಲಚಕ್ರ, ವಿಶ್ವಕರ್ಮ ಪುರಾಣ ವ್ಯಾಖ್ಯಾನ ಮುಂತಾದ ೮ ಕೃತಿಗಳಿವೆ.

—ಜಿಜಿಎಂ

## 439

ಕೆ. ೧೦೯೩/೫ **ಕಾಲಚಕ್ರ** ವಚನ

೧೦.೪" × ೧.೯" ಪ್ರಭುದೇವರು ಸು ೧೧೬೦

೨೪-೨೬ ಪತ್ರ ೧೩ ಪಂಕ್ತಿ ೫೨ ಅಕ್ಷರ

**ಆದಿ :** ಪ್ರಭುದೇವರು ನಿರೂಪಿಸಿದ ಕಾಲಚಕ್ರದ ವಚನ||
ಯೇಕ್ಕೈಕ್ಯವಾದಂಥಾ ವಸ್ತುವ ಲೋಕಲೋಕಾದಿಗರಿಯಃರಾಗಿ ಸ್ತುಲ ಸೂಕ್ಷ್ಮವು ದೇವರು ತ್ರಿಪುರವಸಾಧ್ಯವ ಮಾಡುವಲ್ಲಿ ಆತನೀತನೆಂಬ ಬ್ರಮೆ ಯಲ್ಲಿ| ಭೂತಪ್ರಾಣಿಗಳೆಲ್ಲ ಯಾನ ಬಲ್ಲರೊ| ಆತನ ಘನವನಾರು ಅರಿ ಯರು| ಅದಕಿಂನ್ನು ಚಿಟುಕು| ಮುಂನ್ನೂರ ಅರವತ್ತು ಕೂಡಲು ವೊಂದು ಘಳಿಗೆ| ಅಂಥ ಘಳಿಗೆ ಹದಿನಾರು ಕೂಡಲು ವೊಂದು ದೊಡ್ಡ ಗಳಿಗೆ

**ಅಂತ್ಯ :** ಅಂತ್ತ ಕಾಲಂಗಳು ಹೋದವ್ವೈಯ್ಯ| ಆಂತ ದೇವರುಗಳು ಹೋದರ್‍ವೈಯ್ಯ| ಅಂತಿಂತ್ತೆನಲಿಲ್ಲಾ| ಗೊಹೇಶ್ವರನೆಂಬ ಲಿಂಗವು| ನಿರ್ಮಯು ನಿರ್ಮಳ ನಿರಾಲಂಬನೆಂಬುದನಾರು ಅರಿಯರಲ್ಲಾ|| ಕಾಲಚಕ್ರ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ವೀರಶೈವದಂತೆ ಕಾಲದ ವಿವರ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಶಬ್ದಮಣಿದರ್ಪಣ, ಕರ್ಣಾಟಕ ಶಬ್ದಮಂಜರಿ ಇತ್ಯಾದಿ ಒಟ್ಟು ೧೬ ಗ್ರಂಥಗಳಿವೆ.

—ಕೆಆರ್‌ಎಸ್

## 440

ಕೆ. ೧೧೬೦/೨ **ಕಾಲಚಕ್ರ** ಗದ್ಯ

೧೫.೫" × ೧.೨" ? ?

೧-೨ ಪತ್ರ ೭ ಪಂಕ್ತಿ ೬೦ ಅಕ್ಷರ

**ಆದಿ :** ಶ್ರೀಗುರುವೇ ನಮಃ| ಕಾಲಚಕ್ರ|
ಯೇಕ್ಕೈಕವಾದ ವಸ್ತುವಾಲೂ ಕಾಡಿಲು ಕವರಿಯದಾಗಿ ಸ್ಥೂಲಸೂಕ್ಷ್ಮ ದೇವರನೂ ತ್ರಿಪುರವ ಸಾಧ್ಯವ ಮಾಡುವಲ್ಲಿ ಆತ ಯಿಾತನೆಂಬ ಕರ್ಮ ಭ್ರಮೆಯಲ್ಲಿ ಭೂತಪ್ರಾಣಿಗಳೆತ್ತ ಬಲ್ಲರ್‍ವೈಯ| ಆತನ ಘನವನಾರು ಅರಿತ ದಿಲ್ಲ| ಚಿಟುಕು ಮುನ್ನೂರು ಅರುವತ್ತ ಕೂಡಲೊಂದು ಘಳಿಗೆ

**ಅಂತ್ಯ :** ಅಂತ ರುದ್ರನು ಮುನ್ನೂರು ಅರುವತ್ತು ದಿನ ತುಂಬಿದರೆ ವಂದು ವರುಷ| ಅಂತ ವರುಷ ಅರುವತ್ತು ತುಂಬಿದರೆ ವಂದು ಸಂವತ್ಸರ| ಅಂತಾ ಸಹಸ್ರ

ಕೊಟ್ಟ ಸಂವತ್ಸರ ತಿರುಗಿದರೆ ನಿಮಿಷಮಾತ್ರವು ಅಂಥಾ ದಿನಂಗಳೆಲ್ಲ ಹೋದವೈಯ ಅಂಥಾ ದೇವರುಗಳೆಲ್ಲಾ ಹೋದವೈಯ ಅಂತಿಂತು ಯನ ಲಿಲ್ಲವೈಯ ಗೊಹೇಶ್ವರ ಲಿಂಗವು ಸಿರಾಳ ನಿರ್ಮಯ ಯಂಬುದನು ಆರು ಅರಿಯರೈಯ ಶರಣಾರ್ಥಿ ಕಾಲಚಕ್ರ ಸಂಪೂರ್ನ ಮಂಗಳ ಮಹಾಶ್ರೀ.

ವಿಷಯ : ವೀರಶೈವಧರ್ಮದ ರೀತಿಯಲ್ಲಿ ಕಾಲಗತಿಯ ವಿವರ.

ವಿಶೇಷ : ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ವೀರೇಶ್ವರ ಚರಿತೆ ವೊದಲಾದ ಕನ್ನಡ ಕೃತಿಗಳೂ ಅಪರಾಧಸ್ತೋತ್ರ ವೊದಲಾದ ಸಂಸ್ಕೃತ ಗ್ರಂಥಗಳೂ ಇವೆ.

—ವೈಸಿಬಿ

## 441

| ಕೆ. ೧೭೪೪/೩ | **ಕಾಲಚಕ್ರದ ವಚನ** | ವಚನ |
|---|---|---|
| ೧೭.೩″ × ೨.೨″ | ಬಸವಣ್ಣ | ಸು. ೧೧೬೦ |
| ೫ ಪತ್ರ | ೧೦ ಪಂಕ್ತಿ | ೪೦ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ॥ ಕಾಲಚಕ್ರದ ವಚನ
ಸ್ವಸ್ತಿ ಸಮಸ್ತ ಕಾಲಾಕಾಲಂಗಳ ಕಟಳಿಯ ವಿಸ್ತರಿಸಿ ಪೇಳುವೆ ಅದೆಂತೆಂದಡೆ ಚಿಟುಕು ಮುಂನುರಅಱುವೊತ್ತು ಕೂಡಲು ವೊಂದು ಗಳಿಗೆ. ಆ ಗಳಿಗೆ ಯೆಂಟ ಕೂಡಲು ಒಂದು ಜಾವ ಜಾವಯೆಂಟು ಕೂಡಲು ವೊಂದು ದಿನ ಆ ದಿನ ಮೂವತ್ತು ವೊಂದುಮಾಸ ಅಂತ ಮಾಸ ಹಂನೆರಡು ಕೂಡಲು ವೊಂದು ವರುಶ. ವೊರುಶ ಅರುವತ್ತು ಕೂಡಲು ವೊಂದು ಸಂವತ್ಸರ

ಅಂತ್ಯ : ಸಂಗಮನಾತ ಕೂಡಲಸಂಗನು ಸಂಗಮನಾತನೆಂಬ ಲಿಂಗವನಾರಾದಿಸಿ ಅಂಗಜಂಗಮಪ್ರಸಾದ ಸಾಧ್ಯವೈಯ್ಯ ಕೂಡಲಸಂಗಮದೇವಯ್ಯ॥ ಅಂದು ಕಲ್ಯಾಣವಾಯಿತ್ತು॥ಪ್ರಭುದೇವರು ಮುಖ್ಯರಾದರು ಯೇಳೂನೂರೆಪ್ಪತ್ತು ಅಮರಗಣಂಗಳಿಗೆ ಬಸವೇಸ್ವರ ದೇವರು ನಿರೂಪಿಸಿದ ಯಿಪತೊಂದು ಭಾವ ಯುಗದ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತದಂತೆ ಕಾಲಗಣನೆ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಭೈರವೇಶ್ವರ ಕಾವ್ಯಸೂತ್ರ ರತ್ನಾಕರ, ಛಂದಸ್ಸು ಎನ್ನುವ ಕೃತಿಗಳಿವೆ.

—ಜಿಜಿಎಂ

## 442

| ಕೆ. ೧೮೩೭ | **ಕಾಲಜ್ಞಾನ** | ದ್ವಿಪದಿ,ಷಟ್ಪದಿ |
|---|---|---|
| ೭.೩″ × ೧.೫″ | ಚೆನ್ನಬಸವಣ್ಣ | ಸು. ೧೧೬೦ |
| ೧-೨೨ ಪತ್ರ | ೭ ಪಂಕ್ತಿ | ೩೨ ಅಕ್ಷರ |

ಆದಿ : ಶ್ರೀ ಗಣಾಧಿಪಥಾಯೇ ನಮಃ|| ಶ್ರೀ ಶಾರದಾ ಗುರುಭ್ಯೋ ನಮಃ ಶ್ರೀ ಗುರುಬಸವಲಿಂಗಾಯೇ ನಮಃ|| ಚಂನಬಸವದೇವರೂ ನಿರೂಪಿಸಿದ ಕಾಲ ಗ್ಞಾನ ಬರೆಯುಡಕೇ ಶುಭಾವುಸ್ತೂ|| ಆಯುರಾರೋಘ್ಯ ಐಶ್ವರ್ಯವುಸ್ತು|| ರಾಗಾ|| ಜಂಪೇ

ಸಿದ್ಧರಾವೈಯ್ಯಗಳೆ ರುದ್ರಮುನಿಸ್ವಾಮಿಗಳೆ
ಯಿದ್ದ ಶರಣರು ಕೇಳಿ ಸಿದ್ಧಾಂತ್ಥವರವಾ ||೧||

ಕಖಯೊಳಗೆ ನೆಡನಂತ್ತ ಕಾಲಸೂಚನೆ ಕುರ್ರುಹಾ
ನೆಲೆದೋರಿ ಪೋಗುವೆವು ಮಲಹರನ ದಯದಿ ||೨||

ಅಂತ್ಯ : ತುರುಕರಾಳಿಕೆ ತೀರೊ ಕಾಲಕೆ
ಹರಿಯವಂಶದ ಅರಸು ಬರುವನು
ಮೊರವ ಮೇಘ್ರನ ಮುರ್‍ರಿದು ಮರ್‍ತ್ಯಕೆ ದುರ್ಘ ಬಂದಂತೆ ||೨೪೯||

ಅಂಣಕಾನರು ನಡವ ಕಾಲಕೆ
ಸಂಣನಾಮದ ಅರಸು ಬರುವನು
ಯಂಣೆ ಬತ್ತಿಗೆ ಹಾರಮಾಡಿ ಸಂಣಿಸುವಲೋಕಾ ||೨೫೦||

ಮುಂಡೆಗಾಣಿಕೆ ಸುಂಕ್ಕಯೆತ್ತುವ
ರಂಡೆ ಮುಂಡೆರಿಗೆಲ್ಲ ತೆರ್‍ರಿಗೆ ಮಾಡುವ
ದಂಡದೋಷದಿ........

ವಿಷಯ : ಭವಿಷ್ಯ ಸೂಚನೆ.

ವಿಶೇಷ : ಅಸಮಗ್ರ. ಪ್ರತಿ ಜೆನ್ನಾಗಿದೆ. ೧೩ ರಿಂದ ೧೬ ಪತ್ರಗಳಿಲ್ಲ. ಷಟ್ಪದಿಯಲ್ಲಿ ಅರ್ಧ ಕೃತಿರಚನೆ ನಡೆದಿದೆ.

—ಜಿಜಿಎಂ

## 443

ಕೆ.ಬಿ. ೬೨೭ | ಕಾಲಜ್ಞಾನ | ಗದ್ಯ
೮" × ೬" | ಅಖಂಡಮುನಿ | ?
೧೦ ಪುಟ | ೧೪ ಪಂಕ್ತಿ | ೨೫ ಅಕ್ಷರ

ಆದಿ : ಶ್ರೀಗುರು ಪಾಹಿ.
ಅಖಂಡಮುನಿಯು ನಿರ್ಮಾಣ ಮಾಡಿದ ಕಾಲಗ್ನಾನವು||
ಆ ದ್ವಾಪಾರಂಯುಗ ಪ್ರಮಾಣವು ಯಂಟು ಲಕ್ಷದ ೬೪೦೦೦ ಸಾವಿರ| ಕಲಿಯುಗ ಪ್ರಮಾಣ ನಾಲ್ಕುಲಕ್ಷದ ೩೨೦೦೦ ಸಾವಿರ ಅದರ ಪೈಕಿ ಮುಪ್ಪತ್ತಾರು ವರ್ಷ ಪಾಂಡವರಾಳಿದರು| ೧೩೪ ನಾಗಾರ್ಜುನರು ಆಳಿ

ದರು। ೯೬೦ ವರುಷಾ ಸತ್ತೇಂದ್ರ ಭೂಪಾಲ ಆಳಿದನು। ೧೨೦೦ ವರುಷಾ ಬಾದಶಹನು ಆಳಿದನು। ೭೦೦ ವರುಷ ಬೌದ್ಧಮತದವರು ಆಳಿದರು। ವಿಕ್ರಮರಾಜನ ಶಕೆ ೩೭೩೦ ವರುಷ ವಿಕಾರಿನಾಮ ಸಂ॥ರಕ್ಕೆ ೫೦೦೦। ವರುಷ ವಿಕಾರಿನಾಮ ಸಂ॥ರದ ೫೦೧೦ ವರುಷ ಕರ್ಮಕಲಿಯೆಂಬ ಗತ ಕಲಿ ಧರ್ಮಕಲಿ ಆಳಿಕೆ। ಯಿಾ ಪ್ರಕಾರ ೪೩೨೦೦೦ ವರುಷದವರಿಗು ವ್ಯಾಖ್ಯಪ್ರಕಾರ ಆಳುತ್ತ ಹೋಗುವರು। ವಿಕಾರಿ ಸಂ॥ರದ ಕಾರ್ತಿಕ ಮಾಸ ದಲ್ಲಿ ಸಪ್ತ ಗ್ರಹಂಗಳು ಒಂದೇ ರಾಶಿಯಲ್ಲಿ ಕೂಡುವವು। ಯಿದರ ಫಲಾ ಮುಂದೆ। ೧೨। ವರುಷಾ ಕ್ಷಾಮಯಿರುವದು। ಉಕ್ಕಸಾನ ಕಾಲವು। ಹಾಂಗೆ ದುಃಖವು ಯಿದು ಅಲ್ಲದೆ।

**ಅಂತ್ಯ :** ೫೦೧೦ ವರುಷ ಪರಿಯಾಂತರ ನಡಿಯುವದು। ಮತಖಂಡನ ಮಾಡಿ ನವ ಖಾಂಡ ಪೃಥ್ವಿಯಲ್ಲಿ ಯಲ್ಲಿ ನೋಡಿದರಲ್ಲಿ। ಲಿಂಗಾಯತ ಮತವಲ್ಲದೆ ಯರಡನೆ ಮತವಿಲ್ಲದ ಹಾಗೆ। ಖಂಡನೆ ಮಾಡುವರು। ಶಿವರಾಜ್ಯ ಪಟ್ಟಣ ದಲ್ಲಿ ಸಂಪತ್ತು ಹೇಳಲಿಕ್ಕೆ ಅಸದಳವು। ಶಿವರಾಜ್ಯ ಪಟ್ಟಣ ಸುತ್ತ ಹಂನ್ನೆ ರಡು ಹರದಾರಿ ಆಗುವದು। ಯಿತಿ ಅಖಂಡ ಮುನಿನಿರ್ಮಿತಮಾದ ಕಾಲ ಗ್ನಾನ ಸಮಾಪ್ತ ಮಂಗಳಮಸ್ತು ಭದ್ರಂ ಭೂಯಾತು॥ ಓಂ.

**ವಿಷಯ :** ಶಾಲಿವಾಹನ ಶಕ ೧೪೮೮ ರಿಂದ ಶಕ ೧೮೮೧ ವರ್ಷದವರೆಗಿನ ಭವಿಷ್ಯ.

**ವಿಶೇಷ :** ಸಮಗ್ರ. ವಿರಳಾಕ್ಷರ. ಆದರೂ ಅಕ್ಷರಗಳು ಸ್ಪುಟವಾಗಿಲ್ಲ.

—ಎಸ್ ಎನ್ ಕೆ

## 444

| ಕೆ.ಬಿ. ೬೯೯/೩೩ | **ಕಾಲಜ್ಞಾನ** | ವಚನ |
|---|---|---|
| ೬" × ೮.೫" | ಚೆನ್ನಬಸವಣ್ಣ | ಸು. ೧೧೬೦ |
| ೩೮-೩೯ ಪತ್ರ | ೨೫ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಉಳವಿ ಚಂನಬಸವೇಶ್ವರನ॥ ಕಾಲ ಗ್ನಾನ॥ ವಚನ॥
ಪ್ರತಿ ಸೂರ್ಯ ಮೂಡಿತೆಂದು ಆಕಾಶದ
ಯಿಪರಿತ್ತ ಸುದ್ಧಿ ವಾದವಲ್ಲೊ
ಪ್ರತುಮ ಬಾಯಿದೆರದುವೆಂದು
ಕಲ್ಲ್ಯಣದ ಪ್ರತು....ಗಳಿದ್ದು ಕುಣಿದಲು ॥ಪಲ್ಲ॥

**ಅಂತ್ಯ :** ಗಾದಿಯು ಮಾತಲ್ಲವೊ ಸುಳ್ಳಿನ ಗಾದಿಯು ಕತ್ತಿಯಲವೊ ಸಾದಿಸಿ। ಅನು ದಿನ ಸಟ್ಟಿಥಿಟ್ಟಯೆಂಬ। ಪರವಾದಿಯು ಪುಸ್ತಕ ಸೂಲಲು। ಮುಚ್ಚು ಟಿಕಿ

ಅಲ್ಲಿರೆಳೊ। ಚಿಣಿಯನಾಡುವ ಬಾಗಿಯು ಯಮ್ಮಿಯ ವಿರನು। ಉಳಿವಿಯ
ಬಸವಂಣ। ಹೇಳಿದ ವಚನ ||೮||

**ವಿಷಯ :** ಕಲಿಯುಗದ ಮುಂದಿನ ಆಗುಹೋಗುಗಳ ವಿವರ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರೆವಣಿಗೆ. ಮೋಡಿ ಅಕ್ಷರ. ಇದರೊಂದಿಗೆ ಕಾಲಜ್ಞಾನ ಮುಂತಾದ ಕೃತಿಗಳಿವೆ.

— ಎಂಪಿಎಂ

## 445

| ಕೆ. ೧೩೨೯/೨ | **ಕಾಲಜ್ಞಾನ** | ವಚನ, ಹಾಡು |
|---|---|---|
| ೧೦.೬" × ೨.೨" | ಎಮ್ಮೆಬಸವ | ೧೫೪೩ |
| ೭೧-೮೩ ಪತ್ರ | ೧೨ ಪಂಕ್ತಿ | ೪೦ ಅಕ್ಷರ |

**ಆದಿ :** ....ಹುದಯ್ಯಾ ಮೂಗುಬಸವ ಮುದ್ದು ತಿಳಿದನು ದೇವಲೋಕದ ಮಹಿಮನಹುದಯ್ಯಾ ಆಗಮಾಚಾರ್ಯ। ಯೋಗಿಕುಲತಿಲಕನೆಂಬವನು ಮೇದಿನಿಯ ಮೇಲೊಂದು ಕುರುಹನು ಆದ ತೋರುವ ಬಿಲ್ಲ ನಾಟುವ ನೋಡಿ ಗಣಿತಗಳ ಪಿಡಿದು ಯಿಾಸಕರೂಡಿಗಚ್ಚಯ್ಯ ಆಗ ಕಂಡಾರು ಆ ಶರಣ ಮೆರವ ಬಿಲ್ಲ ಪಿಡಿದು ಹೊರಟಾನು ಧರೆಯ ಮನುಜರು ಕಂಡು ನುಡಿದಾರು

**ಅಂತ್ಯ :** ಚಿಂಮ್ಮನಗಿರಿಯೊಳಗಿರುವಂತ ಶಬರಾನು ಕೋಲು ಕೋಲೆ
ಕಯ್ಯಲ್ಲಿ ಕತ್ತಿಯ ಪಿಡಿದೆದ್ದು ನಡೆದರೆ ವುಳಿದಾನು ಕೋಲು ಕೋಲೆ ||೯||
ಜೀವದಾಸೆಯ ಮಾಡಿ ವುಳಿದಾರೆ ಕೆಟ್ಟನು ಕೋಲು ಕೋಲೆ
ಜಂಬುಲಿಂಗನ ಕೃಪೆಯಿಂದ ಯಂಮೆಯ ಬಸವಯ್ಯ ಸಾರಿದ ದ್ರಷ್ಟಾವೂ
ಕೋಲು ಕೋಲೆ ||೧೦||

**ವಿಷಯ :** ಭವಿಷ್ಯತ್ಫಲಸೂಚಕ ವಚನಗಳು ಮತ್ತು ಹಾಡುಗಳು.

**ವಿಶೇಷ :** ಬಸವಣ್ಣನ ಕಾಲಜ್ಞಾನ, ಓಹಿಲಯ್ಯಗಳ ಕಾಲಜ್ಞಾನ, ಬಂಕಯ್ಯಗಳ ಕಾಲಜ್ಞಾನ ಮತ್ತು ಚನ್ನಬಸವಣ್ಣನ ಕಾಲಜ್ಞಾನಗಳ ಸಂಕಲನ. ಇದೇ ಕಟ್ಟನಲ್ಲಿ ಗಟ್ಟಿಪದಗಳ ಅರ್ಥ ಮತ್ತು ಕರಸ್ಥಲದ ನಾಗಲಿಂಗನ ತ್ರಿವಿಧಿಗಳೂ ಇವೆ.

— ಜಿಜಿಎಂ

## 446

| ಕೆ.ಎ. ೪೯೧/೫ | **ಕಾಲಜ್ಞಾನ** | ಹಾಡು, ವಚನ |
|---|---|---|
| ೧೩" × ೮.೩" | ಎಮ್ಮೆಬಸವ ಮೊದಲಾದವರು | ೧೫೪೩ |
| ೧೦-೭೮ ಪುಟ | ೨೬ ಪಂಕ್ತಿ | ೨೪ ಅಕ್ಷರ |

ಆದಿ : ಕಾಲಜ್ಞಾನ (ಎಮ್ಮೆ ಬಸವ)
ಕಾಲಜ್ಞಾನ ಬರೆವುದಕ್ಕೆ ಶುಭಮಸ್ತು
ಎಮ್ಮೆ ಬಸವನವರು ಹೇಳಿದ ಕಾಲಜ್ಞಾನ ಬರೆವುದಕ್ಕೆ ಶುಬಮಸ್ತು
ಹೊಯ್ಯೋ ಡಂಗರು ಹೊಯ್ಯೊ ಡಂಗುರ ಹೊಯ್ಯೊ ಡಂಗುರವಾ
ಐಯ್ಯ ಹುಸಿಯೆಂಬ ಪರನಾದಿಯ ಮೇಲೆ ಹೊಯ್ಯೊ ಡಂಗುರವಾ ||೧||
ಹಬ್ಬಿದ ಬೆಟ್ಟಕೆ ತೊಟ್ಟಿಲ ಕದ್ಯಾರು ಹೊಯ್ಯೊ ಡಂಗುರವಾ
ಐಯ್ಯಾನಿ ಸುದ್ಧಿ ಪಟ್ಟಣ ಶರಸೂರೆಯಾದಿತು ಹೊಯ್ಯೊ ಡಂಗುರವಾ ||೨||

ಅಂತ್ಯ : ವಾಲಿಯ ಭಂಡಾರ ಸೂರೆಯಹೋದಾವು
ಕಾಲಜ್ಞಾನಗಳು ಮುಗಿದಾವು ಸುವಾಬಿ ||೧೦||
ಕುಂಬಾದ ಜಾತ್ರೆಯು ಸಂದಾವು ಅರುವತ್ತು
ಮುಂದೊಂದು ಸ್ನಾನವಡುವಾಗ ಸುವಾಬಿ ||೧೧||
ಎಂದಾರೆ ಯಪತು ತುಂಬವ ಸಮಯಕ್ಕೆ
ನಂದಿಯನೇರಿ ಶಿವ ಬಂದಾ ಸುವಾಬಿ ||೧೨||
ಮಂಗಳ ಮಹಾಶ್ರೀ ಲಿಂಗಾಯ ನಮಃ.

ವಿಷಯ : ಕಲಿಯುಗದಲ್ಲಿ ಮುಂದಿನ ಆಗುಹೋಗುಗಳ ಸೂಚನೆ.

ವಿಶೇಷ : ಇವನ ಕೃತಿಯಲ್ಲದೆ ಇದರಲ್ಲಿ ಚೆನ್ನಬಸವಣ್ಣ, ಸೊಡ್ಡಳ ಬಾಚರಸ, ಮಡಿವಾಳಯ್ಯ, ಉರಿಲಿಂಗದೇವರು, ಹಡಪದಪ್ಪಣ್ಣಗಳ ಕಾಲಜ್ಞಾನ ವಚನಗಳೂ ಇವೆ. ಇದೇ ಪುಸ್ತಕದಲ್ಲಿ ಹರಿಲೀಲೆ, ಪಾರಿಜಾತ ಪ್ರಸಂಗ, ಮಂತ್ರಗಳು(ಸಂ), ವರ್ಣನಾ ಪದ್ಯಗಳು ಎಂಬ ಇತರ ಕೃತಿಗಳಿವೆ.

—ಕೆಆರ್‌ಎಸ್

## 447

ಕೆ.ಬಿ. ೬೧೨/೨ **ಕಾಲಜ್ಞಾನ** ವಚನ
೭.೨" × ೪.೩" ಕಲ್ಯಾಣಮ್ಮ ಇತ್ಯಾದಿ ?
೧-೨೧ ಪುಟ ೨೩ ಪಂಕ್ತಿ ೧೫ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯೇ ನಮಃ। ಶ್ರೀ ಸಿದ್ಧರಾಮಾಸ್ವಾಮಿ ಪಾದವೆ ಗತಿ। ಶ್ರೀ ಗಣಾಧಿಪತಯೇ ನಮಃ। ಶ್ರೀ ಶಾರದಾಗುರುಭ್ಯೋ ನಮಃ। ಶ್ರೀರಸ್ತು ಸಾಕಾಲ್ಯಾಣ ಪಟ್ಟಣದ ಹರಳ್ಳೆಯನವರಾ ಹೆಂಡತಿ ಕಲ್ಯಾಣಂಮನವರು ನಿರೂಪಿಸಿದಾ ಕಾಲಜ್ಞಾನ ಬರೆಯುವದಕ್ಕೆ ಶುಭಮಸ್ತು|| ಶ್ರೀ ಸಿದ್ಧ ವಚನಾ।

ಮತ್ರ್ಯಾಲೋಕಕ್ಕೆ ಪ್ರಭುರಾಯರು ಬರುವಾ ಪ್ರಸಾದಾ|| ವಚನಾ|| ಕಾಲಬರು| ನಿಶಬರು ನಿನಾಶವಾದುದೆ ಕುರುಹ| ತಪ್ಪು ಬಯಲಾಗುವದೆ ಕುರುಹೂ| ವ್ಯಾಪಾರಾವೈಲ್ಲ ಬಯಾಲ್ಲು| ನಾಪೆಲ್ಲ ನೀರುಯಿಲ್ಲದೆ ಸತ್ತಿತ್ತು| ಯಿಾ ಕೇರಿ| ಆಗೋರಾ ಬಸವನ ಮುಂದೆ| ಬೀಕಾ ಹೊಸ ಪೂರಾದ| ಹೊಸ ಪಥದಲ್ಲಿ| ಶರಣು ಹುಟ್ಟಿಯಲ್ಲಿ| ಶರಣ ಹುಟ್ಟಿ| ಬಸವನ ಮುಂದೆ| ದ್ರುಷ್ಟಗಳ ಕೊಟ್ಟು| ತಂನ ಶಿರಾವಾ| ಗರಿಗರಿನ ಕತ್ತರಾನ| ಅಪ್ಸೇರಾ ಬಸವನ ಮುಂದೆ| ಯಿಟ್ಟು ಸಿರಗಳನೂ ಕಟ್ಟಲ್ಲಿ ಮೆರದರೂ| ಅಶರಣರಾ ಮೋದದಿಂನೂ| ಲೋಕವೆಲ್ಲಹೂ ಕೆಟ್ಟು ಕುಂದು ನಿಂದೆಗಳ ಅಡಿದಾನಾರರೆಲ್ಲ ಭ್ರುಷ್ಟರಾಗಿ ಬಯಲಾಗಿ ಹೋಗಿ ಆಮೇಲೆ ಹೊಸಪುರದಾ ದಿಕ್ಕುಗಳೆಲ್ಲಾವಾದಿತ್ತು| ಆರಂಜಿಗೆ ಉತ್ತರ ದಿಕು ನಿಜವಾದಿತ್ತು| ಯಿದು ಸತ್ಯಾಯೇಕಚಕ್ರದಲ್ಲಿ ಆಳ್ಯಾನು| ಯಿದು ಸಿದ್ಧಾಂತ ತಪ್ಪದು|| ಶ್ರೀ.

**ಅಂತ್ಯ :** ಯಿರಿಪೆಂ ಮಾಡಿವಲ್ಲಿ| ಕೆರೆಕಟ್ಟಿ ವಾಡದಿತ್ತು| ಬರಬಿಸಿ ಜಗಹೂ| ಅಳಿವಿತ್ತು ಶರಣರು ಬರುವ ಹೂ ತೋರುವರು ಸರ್ವಗ್ನಾ ||೬೬|| ಅಗಲ್ಲೂ ಗತ್ತಲೆಗವಿದ್ದು| ಮುಗಿಲ್ಲೂ| ಗರ್ಜಿಸಿ ಭೂಮಿ| ಮಿಗೆ ಜೆಟ್ಟಗಳು ನಡುಗಿ ಜಗವಾರಿಯೆ ಹುಮುಳೆಯಿನಿತ್ತು ತೋರುವದು ಸರ್ವಗ್ನಾ ||೬೭ ಶ್ರೀ ಕಾಲಗ್ನಾನ| ವಾಚನಾ| ಸಂಪೂರ್ನ ಶ್ರೀ||

**ವಿಷಯ :** ಭವಿಷ್ಯ ಕಾಲದ ಅರಿವು.

**ವಿಶೇಷ :** ಹಳೆಯ ಕಾಗದ. ಅಕ್ಷರ ಅಸ್ಪಷ್ಟ. ಇದರೊಡನೆ ಬಾಲಗ್ರಹ, ಜ್ವರ ಇವುಗಳಿಗೆ ಯಂತ್ರ, ಗಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ಮಂತ್ರಚಿಂತಾಮಣಿ, ವಿವೇಕ ಚಿಂತಾಮಣಿ ಪ್ರಶ್ನೆ, ರಾಮದೇವರ ಪ್ರಶ್ನೆ, ಸಿದ್ಧರಾಮದೇವರ ಕಾಲಜ್ಞಾನ, ಗಣೇಶ್ವರ ಸ್ತುತಿ, ವಿಭೂತಿ ಮತ್ತು ಪಾದೋದಕ ಮಾಹಾತ್ಮ್ಯ ಈ ಕೃತಿಗಳಿವೆ.

—ಎಸ್ ಎನ್ ಕೆ

## 448

| ಕೆ.ಬಿ. ೬೯೯/೩೪ | **ಕಾಲಜ್ಞಾನ** | ವಚನ |
|---|---|---|
| ೬" × ೮.೫" | ಕಾಡದೇವ | ? |
| ೩೮-೩೯ ಪತ್ರ | ೩೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಗುರುವೆ ಗತಿ|| ಕಾಡದೇವರ| ಕಾಲಗ್ನಾನಲು| ಲೋಕದ ಪಂಚಿನೊಳಲ್ಲದೆ ಶರಣರಿಗೆ| ಕೂಗಿರೊ ಕೂಗಿರೊ| ಬೇಕಾದ ಪಲಮುಕ್ತಿ ಮುಂದಿನ್ನು ಬರುತ್ತೇವೆ|| ಕೂಗಿರೊ ಕೂಗಿರೊ|| ಪಲ್ಲ||

**ಅಂತ್ಯ :** ಸಂದೇಹಾಯಿ ವಚನವೆಂಬ ದ್ರೋಹಿಗಳಿಗೆಲ್ಲ ಕೇಡು ನೋಡಿ। ಸಂದೇಹ ವಿಲ್ಲದೆ ನುಡಿದಾನು ಶಬ್ದವ ಕೇಡು ನೋಡಿ। ಯೆಂದೆಂದುತ್ತಿರದು ಅವರಿಗೆ ನರಕಲು। ಕೇಡು ನೋಡಿ। ಮುಂದಣ ಆಗಾವು ಶ್ರೀ ಸಿದ್ಧಗಿರಿ ಕಾಡ ಕೇಡು ನೋಡಿ॥

**ವಿಷಯ :** ಮಾನವರ ಕರ್ಮಫಲದ ಮುನ್ಸೂಚನೆ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರವಣಿಗೆ. ಮೋಡಿ ಅಕ್ಷರ. ಇದ ರೊಂದಿಗೆ ಕಾಲಜ್ಞಾನದ ವಚನ ಮುಂತಾದ ಕೃತಿಗಳಿವೆ.

—ಎಂಪಿಎಂ

## 449

| ಕೆ.ಎ. ೪೮೦/೨ | **ಕಾಲಜ್ಞಾನ** | ಹಾಡು |
|---|---|---|
| ೧೦.೬″ × ೬.೩″ | ಕೃಷ್ಣಮಾಚಾರ್ಯ | ೧೭೦೨ |
| ೨೬-೩೦ ಪುಟ | ೨೦ ಪಂಕ್ತಿ | ೨೭ ಅಕ್ಷರ |

**ಆದಿ :** ಶುಭಮಸ್ತು॥ ದೇವ.... ಸೂತ್ರಧಾರಿಯಾಗಿ ಕೃತಯುಗ ದ್ವಾಪರಯುಗ ಗಳು ಸಂದ ಬಳಿಕ ಯುಗಪ್ರಮಾಣ ನಾಲ್ಕು ಲಕ್ಷವು ಮೂವತ್ತೆರಡು ಸಾವಿರ ವರುಷ ನಡೆದುಹೋಗೆ ಮಾಡಿಯಿದ್ದೀರಿ. ಅದಕ್ಕೆ ಪ್ರಭವ ಸಂವತ್ಸ ರದ ಚೈತ್ರ ಶು ೧. ಶುಕ್ರವಾರ ಹದಿಮೂರು ಘಳಿಗೆ ಸಂದ ಬಳಿಕ....ಪಾಲು। ಪಾಪ ಮೂರು ಪಾಲು ...ನ ಮಾಡಿಯಿದ್ದಿರಿ.

**ಅಂತ್ಯ :** ಆ ವೀರವಸಂತನ ವಂಶದವರು ಸಾವಿರದ ನೂರೆಂಟು ವರುಷ ಆಳಿದರು. ಆಮೇಲೆ ಬ್ರಹ್ಮಾಂಡದೊಳಗಣ ಜನರಿಗೆ ಯೇನುಕಾರಣ ಕಲ್ಪನೆಯ ಮಾಡುತ್ತ ಇದ್ದಿರೊ ಆ ಮಾಯನಿನಗೆ ತಿಳಿವದು. ನಿಮ್ಮಂತಹ ಮಹಾತ್ಮ ರಿಗೆ ಕಾಣಲ್ಪಡುವದು. ಕೃಷ್ಣಮಾಚಾರ್ಯರು ಕಾಲಜ್ಞಾನ ಮುಂತಾಗಿ ಹೇಳಿ ದರು ಯೆಂದು ಜನರು ತಿರಸ್ಕರಿಸಿದರು. XXX ಅನಾಧಿಪತಿ ಸಿಂಹ್ಸಗಿರಿ ಕೃಷ್ಣಮಾಚಾರ್ಯರ ಕಾಲಜ್ಞಾನ ಸಮಾಪ್ತ.

**ವಿಷಯ :** ಕೃತಯುಗ ದ್ವಾಪರಯುಗಗಳು ಕಳೆದನಂತರ ಮುಂದೆ ಬರುವವರ ರಾಜ್ಯ ಭಾರ ಕಾಲದ ಅವಧಿಗಳು.

**ವಿಶೇಷ :** ಅಕ್ಷರಗಳೂ, ಪಂಕ್ತಿಗಳೂ ಅಲ್ಲಲ್ಲಿ ಲೋಪವಾಗಿವೆ. ಇದೇ ಗ್ರಂಥದಲ್ಲಿ ಇನ್ನೆರಡು ಕಾಲಜ್ಞಾನದ ಹಾಡುಗಳಿವೆ. ಮದರಾಸು ಪ್ರಾಚ್ಯ ಕೋಶಾ ಗಾರದಲ್ಲಿದ್ದ ಸಂ. ಡಿ. 1505 ರಿಂದ 13–11–1934 ರಲ್ಲಿ ನಕಲು ಮಾಡಿ ಸಿದೆ.

—ಕೆಆರ್‌ಎಸ್

450

ಕೆ.ಎ. ೪೮೦/೧ **ಕಾಲಜ್ಞಾನ** ಹಾಡು

೧೦.೬" × ೯.೨" ಕೊಡೆಮೊಗ್ಗೆಯ ರಾಮು ?

೧-೨೬ ಪುಟ ೨೦ ಪಂಕ್ತಿ ೨೭ ಅಕ್ಷರ

**ಆದಿ :** ಕಲ್ಯಾಣಪಟ್ಟಣವ ಕಟ್ಟುವ ಅಂದಿಗೆ ಮುಂದೆ ತಲ್ಪಸಿ ಮೂಜಗವೂ॥
ಕೆಟ್ಟಿತೂ ಮೂಜಗವೂ॥ ಪಲ್ಲ
ಮಳೆಗಾಲ ಕಳದವು ಬೆಳೆ....ವ.. ಗೈವು
ಕಳವು ಅನ್ಯಾಯಗಳು ಆದಾವುಮಾ॥
ಇಳೆಯೆಲ್ಲಿ ತಲ್ಲಣಿಸಿ ಹಳಿ ತಲ್ಲಣಯೆದ್ದು....
....ತಿಯು....ಲವು ಮುಂದೆ ಬಂದಾವು ಮಾ ॥೧॥

**ಅಂತ್ಯ :** ಮಂಡಲದೊಳು ಬಲು ಶೀಲಗಳ ಕೊಂಡು
ಹಮ್ಮಿನಿಂದಲಿ ನಡೆವರು॥
ಭಂಡಾಗಿ ಹೋಗುವ ದಿನಗಳು ಮುಂದೆ
ಲಂಡರು ಮತ್ತಾರು ಆದಾರುಮಾ ॥೩॥

ಕೋಳಿ ಕೂಗೆ ಜೇಳು ಬಯಲಾಗೆ
ಬಾಲಾಕ್ಷ ಪರಿ.... ರಾಮೇಶ್ವರಕ್ಕೆ
ಯೇಳಿ ಕಾಳಗದಾಟ ಕಡೆಯೆಂದು ಹೇಳಿದೆ ॥೪॥

ನೋಡಲು ಬೆಳ್ಳಿಯ ತೇಜಿಯನೆಚ್ಚತ್ತು
....ಡು ರುದ್ರಾಕ್ಷ ಕಾವಿಯು ಭಸಿತಾ
ಪಾಡು ಪಂತದ ರಾಯನ ಕುರುಹು ಕೊಡಮೊಗ್ಗೆಯ ರಾಮು ಸಾರಿದನು ॥೫॥

ಕಾಲಜ್ಞಾನ ಪದ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ಮುಂದಿನ ಕಾಲದಲ್ಲಿ ಆಗುಹೋಗುಗಳ ಸೂಚನೆ.

**ವಿಶೇಷ :** ಅಲ್ಲಲ್ಲಿ ಅಕ್ಷರಗಳು ಲುಪ್ತವಾಗಿವೆ. ಕೆಲವು ಕಡೆ ಪಂಕ್ತಿಗಳು ಲೋಪವಾಗಿವೆ. ಇದೇ ಗ್ರಂಥದಲ್ಲಿ ಇನ್ನೆರಡು ಕಾಲಜ್ಞಾನದ ಹಾಡುಗಳಿವೆ. ಬರಹವು ಚೆನ್ನಾಗಿದೆ. ಮದರಾಸು ಪ್ರಾಚ್ಯಕೋಶಾಗಾರದಲ್ಲಿದ ಡಿ. 1514 ರಿಂದ 13-11-1934 ರಲ್ಲಿ ನಕಲು ಮಾಡಿರುವಂತೆ ಅಂತ್ಯದಲ್ಲಿ ತಿಳಿಸಿದೆ.

—ಕೆಆರ್ಎಸ್

## 451

ಕೆ.ಬಿ. ೬೧೨/೯ | ಕಾಲಜ್ಞಾನ | ವಚನ
೭.೨" × ೪.೩" | ಚೆನ್ನಬಸವೇಶ್ವರ | ಸು. ೧೧೬೦
೩೮-೪೧ ಪತ್ರ | ೧೮ ಪಂಕ್ತಿ | ೧೪ ಅಕ್ಷರ

**ಆದಿ :** ಶ್ರೀ ಚಂನಬಸವೇಶ್ವರಾ ನೀರೂಪಿಸಿದ್ದ ಕಾಲಗ್ನ್ಯಾನದ ವಚನಾ। ವಾಚನಾ। ಶ್ರೀ॥ ಕೊಲೂ ಕೊಲೆಂನ ಕೊಲೆ ಕೊಲು ಕೋಲೆ ಸೀವ ಶರಣರ ಸೂಚನೆ ಕೊಲು ಕೊಲೆ ॥೦॥ ಯಿಂದ್ದಲ ಮಾತನೂ ವಂದ್ದು ಹೇಳದೆ ಬಿಟ್ಟು। ಮುಂದೆ ವರಗೂರೂ ಸೂಚನೇ ಕೋಲೇ। ಮುಂದೆ ವರಗುವ ಸೂಚನೆ ಪದಗಳಾ ಚಂದಾದಿವಲಿದ್ದು ಸುಬಾನೆ ಕೋಲೇ ॥೩೯॥

**ಅಂತ್ಯ :** ರಾಗರಾಯಿತಾನೀತ್ಯ। ಭೋಗಿ ಕೇಳುವ ಮುದ್ದೂಸ್ವಾಮಿ ಲೋಕಾಕ್ಕೆ ಕೂರು ಅರಿವಂತೆ ಪೇಳೂವೆ ಕೋಲ್ಲೆ॥ ಲೋಕಕ್ಕೆ ಅರಿಸಂತ್ತೆ ಪೇಳುವೆ ಮುಂದಿಂಗೂ ಗಾಡಾಶರಣಾರು। ಬರುತ್ತರೆ ಕೋಲ್ಲೆ ಶ್ರೀ॥ ॥೫೫॥

**ವಿಷಯ :** ಭವಿಷ್ಯ ಸೂಚನೆ.

**ವಿಶೇಷ :** ಅಸ್ಪಷ್ಟಾಕ್ಷರ, ಹಳೆಯ ಕಾಗದ. ಇದರೊಡನೆ ಬಾಲಗ್ರಹ, ಜ್ವರ ಇವುಗಳಿಗೆ ಮಂತ್ರ, ಕಲ್ಯಾಣಮ್ಮನವರ ಕಾಲಜ್ಞಾನ, ಗಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ವಿವೇಕ ಚಿಂತಾಮಣಿ ಪ್ರಶ್ನೆ, ಸಿದ್ಧರಾಮದೇವರ ಕಾಲಜ್ಞಾನ, ಗಣೇಶ್ವರ ಸ್ತುತಿ, ವಿಭಜನೆ ಮತ್ತು ಪಾದೋದಕ ಮಾಹಾತ್ಮ್ಯಗಳಿವೆ.

—ಎಸ್ ಎನ್ ಕೆ

## 452

ಕೆ.ಬಿ. ೬೯೯/೩೭ | ಕಾಲಜ್ಞಾನ | ವಚನ
೬" × ೮.೫" | ಚೆನ್ನಬಸವೇಶ್ವರ | ಸು. ೧೧೬೦
೪೩-೪೫ ಪತ್ರ | ೨೮ ಪಂಕ್ತಿ | ೧೮ ಅಕ್ಷರ

**ಆದಿ :** ಚಂನಬಸವೆಸ್ವರ ದೇವ ನಿರುಪಿಸಿದ ವಚನ॥ ಚಂನಬಸಂಣನಾದ ಚಂನಂಣ। ಮುಂದಣ ಕಲ್ಲಿಯುಗದಗ ಮಹಾ....ಯನು ಮರ್ತ್ಯಲೋಕದ ಮಹಾಗಣಂಗಳ ಕೇಳಿ ಕೃತಾರ್ತ್ಥರಾದರ್ಸ್ಯೆಯ್ಯ। ನಾನು ಹೇಳುವನಲ್ಲ। ಕೂಡಲ ಚಂನಸಂಗಮೇಶ್ವರ ದೇವರು ಕೊಟ್ಟ ನಿರುಪದಿಂ ಹೇಳಿಹೆನು॥

**ಅಂತ್ಯ :** ತ್ರಿಪುರಂತಕದೆವರ ಅಕ್ಕರಿ ನೋಡಿ ಅರದಿಸಿಹರು। ನಾಲು ಜಹ ಪರಿಯ ನಿಳು ನಿಕ್ಷೆಪದಲ್ಲಿರಿ। ನಾಲು ಆನಂದನಾಮ ಸಂವಚರಕ್ಕೆ ಬಂದೆಲು ನಿಂಮ

ಪ್ರಮಥರಾಣೆ। ಕಡಾ ಚೆಂನಸಂಗಮದೇವರು ಸಾಕ್ಷಿಯಾಗಿ ಬಂದೆಲು। ಚೆಂನಬಸವೆಸ್ವರ ದೇವರ ಕಾಲಗ್ನಾನದ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ॥

**ವಿಷಯ :** ಕಲಿಯುಗದಲ್ಲಿ ಮುಂದೆ ನಡೆಯುವುದನ್ನು ತಿಳಿಸುವುದಾಗಿದೆ.

**ವಿಶೇಷ :** ಸಮಗ್ರ ಕೃತಿ. ಅಶುದ್ಧ ಬರೆವಣಿಗೆ. ಶಿಥಿಲ ಪ್ರತಿ. ಮೋಡಿ ಅಕ್ಷರ. ಇದರೊಂದಿಗೆ ಅಕ್ಕಗಳ ವಚನ ಮುಂತಾದ ಕೃತಿಗಳಿವೆ.

—ಎಂಪಿಎಂ

## 453

| ಕೆ.ಎ. ೪೫೭ | **ಕಾಲಜ್ಞಾನ** | ಕಂದ,ಗದ್ಯ,ವಚನ,ಹಾಡು |
|---|---|---|
| ೯.೨″ × ೧೦.೨″ | ಪುರಾತನರು | ಸು. ೧೧೬೦ |
| ೧-೧೪೧ ಪುಟ | ೨೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀ ವಿರೂಪಾಕ್ಷಾಯ ನಮಃ॥ ಶ್ರೀ ಜಾಲಿಹಾಳ ಗುರುತಾತದೇವರು ಪ್ರಸನ್ನ॥ ಶ್ರೀಗುರು ಪಂಚಾಕ್ಷರಿ ಪ್ರಸನ್ನಃ॥ ಚೆನ್ನಬಸವೇಶ್ವರ ದೇವರ ಕಾಲಜ್ಞಾನ ಬರೆವುದಕ್ಕೆ ಶುಭಮಸ್ತು॥ ಎಮ್ಮ ಬಸವಣ್ಣ ನಿರೂಪಿಸಿದ ಕಾಲಜ್ಞಾನಕ್ಕೆ ನಿರ್ವಿಘ್ನಮಸ್ತು॥ XXX

ಪಂಚಾಕ್ಷರಿ ಮೂರುತಿಯೊ। ಪರಬ್ರಹ್ಮ ಸ್ವರೂಪವೋ
ಮಿಂಚುವ ಪ್ರಣವಸ್ವರೂಪವೊ। ಲಾಂಛನ ಪೊತ್ತ ರುದ್ರನೋ
ಚೆನ್ನಬಸವಣ್ಣನ ಸಂಚವರಿದು ತಿಳಿದರ್ಗೆ ಚೆನ್ನಬಸವೇಶ್ವರನ ಕಾಲಜ್ಞಾನವೂ ॥ಪದ॥

ಸಾರಿ ಹೇಳಿದನು ಸಂಸಾರಿಗಳಿಗುಳುವಿಲ್ಲಾ
ಸಾರ ಹೃದಯರ ಮಾತು ಸಾರುತಿದೆಕೋ
ವೀರಶೈವನ ಜರಿದು
ಮಾರನಮತಿಗೆಟ್ಟಿ ಮೆರೆದಪ್ಪಿರುವ ಸದಾಚಾರಿ ದಿವಕೋ ॥೧॥

**ಅಂತ್ಯ :** ಮುಂದೆ ಬರುವ ಸುದ್ದಿ ಎಂದಿಗೆ ಎಂಬದಾಗಿ ಹೊಯ್ಯೊ ಡಂಗುರವಾ
ಬಂದು ಸಾರಿದ ಸ್ತುತಿ ನಿಂದೆಗಳ ನಂಬಬೇಡಿ ಹೊಯ್ಯೊ ಡಂಗುರವಾ
ಅಲ್ಲಮನೊಲವಿನ ಸೊಲ್ಲಿನ ಲೀಲೆಗೆ ಹೊಯ್ಯೊ ಡಂಗುರವಾ
ಅಲ್ಲಿ ಅಹುದು ಸೊಲ್ಲಿಗೆ ಕೊನೆಯೆಂದು ಹೊಯ್ಯೊ ಡಂಗುರವಾ ॥೭॥
ಅಂಗಡಿಯೊಳಗೆಲ್ಲ ಮಂಗಳುದಯವೆಂದು ಹೊಯ್ಯೊ ಡಂಗುರವಾ
ಸಂಗಸದ್ಗುರು ನಾಗಲಿಂಗ ಸಾರಿದನೆಂದು ಹೊಯ್ಯೊ ಡಂಗುರವಾ ॥ಶ್ರೀ॥

ಎಲ್ಲ ಪುರಾತನರು ನಿರೂಪಿಸಿದ ಕಾಲಜ್ಞಾನವು ಸಂಪೂರ್ಣಂ ಮಂಗಳ ಮಹಾಶ್ರೀ. ಮಂಗಳಪದ
ಜಯಮಂಗಳಂ ನಿತ್ಯ ಶುಭಮಂಗಳಂ। XXX
ಹರಪುರದ ಹಿರೇಮಠದ ಸಿದ್ದಪ್ಪದೇವರ ಮೊಮ್ಮಗನಾದಂಥ ಗುರುನಂಜಪ್ಪ ಗುರುನಂಜಪ್ಪನ ಮೊಮ್ಮಗನಾದಂಥಗೆ ಪಾದದ ಚಿಪ್ಪಿಗ ಬಸಪ್ಪನು ಸ್ವಹಸ್ತ ದಿಂದ ಸಂಕಿನ ಚನ್ನಪ್ಪನ ಮಗ ಚೆನ್ನಬಸಪ್ಪಗೆ ಬಾಲಲೀಲೆಯಿಂದ ಬರದು ಕೊಟ್ಟ ಪುಸ್ತಕ ಸಂಪೂರ್ಣ ಮಂಗಳ ಮಹಾಶ್ರೀ.

**ವಿಷಯ :** ಭವಿಷ್ಯಕಾಲದ ಸೂಚನೆಗಳ ವಿವರಣೆ.

**ವಿಶೇಷ :** ಚೆನ್ನಬಸವಣ್ಣ, ನೀಲಮ್ಮ, ನಂದಿ ಬಸವಣ್ಣ, ಘಟ್ಟಿವಾಳಯ್ಯ, ಎಮ್ಮೆ ಬಸವಣ್ಣ, ರುದ್ರಮುನಿಸ್ವಾಮಿ ಇವರೇ ಮೊದಲಾದವರು ನಿರೂಪಿಸಿರುವ ಕಾಲಜ್ಞಾನವನ್ನು ಇಲ್ಲಿ ಕೊಡಲಾಗಿದೆ. ಪ್ರತಿ ಉತ್ತಮಸ್ಥಿತಿಯಲ್ಲಿದೆ.

—ವೈಸಿಬಿ

## 454

| ಕೆ.ಬಿ. ೬೯೯/೩೬ | **ಕಾಲಜ್ಞಾನ** | ವಚನ |
|---|---|---|
| ೬" × ೮.೫" | ಪ್ರಭುದೇವ | ಸು. ೧೧೬೦ |
| ೪೨-೪೩ ಪತ್ರ | ೨೬ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಗುರು ಪ್ರಭುದೇವರ ಪಾದವೆ ಗತಿ।। ಪ್ರಭುದೇವರು ನಿರೂಪಿಸಿದ ಕಾಲ ಗ್ನಾನ।। ಪ್ರಭುದೇವರು ನಿರೂಪಿಸಿದ ಸಂಬೋಧೆಯು ಕಾಲಗ್ನಾನದ ವಚನ।। ಶ್ರೀ ಕಾಣದ ಮಹಿಮೆಯಲ್ಲಿ। ಪ್ರಮಥ ಗಣಂಗಳ ಮುಂದೆ ಬಿಂನಹ ಮಡಿ ಹರು। ಏಕಚಿತ್ತದಿಂ ಕೇಳಿ ಕೃತಾರ್ತರಾಗಿರೈಯ್ಯ।।

**ಅಂತ್ಯ :** ಕುಣಿದಡುತ್ತ। ಮೆರದಡುತ್ತೆ ನಡದರು। ಏಳಿವಿಯೆಲ್ಲಿ ನಿಂದಿಹಾರು।। ನೀಲ ಲೋಚನೆಲ್ಲಿಂಗದಲ್ಲಿ ಬಯಲಾದಳು ಯೆಂದು ನಿರುಪಿಸುತಿರಲ್ಲು। ಯಿತ್ರ ಉಧಯವಾಗಲು। ಅತ ಬಸವೆಸ್ವರ ದೆವರು ಸಂಗಮೆಸ್ವರ ದೆವರಲಿ। ಬಯ ಲಾಗಲು।।

**ವಿಷಯ :** ಭವಿಷತ್ಫಲಸೂಚಕ ವಚನಗಳು.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರೆವಣಿಗೆ. ಮೋಡಿ ಅಕ್ಷರ. ಇದ ರೊಂದಿಗೆ ಕಾಲಜ್ಞಾನ ಮುಂತಾದ ಕೃತಿಗಳಿವೆ.

—ಎಂಪಿಎಂ

## 455

ಕೆ.ಬಿ. ೬೯೯/೩೫ **ಕಾಲಜ್ಞಾನ** ಗದ್ಯ
೬" × ೮.೫" ಬಸವಣ್ಣ ಸು. ೧೧೬೦
೪೦-೪೨ ಪತ್ರ ೩೨ ಪಂಕ್ತಿ ೨೨ ಅಕ್ಷರ

**ಆದಿ :** ಬಸವೇಶ್ವರಸ್ವಾಮಿಗಳು ನಿರೂಪಿಸಿದ ಕಾಲಗ್ನಾನ। ಶ್ರೀ ಕಲ್ಯಾಣ ಪಟ್ಟಣದಲ್ಲಿ। ಬಸವೆಸ್ವರ ದೆವರು ನಿರುಪಿಸಿದ। ಕಲಗ್ನೆನದ ವಚನ॥ ಶರಣು ಶರಣಾರ್ತ್ರಿ। ಮರ್ತ್ಯಲೋಕದ ಮಹಾಗಣಂಗಳಿಗೆ। ರಕ್ಷಸನಮ ಸಂವಚ್ಚರದ। ಪಲ್ಗುಣ ಮಸದ। ದಿವರಾತ್ರಿ ವೆಂಳೆಯಲ್ಲಿ ನಾನು ನಿಂಮ ಪುರತ್ತರಿಗೆ। ಬಿಂನಿಹಾ ಮಡುತ್ತಿದ್ದೆನೆ। ಕ್ರಿತ್ತಯುಗದಲ್ಲಿ॥ ೧೭ ಲಕ್ಷವ ೨೮ ಸಾವಿರ ವರುಷದಲ್ಲಿ॥

**ಅಂತ್ಯ :** ಬಂದಾರು ಮುಂದಕ್ಕೆ ಹತ್ತು। ಹಿಂದಕ್ಕೆ ಹಂನ್ನೊಂದಲ್ಲದೆ ಬಾರರು। ನಂಮ ಪುರತರು। ಶರಣು ಶರಣಾರ್ತ್ರಿ। ಅಸಂಖ್ಯಾತ ಮಹಾಗಣಂಗಳ ಪದಕೆ। ನಮೊ ನಮೊ॥ ಕಾಲಗ್ನಾನದ ವಚನ ಸಮುಸ್ತ ಮಂಗಳ ಮಹಾಶ್ರೀ॥

**ವಿಷಯ :** ಕಲಿಯುಗದಲ್ಲಿ ಮುಂದೆ ನಡೆಯುವುದನ್ನು ತಿಳಿಸುವದಾಗಿದೆ.

**ವಿಶೇಷ :** ಕೃತಿ ಸಮಗ್ರ. ಬರೆವಣಿಗೆ ಅಶುದ್ಧ. ಅಕ್ಷರ ಮೋಡಿ. ಪ್ರತಿ ಶಿಥಿಲ. ಇದರೊಂದಿಗೆ ಕಾಲಜ್ಞಾನ ಮುಂತಾದ ಕೃತಿಗಳಿವೆ.

—ಎಂಪಿಎಂ

## 456

ಕೆ.ಬಿ. ೬೯೯/೧೨ **ಕಾಲಜ್ಞಾನ** ಹಾಡು
೬" × ೮.೫" ಷಣ್ಮುಖಸ್ವಾಮಿ ?
೧ ಪತ್ರ ೨೨ ಪಂಕ್ತಿ ೨೦ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯಂ ನಮಃ॥
ಶ್ರೀ ಶಂಣ್ಮುಕ ಸ್ವಾಮಿಗಳು ನಿರುಪಿಸಿದ। ಕಾಲಗ್ನಾನದ ಪದ॥
ಮಯದ ಮರಣಲು। ಮುಸಿಕಿಲ್ಲಿ ಬರುತ್ತದೆ ನೋಡಿರಂಣ ದೊಡ್ಡರಾಯರಿಗೆಲ್ಲ ಉಳಯಿಲ್ಲ ಮುಂದಿಂಸು ನೋಡಿರಂಣ॥ ಪಲ್ಲ॥ ಹುಸಿಯಲ್ಲ ಡಂಗುರ ಸಾರುವೆ ಜಗದೊಳು ನೋಡಿರಂಣ। ಅಷ್ಟದೊಳು ಮುಸುಕುತೆ ಬರುತಾದೆ ಪ್ರಳಿಯವು ನೊಡಿರಂಣ॥ ಕಸಮುಳ ಮನುಜರು ಕಂಗೆಟ್ಟು ದುಡಿದರು ನೊಡಿರಂಣ॥

**ಅಂತ್ಯ :** ಬೆರ.... ಬೇಡಿ ಬರುತವೆ ನೋಡಿರಂಣ। ಹೆಂಮಾರಿ ಮುಂದೆ ಪರಿ ಪರಿಯ ಪ್ರಮಥರು ಬರುವಾಗ ನೋಡಿರಂಣ। ಗುರುವೆತ್ತ........ ಗುಪವೆಂದೆನ

ಬೇಡ ನೋಡಿರಂಣ। ಸ್ವಮಿ ಪರಜೋಗಿ ತಾ....ದನಡಿಯ ಸೂಚನೆ ನೋಡಿರಂಣ ||೫||

**ವಿಷಯ :** ಕಲಿಯುಗದ ಮುಂದಿನ ಆಗುಹೋಗುಗಳ ಸೂಚನೆ.

**ವಿಶೇಷ :** ಕೃತಿ ಸಮಗ್ರ. ಪ್ರತಿ ಶಿಥಿಲ. ಬರೆವಣಿಗೆ ನೋಡಿ. ಇದರೊಂದಿಗೆ ಇಷ್ಟ ಲಿಂಗೇಶ್ವರ ಸ್ತುತಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 457

| ಕೆ.ಎ. ೫೫೦/೨ | **ಕಾಲಜ್ಞಾನ** | ಗದ್ಯ |
|---|---|---|
| ೧೨" × ೯.೬" | ಬಸವಣ್ಣ | ಸು. ೧೧೬೦ |
| ೬೧-೬೪ ಪುಟ | ೨೪ ಪಂಕ್ತಿ | ೨೪ ಅಕ್ಷರ |

**ಆದಿ :** ಕಾಲಜ್ಞಾನದ ವಚನ.
೩೪೩೬೦೦ ಕೃತಯುಗ ೧೩೨೮೦೦ ತ್ರೇತಾಯುಗ|| ದ್ವಾಪರಯುಗ ೮೬೪೦೦|| ಕಲಿಯುಗ ೪೩೨೦೦೦|| ನಾಲ್ಕುಯುಗದಲ್ಲಿ ಬಸವನೆಂಬ ಭಕ್ತನ ಮಾಡಿ ಹೆಸರಿಟ್ಟು ಕರದು ದಾಸೋಹವ ಮಾಡುವ ಭೇದವಾ ನೀವು ಬಲ್ಲಿರಲ್ಲದೆ ಉಳಿದವರು ಅರಿಯರು. ನಾಲ್ಕು ಯುಗಂಗಳಲ್ಲಿ ಎನ್ನ ಹೋದ್ದರ ಪಾಲಕಾ ಚಾಳೊಕೆ ರಾಯುಸ ಗರ್ಭದಲ್ಲಿ ಎದ್ದು ಸಿಲಿಸಿದ ಕಾರಣಾ ರಾಜೆನಿಸಿ ಬಿಜ್ಜಳನೆಂಬ ನಾಮುವಾಯಿತು.

**ಅಂತ್ಯ :** ಕಲ್ಯಾಣ ಪಟ್ಟಣವಾದಿತು. ಹಿಂದಕ್ಕೆ ಹತ್ತೂ, ಮುಂದಕ್ಕೆ ಹನ್ನೊಂದು ಕೈಲ್ಲಿ ಬಂದರು. ಇದು ತಪ್ಪದು ನಿಮ್ಮಾಣೆ ನಿಮ್ಮ ಪ್ರಮತರಾಣೆ ನಿಮ್ಮಣಿ ವಸಥಣಿ (ರಾಣೀವಾಸದಾಣೆ) ಕೂಡಲ ಸಂಗಮುದೇವಯ್ಯಾ ||೧|| ಬಸವೇಶ್ವರ ದೇವರು ನಿರೂಪಿಸಿದ ಕಾಲಜ್ಞಾನವು ಸಂಪೂರ್ಣ ಮಂಗಳ ಮಹಾ ಶ್ರೀ.

**ವಿಷಯ :** ಬಿಜ್ಜಳನ ವೃತ್ತಾಂತ.

**ವಿಶೇಷ :** ಸಮಗ್ರ. ಇದೇ ಪುಸ್ತಕದಲ್ಲಿ ಕಾಲಜ್ಞಾನ, ಕಾಲಜ್ಞಾನದ ವಚನ, ಚೆನ್ನ ಬಸವರಾಜನ ಕಥೆಗಳೂ ಇವೆ.

—ಕೆಆರ್‌ಎಸ್

## 458

| ಕೆ.ಎ. ೫೫೦/೩ | **ಕಾಲಜ್ಞಾನ** | ವಚನ |
|---|---|---|
| ೧೨" × ೯.೬" | ಸರ್ವಜ್ಞ | ಸು. ೧೭೦೦ |
| ೬೫-೬೬ ಪುಟ | ೨೪ ಪಂಕ್ತಿ | ೨೪ ಅಕ್ಷರ |

**ಆದಿ :** ಕಲ್ಯಾಣದ ಬಸವೇಶ್ವರದೇವರು ಇದ್ದು ಹೋಗುವಾಗ, ಶಾಲಿವಾಹನ ಎಂಟುನೂರ ಇಪ್ಪತ್ತಒಂದು ವರುಷ ಇಂದಿಗೆ ಸಂದಿತು; ಮುಂದೆ ಉಳಿದುದು; ಏಳುನೂರ ಎಪ್ಪತ್ತಏಳು ವರುಷಕೆ ವೀರವಸವಂತರಾಯಾ ಬಹ ಪ್ರಮಾಣವು. ಅಂದಿಗೆ ಶಾಲಿವಾಹನ ಶಕ ಸಂದಿತು.

**ಅಂತ್ಯ :** ಅಂದಿಗೆ ಅಳಿದೂ ಉಳಿದಾವರು ಪ್ರಮಾಣದಲ್ಲಿ ಇದ್ದರು. ಉಳಿದಂತ ಮಹಾ ಮುನಿಗಳು ದೇವಾದರು. ಈ ಮಾತು ಸತ್ಯ ಎನ್ನಿ ನಿಮ್ಮಾಣೆ ನಿಮ್ಮ ಪ್ರಮತರಾಣ್ಯೆ; ಸರ್ವಜ್ಞ ಹೇಳಿದ ಮಾತು ಸತ್ಯ ಎನ್ನಿ; ಈ ಹೇಳಿದ ಮಾತು ಸತ್ಯ|| ಶರಣು ಶರಣಾರ್ತಿ ಶರಣು| ಜಂಗಮಲಿಂಗ ಶರಣು ನಿಮ್ಮ ಅಡಿಗಳಿಗೆ ಶರಣಾರ್ತಿ ಶ್ರೀ.

**ವಿಷಯ :** ಮುಂದೆ ಆಗುವ ಫಲಾಫಲಗಳ ವಿವರ.

**ವಿಶೇಷ :** ಬರಹ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಕಾಲಜ್ಞಾನ, ಚೆನ್ನಬಸವರಾಜನ ಕಥೆಗಳೂ ಇವೆ.

—ಕೆಆರ್‌ಎಸ್

## 459

| | | |
|---|---|---|
| ಕೆ.ಎ. ೫೫೦/೧ | **ಕಾಲಜ್ಞಾನ** | ತ್ರಿಪದಿ |
| ೧೨" × ೯.೬" | ಸರ್ವಜ್ಞ | ಸು. ೧೬೦೦ |
| ೧-೬೦ ಪುಟ | ೨೪ ಪಂಕ್ತಿ | ೧೬ ಅಕ್ಷರ |

**ಆದಿ :** ಸರ್ವಜ್ಞ ಕಾಲಜ್ಞಾನದ ವಚನ.
ಮುನ್ನ ಪೂರ್ವದಲಾನು ಪನ್ನಂಗಧರನಾಳು
ಎನ್ನಯ್ಯ ನಮ್ಮ ಪುಷ್ಪದತ್ತನು ಎಂದು
ಮನ್ನಿಸಿದಿರಿ ನೀವು ಸರ್ವಜ್ಞ ||೧||
ಶ್ರೀಗುರು ನಿಮ್ಮ ಚರಣಾದ ಗ್ರಾಶ
ಲೀಲಾಪ್ರಸಾದವನು ಸವಿದು ಕಲಾಜ್ಞಾನ
ಸಾಗಿಸುವೆ ನಾನೂ ಸರ್ವಜ್ಞ ||೨||

**ಅಂತ್ಯ :** ವೀರವಸಂತನು ಧಾರುಣಿಗೆ ನಿಲ್ವುದಕೆ
ತೋರುವದು ಕಲಿ ನಾಲ್ಕುಸಾಸಿರದ ಏಳು
ನೂರೆಪ್ಪತ್ತೇಳು ಪರಿಪೂರ್ಣ ಸರ್ವಜ್ಞ ||೭೩||
ಸರ್ವಜ್ಞಾನ ಕಾಲಜ್ಞಾನ ಸಮರ್ಪಿತಕೆ ಮಂಗಳ ಮಹಾಗಣಂಗಳಿಗೆ ಶರಣು ಶರಣಾರ್ತಿ ಶರಣು ಜಂಗಮಲಿಂಗ ಶರಣು ನಿಮ್ಮ ಅಡಿಗಳಿಗೆ ಶರಣಾರ್ತಿ ಶರಣಾರ್ತಿ ಶ್ರೀ.

**ವಿಷಯ :** ಬಿಜ್ಜಳನ ಮರಣವಿಚಾರ.

**ವಿಶೇಷ :** ಸಮಗ್ರ. ಅಲ್ಲಲ್ಲಿ ಶಕಟರೇಫವನ್ನು ಬಳಸಲಾಗಿದೆ. ಬರಹ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಕಾಲಜ್ಞಾನದ ವಚನ, ಚೆನ್ನಬಸವರಾಜನ ಕಥೆಗಳೂ ಇವೆ.

—ಕೆಆರ್‌ಎಸ್

## 460

| ಕೆ.ಎ. ೫೬೬/೨ | **ಕಾಲಜ್ಞಾನ** | ವಚನ |
|---|---|---|
| ೧೩.೧" × ೮" | ಸರ್ವಜ್ಞ ಇತ್ಯಾದಿ | ಸು. ೧೭೦೦ |
| ೧-೧೦೩ + ೧-೩೫ ಪುಟ | ೨೬ ಪಂಕ್ತಿ | ೨೦ ಅಕ್ಷರ |

**ಆದಿ :** ಕಾಲಜ್ಞಾನದ ವಚನ॥
೨....ಗೆ ಪಟ್ಟಣವೆನಿಸಿಕೊಂಡಿತು ಎಂಬುದಂ ಒಲ್ಲೆ
ಜಗದವರು ಜಗಳವಾಡ್ಯಾರೆಂಬುದ ಬಲ್ಲೆ
ಕೋಣನ ಕುದುರೆಯ ಹೋರಾಟದಿಂದ ಜಗವೆಲ್ಲಾ
ಆರಾಟಿ ಹೊರಟಿಗೊಂಡಾರೆಂಬುದ ಬಲ್ಲೆ
ಉಕ್ಕಿಸೊಕ್ಕಿದ ತುರುಕರು ಲಯವಾದಾರೆಂಬುದ ಬಲ್ಲೆ
ಮಿಕ್ಕು ಪಲ್ಲವಿಸಿ ಕಲ್ಯಾಣಪಟ್ಟಣವಾದೀತೆಂಬುದಂ ಬಲ್ಲೆ
ಕಲುಬುರಿಗೆಯಲ್ಲಿ ಹುಲಿ ಕರಡಿ ಆದೀತೆಂಬುದಂ ಬಲ್ಲೆ
ಕಾಣಾ ಕೂಡಲ ಸಂಗಮದೇವಾ ॥೫॥

**ಅಂತ್ಯ :** ರುದ್ರಮುನಿಗಳು ಸಿದ್ಧರಾಮೈಯ್ಯ
ಇದ್ದ ಮಹಿಮರು ಶರಣರೆಲ್ಲರು
ಹೊದ್ದಿಯರಗಲು ಚೆನ್ನಬಸವನು ಪದುಳನಂಘ್ರಿಯಲಿ
ಸದ್ಯ ನಮಗೆ ವ್ಯಾಳ್ಯವಾಯಿತು
ಸಮಯಕೆಲ್ಲ ಶರಣಾರ್ಥಿಯೆಂದು
ಎದಶ್ದಿ ಎರಗಿದ ಚೆನ್ನಬಸವನು ಇದ್ದ ಗಣಸಭೆಗೆ ॥೧೪೧॥

ವಚನಾ॥ ಹೀಗೆಂದು ಬಸವಯ್ಯನವರು ರುದ್ರಮುನಿದೇವರು ಸಿದ್ಧರಾಮೈಯ್ಯರೊಳು
ಪೇಳಿಸುತ್ತೇನೆಂದುತಿರ್ದಾರು॥ ರಾಗ–ದ್ವಿಪದಿ
ಶ್ರೀ ಭಸಿತರುದ್ರಾಕ್ಷೆ ಶಿವಲಿಂಗಪೂಜೆ
ಶಿವಷಡಾಕ್ಷರ ಮಂತ್ರ ಶಿವಲಿಂಗಾವಾ
ಶಿವಗಣಂಗಳ ಸೇವೆ ಸಿರಕಾಲದಲ್ಲಿ
ಶಿವಜೀವತೆನುಭಾವ ಶಿವಶರಣಗೋಷ್ಠಿ
ಶಿವಶರಣ ಪದ್ಧತಿಗೆ ಶರಣು ಶರಣಾರ್ಥಿಗೆ॥

ಶ್ರೀ ಕಾಲಜ್ಞಾನಂ ಸಂಪೂರ್ಣ ಮಂಗಳ ಮಹಾ ಅಂತು ೨೮೫ ಪದಕಂ
ಮಂಗಲ ಮಹಾಶ್ರೀ ಶ್ರೀ-ಮಂಗಳಾರತಿ....
ಜಯ ಮಂಗಳಂ ನಿತ್ಯ ಶುಭಮಂಗಳಂ
ದಯಚರಿತ ಬೆಳ್ಳಿ ಬಯಲ ಬಸವೇಶ್ವರಗೆ ||ಪಲ್ಲ||
ತ್ರಿಜಗಧಿಕ ಕರ್ತನಿಗೆ ತ್ರಿಪುರಸಂಹಾರನಿಗೆ
ಭುಜಗಭೂಷಣ ಭೋಗಸಂಪೂರ್ಣಗೆ
ಅಜಹರಿ ಮುನಿವಂದ್ಯ ಆದಿದೇವೋತ್ತಮಗೆ
ಭಜಿಸಿದವರನು ಕಾಯ್ವ ಭವದೂರಗೆ ||ಜಯ||
ಗಳದಲಿ ಮೆರೆವ ಘಂಟೆಯು ಗೆಜ್ಜೆ
ಸರಪಳಿಯುವ.......

**ವಿಷಯ** : ವೀರಶೈವ ಸಿದ್ಧಾಂತದ ಪ್ರಕಾರ ಭವಿಷ್ಯತ್ತಿನಲ್ಲಿ ಜಗತ್ತಿನ ಆಗುಹೋಗು.

**ವಿಶೇಷ** : ಈ ಕಾಲಜ್ಞಾನದಲ್ಲಿ ಪ್ರಭುದೇವರ ಕಾಲಜ್ಞಾನ, ಪ್ರಭುದೇವರ ಸಂಬೋಧೆಯ ಕಾಲಜ್ಞಾನ, ಚೆನ್ನಬಸವೇಶ್ವರದೇವರು ಉಳುವೆಗೆ ಚಿತ್ತೈಸುವ ಪ್ರಸ್ತಾವದ ವಚನ, ರುದ್ರಮುನಿದೇವರ ಮುಂದೆ.... ಹೇಳಿದ ಕಾಲಜ್ಞಾನ,ಸರ್ವಜ್ಞನ ಕಾಲಜ್ಞಾನದ ವಚನ ಮತ್ತು ಚೆನ್ನಬಸವನ ಕಾಲಜ್ಞಾನಗಳಿವೆ. ಅಲ್ಲದೆ ಸುಭಾಷಿತ ಮುಂತಾದ ಕೃತಿಗಳಿವೆ.

—ಜಿಜಿಎಂ

## 461

| ಕೆ.ಬಿ. ೬೧೨/೬ | **ಕಾಲಜ್ಞಾನ** | ಪದ |
|---|---|---|
| ೭.೨" × ೪.೩" | ಸಿದ್ಧರಾಮ | ಸು. ೧೧೬೦ |
| ೨೨-೨೬ **ಪುಟ** | ೨೪ ಪಂಕ್ತಿ | ೨೬ ಅಕ್ಷರ |

**ಆದಿ** : ಶ್ರೀ|| ಶ್ರೀಗುರು ಬಸವಲಿಂಗವೇ ನಮಃ|| ಶ್ರೀ ಗಣಾಧಿಪತಯೇ ನಮಃ| ತೊಡಮಾಗೆ ಸಿದ್ಧರಾಮಾ ದೇವರು ನಿರೂಪಿಸಿದಾ ಕಾಲಗ್ನ್ಯಾನದ ವಚನಾರ್ತ ಬರೆಯುವದಕ್ಕೆ ಶುಭಮಸ್ತು||
ಕೊಲ್ಲು ಕೊಲೆಂನಾ ಕೊಲೆ ಕೊಲಲ್ಲ ಅಟ್ಟ ಮುಂದಿಂನ್ನು ಬರುತ್ತವೆ ಕೊಲೆಂನಾಕೊಲೆ|| ಅಟ್ಟಹುಯಿಲ್ಲು| ವಾಲಯ ಬರುತಾವೆ ಲೋಲರಿನುಡಿಯಂನೂ ಬೆಸಗೋಳ್ಳಿ ಕೊಲ್ಲು ಕೊಲೆ| ಲೊಲರಿಯ ನುಡಿಯ ಬೆಸಗೊಳ್ಳಿ ಲೋಕಾಕ್ಕೆ ಮೇಲಿಂನೂ ಮುಂದೆ ಬರುತಾವೆ ಕೊಲೆ ಕೊಲ್ಲು ಕೊಲೆ ಕೊಲೆಂನ್ನಾ ||೧||

**ಅಂತ್ಯ** : ಆಡುವಾನನಲ್ಲಾ| ಡಂಗುರಾ| ಶೀವಾನಾಡಿಸುತೈದನೆ ಡಂಗುರಾ| ಕಾಡ ಮೊಗರಾಮಾ ಡಂಗುರಾ| ಮುಂದೆ ನಾಡಿಗೆ ಸಾರೆಂದ್ದ ಡಂಗುರಾ ||೭||
ಶ್ರೀ|| ಶ್ರೀ| ಗುರುಪ್ರಭು ಸಿದ್ಧರಾಮಾ||

**ವಿಷಯ :** ಭವಿಷ್ಯಜ್ಞಾನ.

**ವಿಶೇಷ :** ಅಕ್ಷರಗಳು ಸ್ಫುಟವಾಗಿಲ್ಲ. ಕಾಗದ ಹಳೆಯದು. ಇದರೊಡನೆ ಬಾಲಗ್ರಹ, ಜ್ವರ ಇವುಗಳಿಗೆ ಯಂತ್ರ, ಕಲ್ಯಾಣಮ್ಮನವರ ಕಾಲಜ್ಞಾನ, ಗಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ವಿವೇಕ ಚಿಂತಾಮಣಿ ಪ್ರಶ್ನೆ, ಸಿದ್ಧರಾಮದೇವರ ಕಾಲಜ್ಞಾನ, ಗಣೇಶ್ವರ ಸ್ತುತಿ, ವಿಭೂತಿ ಮತ್ತು ಪಾದೋದಕ ಮಾಹಾತ್ಮ್ಯಗಳವೆ.

—ಎಸ್ ಎನ್ ಕೆ

## 462

| | | |
|---|---|---|
| ಕೆ.ಬಿ. ೬೧೨/೭ | **ಕಾಲಜ್ಞಾನ** | ವಚನ |
| ೭.೨″ × ೪.೩″ | ಸಿದ್ಧಗಿರಿ ಸಿದ್ದಪ್ಪ | ? |
| ೨೭-೩೩ ಪುಟ | ೨೩ ಪಂಕ್ತಿ | ೧೬ ಅಕ್ಷರ |

**ಆದಿ :** ಸಿದ್ದಗಿರಿ ಸಿದ್ದಪ್ಪನವರು ನಿರೂಪಿಸಿದ ಕಾಲಜ್ಞಾನ ವಚನ। ಸಿದ್ದಪ್ಪನವರು ಶ್ರುತಿಯಿಂದಾ। ಮುಂದಿನ ದೀನಾಮಾನಾ। ಬಲ್ಲು ಕೆಟ್ಟುಬರುತ್ತಿದೆ। ನೋಡಿರಂಣ। ಚಂದಾರ್ಥ ಗೋಪುರಾ ಆನಂದಾವಳಿದರು ನೋಡಿರಂಣಾ। ಕಂದಾನದೂರ್ಗವಾ ಕೈಶ್ಯಾರೆ ಮಿಡಿದರು ನೋಡಿರಂಣಾ.

**ಅಂತ್ಯ :** ಮೂಡಾಲು ಬಿಳಿಯಾ ತೇಜಿಯಾ ಚಿಕ್ರಾಜೋಡಾ ರುದ್ರಾಕ್ಷೆ ಕಾವಿಯು ಭಸಿತ್ತ। ಪಾಡುಪಂಥದಾ! ರಾಯಾನ ಕುರುಹು। ಕೊಡುವೊಗೇ ರಾಮ ಸಾರಿದನು ಹ್ಯೊಯಾಲ ಬೊಂಬೆಗಳಾ ||೫||

**ವಿಷಯ :** ಭವಿಷ್ಯ ಫಲ.

**ವಿಶೇಷ :** ಅಸ್ಫುಟಾಕ್ಷರ, ಹಳೆಯ ಕಾಗದ. ಇದರೊಡನೆ ಬಾಲಗ್ರ ಹಜ್ವರ ಇವುಗಳಿಗೆ ಯಂತ್ರ, ಕಲ್ಯಾಣಮ್ಮನವರ ಕಾಲಜ್ಞಾನ, ಗಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ವಿವೇಕಚಿಂತಾಮಣಿ ಪ್ರಶ್ನೆ, ಸಿದ್ಧ ರಾಮದೇವರ ಕಾಲಜ್ಞಾನ, ಗಣೇಶ್ವರ ಸ್ತುತಿ, ವಿಭೂತಿ ಮತ್ತು ಪಾದೋ ದಕ ಮಾಹಾತ್ಮ್ಯಗಳಿವೆ.

—ಎಸ್ ಎನ್ ಕೆ

## 463

| | | |
|---|---|---|
| ಕೆ. ೯೧೪/೧ | **ಕಾಲಜ್ಞಾನಂ** | ವಚನ, ಪದ್ಯ |
| ೬″ × ೧.೩″ | ? | ? |
| ೯೪-೯೯ ಪತ್ರ | ೬ ಪಂಕ್ತಿ | ೩೦ ಅಕ್ಷರ |

**ಆದಿ :** ಶ್ರೀ ವೀತರಾಗಾಯ ನಮಃ
ವರ್ಧಮಾನಂ ನಮಸ್ಕೃತ್ಯಂ

ಸುಪಾರಿತಂ ಸುರಪೂಜಿತಂ
ಕಾಲಜ್ಞಾನಂ ಪ್ರವಕ್ಷ್ಯಾಮಿ
ಲೋಕಾನಾಂ ಹಿತಕಾಮ್ಯಯಂ॥

**ಅಂತ್ಯ :** ಸರ್ವತ್ಯಾಜ್ಯೋ ಬಷುಸ್ವರೈಃ
ಮುನಿನಾಥೇನ ಸಾರೇಣ
ವ್ಯೋಮ ಚೂರ್ಣಯುರೇನಚ
ನಸ್ಯಂ ವಾತ ವಿಕಾರೇಷು
ಸನ್ನಿ ಪಾತಜ್ವರೇಶುಚಃ॥

**ವಿಷಯ :** ಕಾಲಜ್ಞಾನ.

**ವಿಶೇಷ :** ಗ್ರಂಥ ಪೂರ್ಣವಾಗಿದೆ. ಅಕ್ಷರ ಚೆನ್ನಾಗಿದೆ. ಶುದ್ಧ ಸಾಮಾನ್ಯವಾಗಿದೆ.

—ಎಂಸಿಪಿ

## 464

ಕೆ. ೯೩೭/೭ **ಕಾಲಜ್ಞಾನ** ಗದ್ಯ
೮.೫″ × ೧.೮″ ? ?
೧೦-೧೩ ಪತ್ರ ೮ ಪಂಕ್ತಿ ३೮ ಅಕ್ಷರ

**ಆದಿ :** ಕೈಲಾಸದಿಂದಾ ಬಂದ ಕಾಲಜ್ಞಾನಾ॥ ವಿರೋಧಿ ಸಂವತ್ಸರದ ಭಾದ್ರಪದ ಮಾಸದ ಶುಕ್ಲಪಕ್ಷದ ದ್ವಾದಶ ಹಂನೆರಡನೆಯ ದಿನದಲ್ಲಿ ಮೇಘಘರ್ಜನಿಯೋಪಾದಿಯಲ್ಲಿ ಘುಡಿಘುಡಿಸುತ್ತ ತ್ರಿಪುರಾಂತಕ ದೇವರ ಗುಡಿಯ ಮುಂದೆ ಬಿದ್ದ ಲೇಖನವು ಪ್ರಾಜ್ಞಪುರುಷರು ಕಂಡು ಅದನ ಆ ಲೇಖನವನು ಮಾಡಿ ಬುದ್ಧಿವಂತರು ಆ ಲೇಖನವನುಳ್ಳ ಪಟ್ಟಣಕ್ಕೆ ಕಳಿಪಿಸಿ ಕುಡುವದು ಯಿದು ಲೋಕಹಿತವೆಂದು ನಂಬುವದು॥ XXX ಮುತ್ತಂ॥ ಭರತಕಾಂಡದ ಶಿವಭಕ್ತರುಗಳಿಗೆ ಪೃತ್ವೀಪತಿಗಳಿಗೆ ತನ್ಮಂತ್ರಿಗಳಿಗೆ ಭಾಗಸ್ಥರುಗಳಿಗೆ ಪ್ರಭುಗಳಿಗೆ ಹರನಿರೂಪಿತ ವಾಕ್ಯವು। ಸಾಧಾರಣ ನಾಮ ಸಂವತ್ಸರದ ಜೇಷ್ಟಮಾಸದ ಶುಕ್ಲಪಕ್ಷದ ಪಂಚಮೀ ದಿನದಲ್ಲಿ। ಉದಿಚಿಯೆಂಬ ಮರಣ। ಶಕ್ತಿ ಹುಟ್ಟಿ ತಂನ ಕೂಡೆ ಒಂಭತ್ತು ಲಕ್ಷ ಭೂತಗಳಾ ಕೂಡಿಕೊಂಡು। ಲೋಕವ ಕೊಲುವೆನೆಂದು। ಆ ಲೋಕದವರು ಯಿಶ್ವರ ಧ್ಯಾನದಲ್ಲಿ ತತ್ಪರರಾಗಲು

**ಅಂತ್ಯ :** ಸಹ ಆನಂದನಾಮ ಸಂವತ್ಸರದ ಫಾಲ್ಗುಣ ಮಾಸಕ್ಕೆ ಯಿಾ ಭಾಂಡಕ್ಕೆ ಬಂದು ಆಮೇಲೆ ಗರ್ಭವಾಸಿಗಳಾಗಿ ಮೂರು ವರುಷವಿದ್ದು ಆಮೇಲೆ

ಲೋಕಪ್ರಸಿದ್ಧಾರಹರು। ಯಿದು ನಂದೀಶ್ವರಸ್ವಾಮಿಂಗಳ ನಿರೂಪವು।
(೧೬ನೆಯ ಪತ್ರದಿಂದ)XXX
X X X
ಸಕಲ ಸದ್ಭಕ್ತ ಮಹೇಶ್ವರರು ಪ್ರಮಥಗಣಂಗಳಿಗೆ ಭೃತ್ಯರಾದಂತವರು ಯಿಾ ಗಣಂಗಳ ಪ್ರಸಾದ ವಾಕ್ಯವನು ನಂಬಿ ಬರದು ಮುಂದಕೆ ಮುಂ ತೊಂದು ಪ್ರತಿಯನು ಸುಖದಲ್ಲಿ ಗಣಂಗಳ ಪಾದವ ನಂಬಿರುವದು। ಯಿಂತೀ ಕೈಲಾಸ ಕಾಲಜ್ಞಾನ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ತ್ರಿಪುರಾಂತಕದೇವರ ಗುಡಿಯ ಮುಂದೆ ಬಿದ್ದಿದ್ದ ಕಾಲಜ್ಞಾನದ ವಿವರ.

**ವಿಶೇಷ :** ಈ ಕಾಲಜ್ಞಾನವನ್ನು ಬರೆದವರ ವಿವರವಿಲ್ಲ. ಬರಹ ಚೆನ್ನಾಗಿದ್ದು ಸ್ಫುಟವಾಗಿದೆ. ಇದೇ ಕಟ್ಟಿನಲ್ಲಿ ವಟಪುರ ಸಿದ್ಧಾಂತ ಸ್ತೋತ್ರ, ಗಿರಿಜಾಕಲ್ಯಾಣ ದೊಳಗಣ ಪದ ಮೊದಲಾದ ಒಟ್ಟು ಒಂಬತ್ತು ಕೃತಿಗಳಿವೆ.

—ಕೆಆರ್‌ಎಸ್

## 465

| | | |
|---|---|---|
| ಕೆ.ಎ. ೫೬೮/೨೨ | **ಕಾಲಜ್ಞಾನ** | ಗದ್ಯ |
| ೧೨" × ೯.೮" | ? | ? |
| ೧೭೧-೧೭೪ ಪುಟ | ೨೪ ಪಂಕ್ತಿ | ೨೨ ಅಕ್ಷರ |

**ಆದಿ :** ಶ್ರೀಗುರ್ರು ಬಸವಲಿಂಗಾಯ ನಮಃ॥
ಕೈಲಾಸದಿಂದ ಬಂದ ಕಾಲಜ್ಞಾನ ವಿರೋಧಿವಿಕೃತ ಸಂವತ್ಸರದ ಭಾದ್ರಪದ ಮಾಸದ ಶುಕ್ಲಪಕ್ಷ ದ್ವಾದಶ ಹನ್ನೆರಡನೆಯ ದಿನದಲ್ಲಿ ಮೇಘಘರ್ಜನಿ ಯೋಪಾದಿಯಲ್ಲಿ ಘುಡಿಘೂಸುತ್ತ ತ್ರಿಪುರಾಂತಕದೇವರ ಗುಡಿಯ ಮುಂದೆ ಬಿದ್ದ ಲೇಖನವನು ಪ್ರಾಜ್ಞಪುರುಷರು ಕಂಡು ಅದನ ಆ ಲೇಖನವನು ಮಾಡಿ ಬುದ್ಧಿವಂತರು ಆ ಲೇಖನವನ್ನುಳ್ಳ ಪಟ್ಟಣಕ್ಕೆ ಕಳುವಿಸಿ ಕುಡವದು ಇದು ಲೋಕಹಿತವೆಂದು ನಂಬುವದು

**ಅಂತ್ಯ :** ಈ ಗಣಂಗಳ ಪ್ರಸಾದ ವಾಕ್ಯವನು ನಂಬಿ ಬರದು ಮುಂದಕೆ ಮತ್ತೊಂದು ಪ್ರತಿಯನು ಸುಖದಲ್ಲಿ ಗಣಂಗಳ ಪ್ರಸಾದವಾಕ್ಯವನು ನಂಬಿ ಬರದು ಮುಂದಕೆ ಮತ್ತೊಂದು ಪ್ರತಿಯನು ಸುಖದಲ್ಲಿ ಗಣಂಗಳ ಪಾದವ ನಂಬಿರುವದು। ಯಿಂತಿ, ಕೈಲಾಸ ಕಾಲಜ್ಞಾನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.
ಕಾಲಜ್ಞಾನವೆಂಬ ಗ್ರಂಥ ಸಂಪೂರ್ಣ.

**ವಿಷಯ :** ವೀರಶೈವ ಸಿದ್ಧಾಂತದ ಪ್ರಕಾರ ಭವಿಷ್ಯತ್ಸೂಚನೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

## 466

ಕೆ.ಬಿ. ೬೯೪/೧೧ **ಕಾಲಜ್ಞಾನ** ಹಾಡು
೬.೫" × ೮.೩" ? ?
೧೯೭-೨೦೧ ಪತ್ರ ೧೭ ಪಂಕ್ತಿ ೨೩ ಅಕ್ಷರ

**ಆದಿ :** ರಾಗ। ಭೈರವಿ। ಆದಿತಾಳ॥
ಕೇಳಿ ಕಾಲಜ್ಞಾನವ ಜನಗಳಿರ ಹೇಳುತಿಹುದೀ ಲೋಕಕೆ।
ಲೀಲೆಯಿಂ ಮಹಾತ್ಮರು ತೋರ್ಪಾಗ ಬಾಳ ಚೋದ್ಯಗಳೊಪ್ಪವು ॥ಪ॥
ಸುಳ್ಳು ಸುಳ್ಳೆಂಬುತಾರೆ ಕಾಲಜ್ಞಾನ ಸುಳ್ಳಾಗ ಬಲ್ಲದೇನು।
ಕಲ್ಯಾಣದವನು ಹೇಳಿದ ಮಾತು ಸಟೆಯಲ್ಲ ಬಲ್ಲವರೆ ಬಲ್ಲರಂಣ್ಣ॥
ಕಾಲಜ್ಞಾನ ಬಲ್ಲವರೆ ಬಲ್ಲರಂಣ್ಣಾ ॥೫॥

**ಅಂತ್ಯ :** ಬ್ರಹ್ಮವೇದಾಗಮ ಶಾಸ್ತ್ರ ಪುರಾಣಾದಿಗಳಿಗೆ ನಿಮ್ಮ ಮಂತ್ರ ಸಾರಾಂಶ ಪೇಳಿಹಿರೆಂದೇಳಿ। ವಿಷ್ಣು ಅನೇಕ ಶಕ್ತಿಯರಿಗೆ ದುರ್ಜಾಡ್ಯ ದುರ್ವರ್ಣ ವುಂಟುಮಾಡಿರೆಂದೇಳಲು। ರುದ್ರಮೂರ್ತಿ। ಎಪ್ಪತ್ತೇಳು ಕೋಟಿ ಯನುಧೂತರು। XXX॥ ನಾರದಮುನಿ ಸೂತಪುರಾಣೀಕಗೆ ನಿರೂಪಿಸಿದ ನೆಂಬಲ್ಲಿಗೆ ಮುಂಡೆ॥ ರುದ್ರಮುನಿ। ಬಸವಣ್ಣ। ನೀಲಮ್ಮನ ಕಾಲಜ್ಞಾನ ಮಹಿಮೆ ಪದ್ಯ ಹೇಳಿ॥

**ವಿಷಯ :** ಕಾಲಜ್ಞಾನ ವಿಚಾರ.

**ವಿಶೇಷ :** ಪ್ರತಿ ಚೆನ್ನಾಗಿದೆ. ಗ್ರಂಥ ಸಮಗ್ರವಾಗಿದೆ. ಬರವಣಿಗೆ ಸುಂದರವಾಗಿದೆ. ಇದರೊಂದಿಗೆ ರುದ್ರಮುನಿ ಪದ್ಯ ಮುಂತಾದ ಇತರ ಕೃತಿಗಳಿವೆ.

—ಎಂಪಿಎಂ

## 467

ಕೆ.ಎ. ೪೮೦/೩ **ಕಾಲಜ್ಞಾನದ ಸರ್ವಜ್ಞ ತ್ರಿವಿಧಿ** ತ್ರಿವಿಧಿ, ಹಾಡು
೧೧.೬" × ೯.೨" ಸರ್ವಜ್ಞ, ಎಮ್. ಬಸವಣ್ಣ ಇತರರು ?
೩೦-೬೪ ಪತ್ರ ೨೦ ಪಂಕ್ತಿ ೨೭ ಅಕ್ಷರ

**ಆದಿ :** ವೋರ್ವನಲ್ಲದೆ ಜಗಕೆ ಈರ್ವರುಂಟೆ ಮರುಳೆ
ಈರ್ವರು ಮೂರ್ವರು ಯೆನಬೇಡ ಲೋಕಕ್ಕೆ
ವೋರ್ವ ಕಾಣಯ್ಯ ಸರ್ವಜ್ಞ ॥೧॥

ಸರ್ವಜ್ಞನೆಂಬುವನು ಗರ್ವದಿಂದಾವನೆ
ಸರ್ವರೊಳಾಡಿ ಕಲಿ ಕಲಿತು ವಿದ್ಯದ
ಪರ್ವನಾದ ಸರ್ವಜ್ಞ XXX ||೨||
ವಂದೆ ವರುಷದಭ್ಯಂತರ। ಮುಂದೆ ಪ್ರಮಾದೀತು (ಚ)
ದೀಮಧ್ಯದೇಶ ಬೆಂದು ಹೋಗುತಲಿದೆ ಸಂದೇಹವಿಲ್ಲ ||ಪಲ್ಲ||
ಶಾಲಿವಾಹನಶಕ ಸಾಸಿರದ್ವೆನೂರತೊಂಭತ್ತೇಳರವುಂದೆ ಪ್ರಮೋದೂತದಿ
ಕೊಳು(ಳ್ಳಿ) ಹೋಗುವದು ವಿಜಯಾಪುರ ಪಟ್ಟಣ ಗೋಲಕೊಂಡೆಯು
ದೇಶ ಮೊದಲಾಗಿ (೩೮ ನೆಯ ಪುಟದಿಂದ) ||೧||

ಅಂತ್ಯ : ನಾಗಪುರಿವಾಸ ಚೆನ್ನಿಗರಾಯನಾಶ್ರಯದಿ
ಭೋಗದೊಳು ನೆಲಸಿರುವ....ರಿಗೆ ಯಿಷ್ಟಾರ್ಥಗಳ
ಆಗಲೀಗಲಿ ಯೆನದೆ ಕೊಡುವ ತ್ರೈಲೋಕ್ಯಪತಿ।
ಶ್ರೀ ಗಣಾಧಿಪತಿ ನೆನುಗೆ ಸಿದ್ಧಿದಾಯಕನೆ ||೫||
(ಇನ್ನು ಮುಂದೆ ಎರಡು ವೋಲೆ ಅ ಸಿಥಿಲ ವೈದ್ಯ ವಿಷಯ) XXX
ಗುಳಿಗೆಕಟ್ಟೆ ಶೆಕ್ಯೋಳವು ಇದರ....ತುಕ್ಷಯ। ಪಾಂಡುರೋಗದ ಮೂಲವ
ನಿ। ಅರೋ ...ಪರಿಣಮು ಸು। ಮಧುರಗ್ರಾಹಿ. ರುದ್ರ....

ವಿಷಯ : ಕಾಲಜ್ಞಾನದ ವಿಚಾರ.

ವಿಶೇಷ : ಅಲ್ಲಲ್ಲಿ ಅಕ್ಷರಗಳೂ, ಪಂಕ್ತಿಗಳೂ ಲೋಪವಾಗಿವೆ. ಇದೇ ಗ್ರಂಥದಲ್ಲಿ ಇನ್ನೆರಡು ಕಾಲಜ್ಞಾನದ ಹಾಡುಗಳಿವೆ. ಮದರಾಸು ಪ್ರಾಚ್ಯಕೋಶಾಗಾರದಲ್ಲಿದ್ದ ನಂ. ಡಿ. 1504 ರಿಂದ 13.11–1934 ರಲ್ಲಿ ನಕಲು ಮಾಡಿಸಿದೆ ಎಂದು ಅಂತ್ಯದಲ್ಲಿ ಬರೆದಿದೆ.

—ಕೆಆರ್ಎಸ್

## 468

| ಕೆ. ೮೨೨ | **ಕಾವ್ಯಸಾರ** | ಕಂದ, ವೃತ್ತ |
|---|---|---|
| ೧೬.೪" × ೧.೮" | ಮಲ್ಲಿಕಾರ್ಜುನ | ೧೨೬೦ |
| ೧-೮೮ ಪತ್ರ | ೭ ಪಂಕ್ತಿ | ೬೮ ಅಕ್ಷರ |

ಆದಿ : ಶ್ರೀ ರಾಮಾನಟೆ ಕೌಸ್ತುಭದ್ಯುತಿ....
..........................................
..........................................
ಭಾರಚ್ಛೇದ ವಿನೋದ ಕೃಷ್ಣನೆ ಮ....ಗಾನಂದ ಸಂದೋಹಮುಂXX ||೧||
ಪರಮ ಬ್ರಹ್ಮ ಶರೀರಯುಟ ಜನತಾಂತದೃಷ್ಟಿ ಕೈವಲ್ಯ ಬೋ
ಧರಮಾ ಮೌಕ್ತಿಕಹಾರಯಷ್ಟಿ ಕವಿತಾವಲ್ಲಿ ಸುಧಾವೃಷ್ಟಿ ಸ

ರ್ಗರಸೋತ್ಪಾದನ ವಿಸೃಷ್ಟಿ ಬುಧಹರ್ಷೋತ್ಸೃಷ್ಟಿ ಸರ್ವಾಂಗ ಸೌಂ
ದರಿ ವಿದ್ಯಾನಟೆ ನಾಟಕಂನರಿಗೆ ಮತ್ಕಾವ್ಯಸ್ಥಲೀರಂಗದೊಳ್||
ರಾಮಚರಿತೆ ||೧೪||

**ಅಂತ್ಯ :** ಸೂಸುವ ಕಂಣಕೆಂಪು ಬಾಸುಳ ಮೈಜಡ ಬಿಟ್ಟು ಮಂಡೆ ಜೆ
ನ್ನೇಸಳು ತೋಳಕಚ್ಚು ಕಿಱು ಲಜ್ಜೆ ತೊಡಲ್ನುಡಿದೊ....
.................................................. ಜಪ್ಪ ಸಂ
ತೋಷದ ಲೇಸು ಬಾಸಣಿಸಿತೋ ಕವಿರಾಜ ಕಲಾವಿಲಾಸನಾ ||೬||

ಕಾವ್ಯಸಾರ ಸಮಾಪ್ತ|| ಶ್ರೀ||
ವಿಜೆಯ ಸಂವತ್ಸರದ ಭಾದ್ರಪದ ಬ ೩ ಲೂ ಶ್ರೀಮದಭಿನವವಾದಿ ವಿದ್ಯಾ
ನಂದ ಸ್ವಾಮಿಗಳು ಬಲ್ಲಾತಕಿ ಪುರವರಾಧೀಶ್ವರ....ಶ್ರೀ

**ವಿಷಯ :** ಹಳಗನ್ನಡ ಕಾವ್ಯಗಳಲ್ಲಿರುವ ಹದಿನೆಂಟು ವಿಧವಾದ ವರ್ಣನೆಯ ಪದ್ಯಗಳು.

**ವಿಶೇಷ :** ಸಮಗ್ರ, ಆದರೆ ೧ ಮತ್ತು ೮೮ ನೆಯ ಪತ್ರಗಳ ಅರ್ಧರ್ಧ ಭಾಗಗಳು ಮುರಿದು ಲುಪ್ತವಾಗಿವೆ. ಬರಹ ಚೆನ್ನಾಗಿದೆ. ಶಕಟರೇಫವನ್ನು ಬಳಸಿದೆ.

—ಕೆಆರ್‌ಎಸ್

## 469

ಕೆ. ೧೧೦೧ **ಕಾವ್ಯಸಾರ** ವೃತ್ತ, ಕಂದ
೧೦.೮" × ೨" ಮಲ್ಲಿಕಾರ್ಜುನ ೧೨೬೦
೧-೨೧೯ ಪತ್ರ ೧೨ ಪಂಕ್ತಿ ೬೨ ಅಕ್ಷರ

**ಆದಿ :** ... ಅವಿಘ್ನಮಸ್ತು XX
....ವಂದಿತ ಪದಾಂಬುಜನಾನತ ಹೃತ್ಪಯೋಜ ಮಿ
ತ್ರೋದಯನತ್ಯಸೂನ ಸಕಲಾಗಮಶಾಸ್ತ್ರ ವಿರಾಜತೇಜ ಬೋ
ಧೋದಯನುನ್ನತೋನ್ನ........ ಸುಧಾಬ್ಧಿ ಪೂರ್ಣಚಂ
ದ್ರೋದಯನಾದನಾದಿ ಪರಮೇಶ್ವರನೀಗೆಮಗಿಷ್ಟಸಿದ್ಧಿಯಂ ||೧||

**ಅಂತ್ಯ :** ಅವರೋಧ ಪ್ರಮಥಾ ಕದಂಬ ವಿಗಳಕ್ಕಾಸಾರಸಾರಂ ಮೃಗೋ
ದ್ಭವಕಲ್ಕಂ ಘನಸಾರ ರೇಣು ಪಟಲಂ ಶ್ರೀಖಂಡ ಜಂಬಾಳಮೆಂ
ಬವರಿಂ ತಂತ್ರತರಂಗ ಮಾಲೆಯೆಡೆಯಿಂದರ್ಪಂಗೆ ತೀವಿಟ್ಟು ಬ
ಣ್ಣವುರಂ ತಾನೆನೆ ಕಣ್ಣೆಮಾಡಿದುದು ಕಾಸಾರಂ ಸುಖಸಾರಮಂ ||೧೫||

**ವಿಷಯ :** ಹಳಗನ್ನಡ ಕಾವ್ಯಗಳಲ್ಲಿರುವ ಹದಿನೆಂಟುವಿಧವಾದ ವರ್ಣನೆಯ ಪದ್ಯಗಳು.

**ವಿಶೇಷ :** ಅಸಮಗ್ರ. ೧೬ ನೆಯ ಆಶ್ವಾಸ ೧೫ ನೆಯ ಪದ್ಯದವರೆಗೆ ಕೃತಿ ಇದೆ. ಇದರ ನಂತರ ಎರಡು ಪತ್ರಗಳು (೧೫–೧೬) ಇವೆ. ಇದರೊಡನೆ ೧–೧೪ ಪತ್ರಗಳಿರುವ ಶಿವಾಧಿಕ್ಯರತ್ನಾವಳಿ ಎಂಬ ಸಂಸ್ಕೃತ ಕೃತಿ ಇದೆ.

—ಜಿಜಿಎಂ.

## 470

| ಕೆ. ೧೪೯೦ | **ಕಾವ್ಯಾವಲೋಕನ** | ಕಂದ,ವೃತ್ತ |
|---|---|---|
| ೧೫″ × ೨.೧″ | ನಾಗವರ್ಮ | ೧೦೪೨ |
| ೧-೩೯ ಪತ್ರ | ೧೦ ಪಂಕ್ತಿ | ೭೨ ಅಕ್ಷರ |

**ಆದಿ :** ಶ್ರೀ ಗುರುಭ್ಯೋ ನಮಃ॥
ಶ್ರೀ ವರ್ದ್ಧಮಾನನಾನತ
ದೇವಾಧಿಪ ಮಕುಟಕೋಟಿ ಘಟ್ಟಿತ ಚರಣಂ
ಕೇವಲ ವಿಬೋಧಲೋಚನ
ನಾವಗಮೊಲ್ದೀಗೆ ಕಾವ್ಯದೊಳ್ಪವಃಗಜಂಪಂ॥ XXX
ಸಕಲ ಬುಧಸಮಿತಿ ನೆಱೆ ಕೊಂ
ಡು ಕೊನೆದು ಸಲವಿಂದೆ ಕೀರ್ತ್ತಿಸುತ್ತಿರೆ ಮುದದಿಂ
ಸುಕರಮುದಾಗಿರೆ ಕರ್ನ್ನಾ
ಟಕದಿಂ ಕಾವ್ಯವಲೋಕನಮಂ ವಿರಚಿಸುವೆಂ॥

**ಅಂತ್ಯ :** ಸಕಲಕಲಾವಿದಂ ಮದವಿದೂರನುದಾರನಮತ್ಸರಂ ಗುಣಾ
ಧಿಕನಭಿಮಾನ ತುಂಗಮನುದಾತ್ತ ಯಶಂ ವಿಬುಧೈಕ ವತ್ಸಲಂ
ಸುಕವಿ ಸರಸ್ವತಿ ವದನ ಮಂ........ಣನೆಂದು ನಾಡೆ ಕೀ
ರ್ತ್ತಿಕುಮನುರಾಗದಿಂ ವಸುಮತೀವಳಯಂ ಕವಿ ನಾಗವರ್ಮ್ಮನಂ॥ XXX
ಛಂದೋವಿಚ್ಛಿತ್ತಿಯಲಂಕೃತಿ
ಸಂದಭಿದಾನಕೋಶಮೆಂಬಿವು ವಾಕ್‌ಶ್ರೀ
ಸುಂದರಿಗೆ ರತ್ನ ಮಂಡನ
ದಂದದೊಳಿರ್ದ್ದಪವು ನಾಗವರ್ಮನ ಕೃತಿಗಳ್॥

ಗದ್ಯ॥ ಇದು ಸಕಲ ಸುಕವಿಜನ ಮನಸ್ಸರೋಜಿನೀರಾಜಹಂಸಾಯ ಮಾನಾ ನೂನ ಕವಿತಾಗುಣೋದಯ ಶ್ರೀಮನ್ನಾಗವರ್ಮ್ಮ ಪ್ರಣೀತಮಪ್ಪ ಕಾವ್ಯಾವಲೋಕನದೊಳು ಕವಿಸಮಯ ವರ್ನ್ನನಂ ಪಂಚಮಾಧಿಕರಣಂ
ಶ್ರೀ ವರ್ದ್ಧಮಾನನಾನತ
ದೇವಾಧಿಪ ಮಕುಟ ಕೋಟಿಘಟಿತ ಚರಣಂ

ಕೇವ.... ಬೋಧಲೋಚನ
ನಾಸಗವೊಲ್ದಿಗೆ ಕಾವ್ಯದೊಳ್ನಮಗಜಸಂ

**ವಿಷಯ :** ಕಾವ್ಯದ ಅಲಂಕಾರಗಳ ಲಕ್ಷಣ ಮತ್ತು ಲಕ್ಷ್ಯ.

**ವಿಶೇಷ :** ಸಮಗ್ರ. ಆದರೆ ೯, ೩೭, ೩೮ ನೆಯ ಕ್ರಮಾಂಕಗಳ ಪತ್ರಗಳು ಸ್ವಲ್ಪ ಭಾಗ ಮುರಿದು ಲುಪ್ತವಾಗಿದೆ. ಎಲ್ಲಾ ಗರಿಗಳ ಅಂಚುಮುರಿದಿದೆ. ಶಕಟರೇಫವಿದೆ.

—ಕೆಆರ್ಎಸ್

## 471

ಕೆ.ಬಿ. ೭೩೭ | **ಕಾವ್ಯಾವಲೋಕನ** | ಕಂದ,ವೃತ್ತ

೬.೫" × ೯.೫" | ನಾಗವರ್ಮ | ಸು. ೧೮೪೨

೧-೫೪ ಪತ್ರ | ೧೩ ಪಂಕ್ತಿ | ೨೨ ಅಕ್ಷರ

**ಆದಿ :** ಶ್ರೀ ವೀರಭದ್ರಾಯ ನಮಃ॥ ಕಾವ್ಯಾವಲೋಕನಂ॥
ಶ್ರೀ ವಿಶ್ವೇಶ್ವರನಾನತ
ದೆವಾದಿಪ ಮಕುಟ ಕೋಟಿ ವಿಘಟಿತ ಚರಣಂ।
ಕೇವಲ ವಿಬೋಧಲೋಚನ
ನಾವನವೊಪ್ಪುಗೆ ಕಾವ್ಯದೊಳ್ನಮಗನವರತಂ ॥೧॥

X X X

ಸಕಲ ಬುಧ ಸಮಿತಿ ನೆರೆಕೊಂ
ಡು ಕೊನೆದು ನಲವಿಂದ ಕೀರ್ತಿಸುತ್ತಿರೆ ಮುದದಿಂ॥
ಸುಕರಮುದಾಗಿರೆ ಕರ್ನಾಟಕದಿಂ
ಕಾವ್ಯಾವಲೋಕವಮಂ ವಿರಚಿಸುವೆಂ ॥೩॥

X X X

ಸಮುಚಿತ ಶಬ್ದ ಸ್ಮೃತಿ ಕಾ
ವ್ಯಮಲ ವ್ಯಾವೃತ್ತಿಗುಣ ವಿವೇಕಂ ರೀತಿ
ಕ್ರಮ ರಸನಿರೂಪಣಂ ಕವಿ
ಸಮಯದಿವಿಂತೈದುಮಿವರೊಳಧಿಕರಣಂಗಳ್ ॥೫॥

**ಅಂತ್ಯ :** ಸೂ॥ ಪ್ರತಿ ಗೂಢಾರ್ಥ ಮಗೂಢಂ
ಪ್ರತಿತ ಸುಭಂಗಂ ಪ್ರಸಂನಮೆನೆ ಪಡುಗುಮಪಾ
ಕೃತಿ ನಿಷ್ಠುರಾಕ್ಷರಂ ಲಾ
ಲಿತ ಪದಪ್ರಕಾರಮದು ಸುಕುಮಾರಂ ॥೧೫॥

**ವಿಷಯ :** ಕಾವ್ಯದ ಅಲಂಕಾರಗಳ ಲಕ್ಷಣ ಮತ್ತು ಲಕ್ಷ್ಯ.

**ವಿಶೇಷ :** ಅಸಮಗ್ರ ಕೃತಿ. ಸುಂದರ ಬರವಣಿಗೆ.

—ಎಂಪಿಎಂ

## 472

ಕೆ. ೧೧೫೭/೧೨ | **ಕಾಶೀ ಅಷ್ಟಕಾ** | ವೃತ್ತ
೧೪.೩" × ೧.೮" | ? | ?
೬೫-೬೭ ಪತ್ರ | ೮ ಪಂಕ್ತಿ | ೫೨ ಅಕ್ಷರ

**ಆದಿ :** ಶ್ರೀಗುರುವೇ ಗತಿ ಕಾಸೀ ಅಷ್ಟಕಾ॥
ಭಸ್ಮ ಲೇಪನಾದಿ ವಿಶ್ವರೂಪ ಶಂಕರಂ ನಮೋ
ಭಾನುಕೋಟಿತೇಜ ಸೋಮಜೂಟಗಂಗ ವಾಸುಕೀ
ಮೋದತೋಕ ರಕ್ಷಣಾಭಿದಾನ ರುದ್ರನಾ ತುಜೇ
ಭಾಳಲೋಚನಂ ಕಪಾಲಹಸ್ತದಂ ನಮಸ್ತುತೇ ॥೧॥

**ಅಂತ್ಯ :** ಇಂದುದೇವ ಶಿಂಧುಜೂಟನದ್ರಿಜಾ ಸಮನ್ವಿತಂ
ನಂದಿವಾಹನಗ್ನಿಲೋಚನಂ ಫಣೀಂದ್ರ ಭೂಷಣಂ
ಕುಂದಚಂದನರ್ಜುನಂ ಕನುಗ್ರನೀಲಕಂಧರಂ
ಚಂದದಿಂ ಪ್ರಸನ್ನನಾಗಿ ಮುಂದೆ ನಿಂದನೀಶ್ವರಂ ॥೯॥
ಕಾಶ್ಯಾಷ್ಟಕಮಿದಂ ಪುಣ್ಯಾಂ ಯಃ ಪಟೇ ಶಿವಸಂನ್ನಿದಂ
ಶಿವಲೋಕಸ್ಯ ಮವಪ್ನೋತಿ ಶಿವನ ಸಹಮೋಧತೇ ॥೧॥

**ವಿಷಯ :** ಈಶ್ವರಸ್ತುತಿ.

**ವಿಶೇಷ :** ಸಮಗ್ರ. ಶುದ್ಧವಾಗಿದೆ. ಇದರ ಜೊತೆಗೆ ಗುರು ಭಕ್ತಾಂಡಾರಿ ಚರಿತೆ, ಕಪೋತ ಚರಿತೆ ಮುಂತಾದ ೧೩ ಕೃತಿಗಳಿವೆ.

—ಜಿಜಿಎಂ

## 473

ಕೆ. ೧೦೩೪ | **ಕಾಶೀಮಹಿಮಾರ್ಥ ದರ್ಪಣ** | ಗದ್ಯ
೧೫.೩" × ೨" | ಕಳಲೆ ನಂಜರಾಜ | ೧೭೪೦
೧-೧೮೫ ಪತ್ರ | ೧೦ ಪಂಕ್ತಿ | ೮೫ ಅಕ್ಷರ

**ಆದಿ :** ಶ್ರೀ ಕಾಶಿವಿಶ್ವನಾಥಾಯ ನಮಃ॥ XX॥ ಕಾಶಿಯ ಕಾಂಡXX ಆವುದಾನೊಂದು ಕಾಶಿಪಟ್ಟಣ ಭೂಮಿಯಲ್ಲಿ ಯಿದ್ದಂಥಾದಾದರು ಅಲ್ಲಿ ವಾಸವಂ ಮಾಡಿದವರಿಗೆ ಪುನರುತ್ಪತ್ತಿಯಿಲ್ಲದ ಕಾರಣ ತಾ ಭೂಮಿಯಲ್ಲಿ ಸ್ವರ್ಗದಲ್ಲಿ ಇದ್ದವರ್ಗೆ ಪುನರಾವೃತ್ತಿಯುಂಟು ತಂನಲ್ಲಿ ಯಿದ್ದವರ್ಗೆ ಪುನ ರಾವೃತ್ತಿ ಯಿಲ್ಲವಾದ ಕಾರಣ ತಾ ಸ್ವರ್ಗಕಿಂದಲು ಕೆಳಗಾಗಿ ಯಿದ್ದುದಾ ದರು ಮೇಲಾದುದು XXX

**ಅಂತ್ಯ :** ಸ್ಕಂದಪುರಾಣೋಕ್ತ ಕಾಶಿಮಹಿಮಾರ್ತ್ಥ ದರ್ಪಣದಲ್ಲಿ ಕಥಾಸಂಗ್ರಹವಂ ಪೇಳ್ದುದು ನೂಜನೆಯ ಅಧ್ಯಾಯ ಮಂಗಳ ಮಹಾ ಶ್ರೀ ಶ್ರೀXX ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೬೮೯ ನೆಯ ಸರ್ವಜಿತು ನಾಮ ಸಂವತ್ಸರದ ಮಾಘ ಶುದ್ಧ ೩ ತದಿಗೆಯು ಶುಕ್ರವಾರ ಯಿಾ ಶುಭದಿವಸದಲ್ಲಿ ಬ್ರಾಹ್ಮಣ ವಂಶೋದ್ಭವನಾದ ಮದ್ದೂರ ಪುಟ್ಟಯ ನೆಂಬ ವಿಪ್ರನೂ XXX ಕುಲಾಲನ ಕುಲಸಮುದ್ಭೂತನಾದ ಕೆಂಪ ಚೌಡಯ್ಯನ ಪುತ್ರನಾದ ಚೌಡಂಣನವರಿಗೆ ಬಱೆದು ಸಂಪೂರ್ಣಸಿದ ಕಾಶಿಮಹಿಮಾ ರಚನಾತ್ಮಕ ಕಾಶಿಕಾಂಡಾಭಿಧಾನ ಗ್ರಂಥದ ಪುಸ್ತಕಕ್ಕೆ ಮಂಗಲಮಸ್ತು XXX ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ಕಾಶಿಕ್ಷೇತ್ರದ ಮಹಿಮೆ.

**ವಿಶೇಷ :** ಗ್ರಂಥ ಸಮಗ್ರವಾಗಿದೆ. ಮೊದಲಿನಲ್ಲಿ ಒಂದು ಪತ್ರದಲ್ಲಿ ವಿಷಯ ಸೂಚಿ ಯಿದೆ. ಅದರ ಪ್ರಕಾರ ಈ ಕೃತಿಯು ಗ್ರಂಥ ಪ್ರಮಾಣ ಹತ್ತುಸಾವಿರ.

—ಜಿಜಿಎಂ

## 474

ಕೆ. ೧೬೮೦ **ಕಾಶೀಮಹಿಮಾರ್ಥ ದರ್ಪಣ** ಗದ್ಯ

೧೯" × ೨.೧" ಕಳಲೆ ನಂಜರಾಜ ೧೭೪೦

೧-೨೧೫ ಪತ್ರ ೧೦ ಪಂಕ್ತಿ ೭೪ ಅಕ್ಷರ

**ಆದಿ :** ಶ್ರೀ ಗುರುಭ್ಯೋಂ ನಮಃ॥ ಶ್ರೀ ಗಣೇಶ ಶಾರದಾ ಗುರುಭ್ಯೋಂ ನಮಃ॥ XXX ಕಾಶೀಕಾಂಡ ಬರವದಕ್ಕೆ ಆಯುರಾರೋಗ್ಯಮಸ್ತು॥ ಆಉದಾನೊಂದು ಕಾಶಿಪಟ್ಟಣ ಭೂಮಿಯಲ್ಲಿ ಯಿದ್ದಂಥಾದರೂ। ಅಲ್ಲಿ ವಾಸವಂ ಮಾಡಿದವರಿಗೆ। ಪುನರುತ್ಪತ್ತಿಯಿಲ್ಲದ ಕಾರಣ। ತಾ ಭೂಮಿಯಲ್ಲಿ ಸ್ವರ್ಗದಲ್ಲು ಯಿದ್ದವರ್ಗೆ ಪುನರಾವೃತ್ತಿ ಉಂಟು। ತಂನ್ನಲ್ಲಿ ಯಿದ್ದವರ್ಗ್ಗೆ ಪುನರಾವೃತ್ತಿಯಿಲ್ಲವಾದ ಕಾರಣ ತಾ ಸ್ವರ್ಗಕಿಂದಲು ಕೆಳಗಾಗಿ ಯಿದ್ದ ದ್ದಾದರೂ ಮೇಲಾದುದು। XXX ಸಲಹಲಿ ಯೆಂಬ ಆಶೀರ್ವಾದ॥

**ಅಂತ್ಯ :** ಗುರುವಾದ ವೇದವ್ಯಾಸರು ನಿರೂಪಿಸಿದರು। ಯಿಂತೀ ಕಂನ್ನಡ ಭಾಸೆಯಿಂದ ವಿರಚಿಸಿದ ಸ್ಕಂಧ ಪುರಾಣೋಕ್ತ ಕಾಶೀ ಮಹಿಮಾರ್ಥ ದರ್ಪಣದ ಕಥಾ ಸಂಗ್ರಹಂ ಪೇಳ್ದುದು॥ ನೂರು ಅಧ್ಯಾಯ ಸಮಾಪ್ತ ಮಂಗಳ ಮಹಾಶ್ರೀ॥ XXX॥

**ವಿಷಯ :** ಸ್ಕಾಂದ ಪುರಾಣೋಕ್ತ ಕಾಶಿಯ ಮಹಿಮೆ.

**ವಿಶೇಷ :** ಕೃತಿ ಸಮಗ್ರವಾಗಿದೆ. ಪ್ರತಿ ಸುದೃಢವಾಗಿದೆ. ಸುಂದರ ಬರವಣಿಗೆ.

—ಎಂಪಿಎಂ

**ಆದಿ :** ಶ್ರೀ ಹಾಲಾಹಲ ಪುರಾಧೀಶಾಯ ನಮಃ॥ ಶ್ರೀಮತ್ಕೃಷ್ಣರಾಜ ಸೂಕ್ತಿ ಮುಕ್ತಾವಳಿಯು ಗ್ರಂಥಮಂ ಬರೆಯುವದಕ್ಕೆ ನಿರ್ವಿಘ್ನಮಸ್ತು

ಕಂದಾ॥ ಚಂದ್ರಕುಲೋದ್ಭ.... ಕ್ಷಿತಿ
ಪೇಂದ್ರರ ಪೊ....ಯಲ್ಮಹಾ ಬಲಾದ್ರಿಯೋಳಿಸಿಶಂ॥
ಸಾಂದ್ರಸಂದದೊಳಿರುತಿಹ
ಚಂದ್ರಾನನೆ ಸಲಹು ಚಾರು ಚಾಮುಂಡಿಕೆ ನೀಂ॥

(ಹೀಗೆ ೪ ಕಂದ ಪದ್ಯಗಳಾದ ಮೇಲೆ) ಚಾಮಕ್ಷಿತಿಪತಿಸುತಾ ಸೂ।ತ್ರಾ ಮಾಧಿಕ ಕೆಂಪನಂಜಮ್ಮಾ... ಸುತನು। ದ್ಧಾಮ ಶ್ರೀ ಕೃಷ್ಣೇಂದ್ರಂ। ಭೂಮೀಶ್ವರ ವತ್ಸರಾಜ ಕಥೆಯ ಪೇಳ್ದಂ ॥೫॥

ಗದ್ಯಾ॥ ಚಂಡಕರ ಮಂಡಲೋಚ್ಚಂಡ ತೇಜಃಪ್ರಕಾಂಡ ಕಾಂಡ ಪಂಡಖಂಡಿತಾ.... ಡ ಶೌರ್ಯ ಪರಿಮಂಡಿತ ಭಂಡನೋದ್ದಂಡಾರಿ ಮಂಡಲ ಕಂದೂಲದೋ ರ್ದಂಡ

**ಅಂತ್ಯ :** ತೀರದಲ್ಲಿರುವ ರಮ್ಯವಾದ ದುಕೂಲವಂ ಧರಿಸಿ ತಂಮ್ಮ ತಂಮ್ಮ ಆಭರಣ ಗಳಂನು ಧರಿಸಿಕೊಳ್ಳಲೂ ಕುಮುದ್ವತಿಯು ಕಾಂತೆಂ....ಲ....ನ್ನ ನವ ರತ್ನಹಾರವಂನು ಮುತ್ತಿನ ಯೇಕಾವಳಿಯಂ

**ವಿಷಯ :** ವತ್ಸರಾಜನ ಕಥೆ.

**ವಿಶೇಷ :** ಪ್ರತಿಯೊಂದು ಪತ್ರದ ಎರಡು ಕಡೆಯಲ್ಲಿಯೂ ಬರವಣಿಗೆಯಿದೆ. ಪ್ರತಿ ಯೊಂದು ಪತ್ರವನ್ನೂ ಹುಳುಗಳು ತಿಂದು ರಂಧ್ರಗಳನ್ನು ಮಾಡಿವೆ. ವತ್ಸರಾಜನ ಕಥೆಯು ಈ ೧ನೆಯ ಭಾಗದಲ್ಲಿ ಅಸಮಗ್ರ. ೧ನೆಯ ಗುಚ್ಛದಿಂದ ೪ನೆಯ ಗುಚ್ಛದ ಅರ್ಧಭಾಗವಿದೆ. ಗ್ರಂಥದ ಆದಿಯಲ್ಲಿ ೫ ಕಂದ ಪದ್ಯಗಳಿವೆ. ಬಳಿಕ ಗದ್ಯರೂಪವಾಗಿದೆ.

— ಎಸ್ ಬಿ

## 534

| ಕೆ.ಬಿ. ೫೨೫ | **ಕೃಷ್ಣರಾಜಸೂಕ್ತಿ ಮುಕ್ತಾವಳಿ ಭಾಗ-೨** | ಗದ್ಯ |
|---|---|---|
| ೯.೨" × ೬.೫" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೨೪೨-೪೮೦ ಪತ್ರ | ೧೮ ಪಂಕ್ತಿ | ೨೦ ಅಕ್ಷರ |

**ಆದಿ :** ಯಂದು ತಂದ ಮನದಲ್ಲಿ ಯೋಚಿಂ ಆ ಗಂಧರ್ವಸ್ತ್ರೀಯಂನು ನೋಡಿ ಯಲೆ ಕಾಂತೆಯೆ ಅಲ್ಲಿಂದಲೂ ಕೋಪವಂ ತಾಳಿ ವೇಗದಿಂದ ಬಂದು ಯಿಲ್ಲಿ ಮಾತ್ರ....ಕ್ಕೆ ಮುಂದಕ್ಕೆ ಹೆ....ಯಂ ಸಿಡದೆ ಬಳ್ಳಿಯ ಮರೆಯಂನು

**ಅಂತ್ಯ :** ವತ್ಸರಾಜೇಂದ್ರಸಂನು ಯಿಂದಿನದ.... ನೋಡಿದ ಸಂವು ಕಂಣುಗಳು ಪುಣ್ಯವಂ ಹೊಂದ...ನ....ವರೂ। ಮತ್ತೆ ಕೆಲಂ.... ಕದಬುಗಾತಿಯರು ಪಗ್ಗಗಳಂ ಕೊಯ್ದು

**ವಿಷಯ:** ವತ್ಸರಾಜನ ಕಥೆ.

**ವಿಶೇಷ:** ಪ್ರತಿಯೊಂದು ಪತ್ರದ ಎರಡು ಕಡೆಯೂ ಬರವಣಿಗೆಯಿದೆ. ಶಿಥಿಲಪ್ರತಿ. ಹುಳುಗಳು ತಿಂದು ರಂಧ್ರಗಳನ್ನು ಮಾಡಿವೆ. ಕಥೆ ಅಸಮಗ್ರವಾಗಿದೆ. ೨೪ ನೆಯ ಗುಚ್ಛದ ಅರ್ಧಭಾಗದಿಂದ ೫೦ ನೆಯ ಗುಚ್ಛದ ಅರ್ಧದವರೆಗಿದೆ.

—ಎಸ್ ಬಿ

## 535

| ಕೆ.ಬಿ. ೫೨೬ | **ಕೃಷ್ಣರಾಜ ಸೂಕ್ತಿಮುಕ್ತಾವಳಿ ಭಾಗ-೩** | ಗದ್ಯ |
|---|---|---|
| ೮.೭" × ೬.೬" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೪೮೧-೭೨೦ ಪತ್ರ | ೧೬ ಪಂಕ್ತಿ | ೨೦ ಅಕ್ಷರ |

**ಆದಿ :** ಬಿಟ್ಟ ಹೆಂಣುಕುದುರೆಗಳ....ತೆ ....ಣಿಯುಕ್ತಗವಾಕ್ಷಗಳಲ್ಲಿ ರಾಜೇಂದ್ರನ ನೋಡುತ್ತಿರುವರು ಮತ್ತೆ ಕೆಲಂಬ ಬಟ್ಟ ಮೊಲೆಯ.... ಮಟ್ಟುಮಿಾರಿದ ಕೋಹ....ತಾಳಿ ರಾಜೇಂದ್ರನೊಡನೆ ನಮಗೆ ಸುರತಸುಖವು ದೊರದಲ್ಲಿ ಚಂದದ

**ಅಂತ್ಯ :** ಯೋಗಿನಿ ಸಾರಸ್ವತಿ ಕುಮುದ್ವತಿಯರು ತಂಮ ತಂಮ ಸ್ಥಾನವಂ ಪೊಂದಿದ ಸಂಗತಿಯೂ ಸಹಾ ವಿಸ್ತರಿಸಲ್ಪಟ್ಟಿರುವರೂ॥
ಯಿಂತೀ .ಯಿಪ್ಪತ್ತು ಗುಚ್ಛಗಳಿಂದ ಯುಕ್ತವಾದ ಕೃಷ್ಣರಾಜ ಸೂಕ್ತ ಮುಕ್ತಾವಳಿಯಂಬ ಗ್ರಂಥಸಂನೂ। ಯಾರು ವೋದುವರೋ ಕೇಳುವರೋ। ಬರೆಯುವರೊ। ಅವರು ಪುತ್ರ ಪೌತ್ರ ಧನಧಾನ್ಯಗಳಿಂದ ಅಭಿವೃದ್ಧಿಯಂ ಪೊಂದುವರು।
ಶ್ರೀ ನಂಜುಂಡಯ್ಯಂಗಾರ್ಪಣಮಸ್ತು॥

**ವಿಷಯ :** ವತ್ಸರಾಜ ಕಥೆ.

**ವಿಶೇಷ :** ಪತ್ರಗಳ ಎರಡು ಕಡೆಯೂ ಬರೆವಣಿಗೆಯಿದೆ. ಶಿಥಿಲಪ್ರತಿ. ಹುಳುಗಳು ತಿಂದು ಪ್ರತಿಯೊಂದು ಪತ್ರದಲ್ಲೂ ರಂಧ್ರಗಳನ್ನು ಮಾಡಿವೆ. ಈ ೩ ನೆಯ ಭಾಗದ ಪ್ರತಿಯಲ್ಲಿ ಕಥೆ ಮುಕ್ತಾಯವಾಗಿದೆ. ೪೮೧ ರಿಂದ ೫೫೫ ಮತ್ತು ೭೧೦ನೆಯ ಪತ್ರಗಳು ಅತ್ಯಂತ ಶಿಥಿಲವಾಗಿವೆ. ೭೧೧ ರಿಂದ ೭೨೦ ಪತ್ರಗಳಲ್ಲಿ ವಿಷಯಾನುಕ್ರಮಣಿಕೆಯಿದೆ.

—ಎಸ್ ಬಿ

536

ಕೆ. ೧೪೬೭ **ಕೃಷ್ಣಾರ್ಜುನರ ಕಾಳಗ** ಭಾಮಿನೀಷಟ್ಪದಿ

೧೬" × ೧.೮" ವಿಮಲಾನಂದ ಸು. ೧೬೮೫

೧-೧೩೩ ಪತ್ರ ೮ ಪಂಕ್ತಿ ೬೬ ಅಕ್ಷರ

**ಆದಿ:** ಶ್ರೀ ಗಣಾಧಿಪತಯೇ ನಮಃ॥ XXX ಕೃಷ್ಣಾರ್ಜುನರ ಕಾಳಗವ ಬರವುದಕ್ಕೆ ನಿರ್ವಿಘ್ನಮಸು॥

ಸಗಲ ನಿಗಮ ರಹಸ್ಯ ಹೃದಯ
ಪ್ರಕರಣವ ಪರಮಾರ್ಥ ತತ್ತ್ವವ
ಪ್ರಪಟಿಸಲೆಂದೊರೆದೆನ್ಸೈ ಸದ್ಗುರು ನಿರೂಪದಲೀ॥ ಪಲ್ಲವಿ॥

ಪದ॥ ಗುರುನಿರೂಪವ ಧರಿಸಿ ಕರಿಮೊಗ
ಶಿರಗೆ ಶಿರದಿಂದೆರಗಿ ದುರ್ಗಾ
ಚರಣ ಶರಣೆಂದೆನುತ ಜೀವಶಿವಾಚ್ಯುತನ ಪರತರವಾ॥
ಹರುಷರಸದಿಂ ನೆನದು ಕಮಲಜ
ಗಿರಿಜೆ ಲಕ್ಷ್ಮೀದೇವಿಯಭಿಮತ
ಮೆರದಿ ವಾಣಿಯ ನಟಸುವೆನು ವಾಕ್ನಾಟ್ಯಶಾಲೆಯಲೀ ॥೧॥

**ಅಂತ್ಯ:** ಕೃತಿಯಿದೋಡೆ ಹರಿಕಥೆಯು
ಕೃತಿ ಸಾವಿರದೆಂಟುನೂರಾಕೃತಿಯ ಪದ ಪ
ದ್ಧತಿಯ ಸೇರಿಸಿ ಮೇಲೆ ಹದಿನೆಂಟು
ಕ್ರೃತಿಯೊಳಿರ್ದಾ ಕೃತಿಯ ಬರದಾ
ಕೃತಿ ಸಮಾಪ್ತಿಯೊಳ
ಕೃತಿಯೊಳೆಕಾಂತಾತ್ಮ ಲಿಂಗವ ನೆನದು ನಿಂದಿರ್ದಾ ॥೬೫॥
ಸ್ವಸ್ತಿ ಶ್ರೀಮತು ಶಾಲಿವಾಹನ
ಗುತ್ತಿಗೆಯೊಳುಂಟಾದ ಕೃತಿ ಮುಗಿ
ಯಿತ್ತು ಸಾವಿರದಾರುನೂರರುವತ್ತು ವರುಷ ಕ್ರೋದನದಾ॥
ವತ್ಸರದಲಾಷಾಡಮಾಸವ
ನುತ್ತರಿಸಿ ಶ್ರಾವಣದ ಬಿದಿಗೆಯು
ನಿತ್ಯ ಶುದ್ಧದಿ ಗುರುಚಿದಾನಂದಾತ್ಮನಂಘ್ರಿಯಲೀ ॥೬೬॥

X X X

ಅಂತು ಸಂಧಿ ३೦ಕ್ಕಂ ಪದ ೧೮೨ಕ್ಕಂ ಮಂಗಳ ಮಹಾಶ್ರೀ॥ XXX

**ವಿಷಯ:** ಕೃಷ್ಣಾರ್ಜುನರ ಕಥೆ.

**ವಿಶೇಷ:** ಪ್ರತಿ ಸಮಗ್ರ. ಬರೆವಣಿಗೆ ಸುಂದರ. ಹಾಳೆಗಳು ಸುದೃಢ.

— ಎಂಪಿಎಂ

## 537

ಕೆ. ೮೪೫/೩ **ಕೆಂಪರಾಯನ ಪದಗಳು** ಹಾಡು

೫೮″ × ೦.೮″ ? ?

೧೬-೪೧ ಪತ್ರ ೫ ಪಂಕ್ತಿ ೨೪ ಅಕ್ಷರ

**ಆದಿ :** ಶ್ರೀ ಶಾರದಾಯೆ ನಮಃ। ಶುಭಮಸ್ತು॥ ರಾಗ ಅಹರಿ॥
ಧಾರುಣಿಯೊಳಿದಿರಾರೊ ನಿನಗೆ।
ಭಳಿರೆ ವೀರ ವಿಕ್ರಮ ಯಿಂಮ್ಮಡಿ ಕೆಂಪಧೊರೆರಾಯ ॥ಪಲ್ಲ॥
ಶ್ರೀವತೆಲಹಕ ನಾಡವರ ಶಾನನೋದ್ಧಾರ ಭೂಮೀಶ ಧೀರ ಕೆಂಪೇಂದ್ರನ ಕುಮಾರ ಸಂಗ್ರಾಮ ಪಾರ್ಥಿವ ಯಿಂಮ್ಮಡಿ ಕೆಂಪಧೊರೆರಾಯ ನಿಸ್ಸೀಮ ಸಾಂಬ್ರಾಜ್ಯ ಸೌಖ್ಯದಲಿ। ಸ್ವಾಮಿ ಗಂಗಾಧರೇಶ್ವರನ ಕರುಣದಲಿ ಸುಪ್ರೇಮದಿಂ ಸಿಹ್ವಾಸನದೊಳಮುರ್ಲೀಲಗದಿ ಕಾಮಿಸಿದೆ ರಾಯ ಪಟ್ಟವನಿರಿಸ ಬೇಕೆಂದು ಮಂತ್ರಿಜನರೊಡನೆ। ಸಾರ್ವಭೌಮ ನಿನಗೆಣೆಯೆ ಪ್ರಭುಕುಲ ಶಿರೋಮಣಿಯೆ ॥೧॥

**ಅಂತ್ಯ :** ಸ್ಥಿರ ವೀರರಾಯರ ಸಿಂಹಾಸನವ ನಿಲಿಸಿದೆ ಕೆಂಪಧೊರೆರಾಯ ನಿಂಮ್ಮ ಚಾರಿತ್ರವನು ಹರುಷದಲಿ ಬರದೋದಿ ಕೇಳ್ವ ಜಾಣರಿಗೆ ಯಿಹಪರಸುಖವ ಪರಮೇಶನೀವ ಕರುಣಳಿಲಿ। ಕೆಂಪಧೊರೆರಾಯ ಬಾಳು ಸಾಂಬ್ರಾಜ್ಯ ಪದವಿಯಲಿ ॥೩೯॥
ಯುವ ಸಂವತ್ಸರದ ಶ್ರಾವಣ ಬ ೩ ಲ್ಲೂ ಷೋರಮಾವ ತಿಂಮಪ್ಪೈಯ್ಯನ ಮಗ ವೆಂಕಟಯ್ಯನು ಚಿಕ್ಕಕುಪ್ಪಕ್ಕಗೆ XXX ಹರಸಿ ಬರದುಕೊಟ್ಟ ಬಿಡುಪದದ ಪುಸ್ತಕ.

**ವಿಷಯ :** ಕೆಂಪರಾಜನನ್ನು ಕುರಿತ ಹಾಡುಗಳು.

**ವಿಶೇಷ :** ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ಅಲ್ಲಮಪ್ರಭುವಿನ ಪದಗಳು ಹಾಗೂ ಇಮ್ಮಡಿಯ ಕೆಂಪರಾಯನ ಪದಗಳು ಎಂಬ ಎರಡು ಪುಸ್ತಕಗಳಿವೆ.

—ವೈಸಿಬಿ

## 538

ಕೆ.ಬಿ. ೬೯೯/೨೦ **ಕೆಂಬಾವೆ ಭೋಗಣ್ಣನ ವಾರ್ಧಕ** ವಾರ್ಧಕಷಟ್ಪದಿ

೬″ × ೮.೫″ ? ?

೨೪-೨೬ ಪತ್ರ ೨೩ ಪಂಕ್ತಿ ೨೦ ಅಕ್ಷರ

**ಆದಿ :** ಶ್ರೀಗುರು ಶಾಂತಯಂ ನಮಃ॥ ಕೆಂಬಭಾವಿ ಭೋಗಣ್ಣನ ವಾರ್ಧಕಾ॥

ವಸುದಿಯೊಳು ಕೆಂಭಾವಿ ಭೋಗಿ ತಂದೆಯು ಭಕ್ತಿ
ಯು ಸ....ತ್ತು ಜಂಗಮಪ್ರೇಮಿಯುಂಬುದ ಕೇಳಿ
ಬಿಸಿಗಂಣ ಸತ್ತಶ್ಕಲ ತರಲು ಪೊಸಬನಿಯನೆನೆಂಜಿನು||
ಅಸುವಳಿದ ಕರುಪ ಸೆಗಲಲಿ ಹೊತ್ತು ಕರದಂಡ
ಭಸಿತ ರುದ್ರಕ್ಷೆ ಕೊರಳೊಳು ಲಿಂಗಮುರಿ ಮುದ್ರೆ
ಪಸುಪತ್ತಿಯು ಮಂದಿರಕೆ ಬರೆ ಕಂಡು ಶಶಿಧರಗೆ ಶರಣೆಂದು ಭೋಗಿತಂದೆ ||೮||

**ಅಂತ್ಯ :** ಹರನಾಂಗ್ರಿಗೆರಗಿದರೆ ಹರುಷದಿಂ ಭೋಗಂಣನ
ಶಿರವಿಡಿದು ಯೆತ್ತಿ ಮುಂಡಡಿ ಮುಂದಿಸಿ ಮೆಚ್ಚಿ
ನಿರುತ ರಜತಾದ್ರಿಂಗೆ ದಿವಿಜರೆಲ್ಲರು ಪುಮಳೆಗರಡು ಧ....ಣಿಮಲ್ಲೆ||
ಹರನು ಪುಃಷ್ಪಕ ತರಿಸಿ ಪುರಜನ ಉಘೆಯೆಂದು
ಸುರರು ದುಂದುಃಭಿ ಭೆರಿ ಮೊಳಗಿದಲು ಕವಿಕಡ
ಮರದ ಮಚ.... ಪುರ್ನಕ್ಕೈಲ್ಲಸಗಿರಿಗಳಿಗೆ ಹೋದನ್ನೈ ಭೋಗಿತಂಡೆ ||೧೩||

**ವಿಷಯ :** ಭೋಗಣ್ಣನ ಭಕ್ತಿಯನ್ನು ಶಿವನು ಮೆಚ್ಚಿ ಕೈಲಾಸಕ್ಕೆ ಕೊಂಡೊಯ್ದ ಕಥೆ.

**ವಿಶೇಷ :** ಸಮಗ್ರ ಕೃತಿ. ಶಿಥಿಲಪ್ರತಿ. ಅಶುದ್ಧ ಬರೆವಣಿಗೆ. ಮೋಡಿ ಅಕ್ಷರ. ಇದರೊಂದಿಗೆ ಬಸವಸ್ತುತಿ ಮುಂತಾದ ಕೃತಿಗಳಿವೆ.

—ಎಂಪಿಎಂ

## 539

| ಕೆ. ಎ. ೩೮೪/೩ | **ಕೇಶವ ಶತಕ** | ಕಂದ |
|---|---|---|
| ೧೦.೪" × ೯.೪" | ಅದ್ವೈತಾನಂದ | ೧೭೦೦ |
| ೧೮೫-೧೧೦ ಪುಟ | ೨೦ ಪಂಕ್ತಿ | ೨೫ ಅಕ್ಷರ |

**ಆದಿ :** ಕೇಶವ ಶತಕ ಸ್ತೋತ್ರ ಎಂಬ ಗ್ರಂಥ.
ನೆಲಪುಲಿ ಚೆನ್ನರಾಯನ
ಮೇಲಣ ಶತಕಗಳ ಪೇಳ್ದನತಿಮುದದಿಂದಂ
ಕೇಳಿ ಸದ್ಗತಿಯು ಪಡವುದು
ಪಾಲಿಸಿ ಸಲಹುವನು ನಮ್ಮ ಕೇಶವಮೂರ್ತಿ ||೧||

**ಅಂತ್ಯ :** ಆಕಾಶಕೆ ಸೂರ್ಯಧರಲೂ
ಪ್ರಾಕಾಶಕೆ ತೋರ್ಪ ತೆರನಂದದೊಳುಂ
ಆ ಕೇಶವನೆಂದಾ ಮಾತ್ರದಿ
ಆಕಶವು ಮಾದದೆಹುದೆಂದ ಅದಕಾನಂದ ||೧೦೧||

ಯಿಂಪ ಸಂವತ್ಸರದ ಮಾಘ ಶುದ್ಧವು ಗಳಿಪೂಜೆಯು ಪೂರ್ಣಾನಂದ ಯೋಗೀಶ್ವರರ ಶಿಷ್ಯನು ಹಳೇಬೀಡ ಅದ್ವರುನಾನಂದನು ಹೇಳಿದ ಕೇಶವ ಶತಕಕೆ ಮಂಗಳಶ್ರೀ.

**ವಿಷಯ :** ವೇಲಾಪುರಿಯ ಅಥವಾ ಬೇಲೂರಿನ ಚೆನ್ನಕೇಶವನ ಸ್ತುತಿ.

**ವಿಶೇಷ :** ಗ್ರಂಥಲೋಪವಿರುವುದರಿಂದ ಅಸಮಗ್ರ. ೧೯೩೭ ರಲ್ಲಿ ಪ್ರತಿ ಮಾಡಲಾಗಿದೆ. ಇದರೊಡನೆ ದೀಕ್ಷಾಬೋಧೆ, ಅನುಭವ ಮುಕುರ, ಜ್ಞಾನ ಸನ್ಯಾಸ(ಸಂ.) ಗ್ರಂಥಗಳಿವೆ.

—ಬಿಎಸ್‌ಎಸ್

## 540

ಕೆ. ಎ. ೫೧೪/೪ **ಕೈಫಿಯುತ್ತುಗಳು** ಗದ್ಯ

೧೦.೪" × ೯" ? ೧೮೧೩

೧-೭೦ ಪತ್ರ ೨೦ ಪಂಕ್ತಿ ೨೪ ಅಕ್ಷರ

**ಆದಿ :** ೧ ಬನವಶಿಸ್ತಲಿ ಕೈಫಿಯ್ಯತು ೨ ಚನ್ನಯ್ಯ ಕುಲದ ಕೈಫಿಯ್ಯತು ೩ ಶಿರೇಸಿಮಾಗಣೇ ಐದು ಬಾಗಿಲ ಕೈಪಿಯ್ಯತು ೪ ಕ್ರುಂಕಣಿ ವಾಂಡ್ಲೆ ಕೈಫಿಯ್ಯತು ೫ ಕುಂಚಿವಕ್ಕಲಜಾತಿ ಕೈಫಿಯ್ಯತು ೬ ಮೇಲು ಸಖರೀಬೂತಿ ಮೇದಾರಬೂತಿ ಕೈಫಿಯ್ಯತು ೭ ಪದ್ಮಸಾಲೇರ ಕೈಫಿಯ್ಯತೂ: ಬನವಶಿಸ್ತಳಂ ಕೈಫಿಯುತೂ ತಾಯಿನಾಂದ್ದಾ ಸೂರಸ್ಸ ೧೮೧೩ ಯಿಸವಿ ಸ್ನ ೧೮೧೩ ನೇ ಯಿಸವಿ ಶ್ರೀ ಮುಖ ಸಂ॥ರದ ಮಾಹೆ ಡಿಸಂಬ್ಬರು ತಾರೀಖು ೮ನೇ ಮಾರ್ಗಶಿರ ಶು ೧೪ ಸೋಮವಾರದಲ್ಲು ಬನವಶಿಸ್ತಳದ ಮಹಾ ಜನಂಗಳು ತ್ರಿಕಾಲ ಅರ್ಚಿಕರು ಅಚಾರ್‍ರು ಪುರೋಹಿತ ಲಿಂಗಾಭಟರು ಜೋಯ್ಸ ರಾಮಾಭಟ್ಟರು ಮಹಾಜನಂಗಳು ಸಹ ಬರೆಶಿಕೊಟ್ಟ ಕೈಫಿಯ್ಯತ್ತು ವಿವರ

**ಅಂತ್ಯ :** ವಿಕ್ರಮಗೆ ಯುವರಾಜಪಟ್ಟವನ್ನು ಕೊಟ್ಟು ತಾವು ಚಕ್ರವರ್ತಿ ಆಶ್ರಮವನ್ನು ತೆಗೆದುಕೊಬೇಕು ಯಂತ ಆಲೋಚಿಶಿ ವುಬ್ಬನಿ ಪುರವಂನ್ನು ಆ ಪುರವನ್ನು ಬಿಟ್ಟು ಹೊರಟುಹೋಗುವಾಗ್ಯೆಯಿಾ ನಾಲ್ಕು ಮಂದಿ ಮಕ್ಕಳಿಗ್ಯೂ ಬುದ್ಧಿವಾದ ಯೇನೆಂದರೆ ವರರುಚಿಗೆ ಸಭಾಪಾಂಡಿತ್ಯ ಭಟ್ಟಿಗೆ ಪ್ರಧಾನಿತನ ನಿರ್ಣಯ ಮಾಡಿ ಯಿಾ ವುಭಯ ಮಂತ್ರಾಂಗ ಆಲೋಚನೆಗೆ ಅನುಕ್ಯೂಲವಾಗಿ

**ವಿಷಯ :** ಮೇಲೆ ಹೇಳಿರುವ ಸ್ಥಳ ಮತ್ತು ಜಾತಿಗಳ ವಿವರ.

**ವಿಶೇಷ :** ಅಸನುಗ್ರ. ಇದರ ಜೊತೆಯಲ್ಲಿ ಅಲ್ಲಮಪ್ರಭು ಸಂಗೀತ, ಇಮ್ಮಡಿ ತಮ್ಮ ರಾಯ ಕೆಂಪರಾಯ ಪದಗಳು ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 541

ಕೆ. ೧೩೫೬/೭ **ಕೈಲಿ ಹಿಡಿದ ಪದಾರ್ಥ ಹೇಳುವ ಲಕ್ಷಣ** ಗದ್ಯ

೧೬.೪" × ೧.೯" ಮುಮ್ಮಡಿ ಕೃಷ್ಣರಾಜ ೧೮೫೦

೩೪೨-೩೪೪ ಪತ್ರ ೬ ಪಂಕ್ತಿ ೪೦ ಅಕ್ಷರ

**ಆದಿ :** ಲಗೆವರಿಗು ಪಣಿ ಮೊದಲಾಗಿ ಪಾವುವರಿಗೆ ವರಹಾ ತೂಕ ಮೊದಲಾಗಿ ಹಾಗ ತೂಕದವರಿಗು ಬಿಂದುಮ ಕಾರಿಸೂದು। ಅರ್ಧ ಅಕ್ಷರಕ್ಕೆ ಸಂಖ್ಯಾ ಕ್ರಮ ಸಂಖ್ಯೆಗೆ ಅಕ್ಷರಕ್ರಮ ಸಹಾಯ ಯರಡನು ಬರದು ಯಿಳೆ। ಬುದ್ಧಿ ವಂತರಾದವರು ತಿಳಿದುಕೊಳ್ಳತಕ್ಕದ್ದು॥ ಯಿದರಲ್ಲಿ ಸಂಖ್ಯೆಗಳಿಂದ ತಿಳಿ ಯುವ ಕ್ರಮ॥

ಅ ಆ ಇ ಈ ಋ ೠ ಌ ೡ ಉ ಊ ಎ ಐ
೧ ೧೦ ೨ ೨೦ ೩ ೩೦ ೪ ೪೦ ೫ ೫೦ ೬ ೬೦

ಒ ಔ ಅಂ ಅಃ ಕ ಖ ಗ ಘ ಙ ಚ ಛ ಜ ಝ
೭ ೭೦ ೮ ೮೦ ೧೧ ೨೧ ೩೧ ೪೧ ೫೧ ೧೨ ೨೨ ೩೨ ೪೨

ಞ ಟ ಠ ಡ ಢ ಣ ತ ಥ ದ ಧ ನ ಪ ಫ ಬ
೫೨ ೧೩ ೨೩ ೩೩ ೪೩ ೫೩ ೧೪ ೨೪ ೩೪ ೪೪ ೫೪ ೧೫ ೨೫ ೩೫

ಭ ಮ ಯ ರ ಲ ವ ಶ ಷ ಸ ಹ ಳ ಕ್ಷ ॥
೪೫ ೫೫ ೧೬ ೨೬ ೩೬ ೪೬ ೫೬ ೧೭ ೨೭ ೩೭ ೪೭ ೫೭

ಅಕ್ಷರಗಳಿಂದ ಸಂಖ್ಯೆಗಳಂನು ತಿಳಿಯುವ ಕ್ರಮ॥

೪ ೫ ೬ ೭ ೮ ೯
ಘ ಙ ಚ ಛ ಜ಼ ಝ

ಹಾಗಕ್ಕೆ ಅಡಕ್ಕೆ ಮುಪ್ಪಾಗಕ್ಕೆ ವೀಸಕ್ಕೆ ಜೇಳಿಗೆ ಮೂರ್ವಿಸಕ್ಕೆ
ಟ ಠ ಡ ಢ ಣ ತ

ಶಾಲೀವಾಹನ ಶಕಾಬ್ದಾಃ (೭೪೩ ನೆ ವಿಕ್ರಮ ಸಂ। ಆಶ್ವೀಜ ಶು. ೧೩ ಶುಕ್ರವಾರದಲ್ಲು ಶ್ರೀ ಕೃಷ್ಣರಾಜ ಸಾರ್ವಭೌಮ ವಿರಚಿತಮಾದ ಕೈಯಲ್ಲಿ ಹಿಡಿದ ಪದಾರ್ಥಗಳಂ ಪೇಳುವ ಪದ್ಯಗಳು ಪದ್ಯದಲ್ಲಿ ಬಂದ ಲೆಖ್ಖವಂ ನೋಡಿಕೊಂಡು ಯಿಂತ್ಹಾ ಪದಾರ್ಥ ಯಂದು ಗಣಿತಾ ಗುಣಿಶಿಕೊಂಡು ಹೇಳುವ ಶ್ಲೋಕಗಳು ಸಹಾಯ ಯರಡು ಪ್ರಕಾರ। ಯಿಾ ಗಣಿತಕ್ಕೆ

ಯಿರಡು ಪ್ರಕಾರ ಸೂತ್ರ ಸಹಾ ಬರದು ಯಿದೆ ಬುದ್ಧಿವಂತರಾದವರು ನೋಡಿ ತಿಳಿದುಕೊಳ್ಳತಕ್ಕದ್ದು.

**ಅಂತ್ಯ :** ನವವುಂ ಮೂಲವಿತ್ಯುಕ್ತಂ ದಶವುಂ ಚಾಸ್ಥಿಕಥ್ಯತೆ। ಏಕಾದಶಂ ಶುಷ್ಕ ಮತ್ರ ದ್ವಾದಶಂ ಲವಣಂ ಭವೇತ್ ॥೩॥
ತ್ರಯೋದಶೋ ಜೀವಉಕ್ತೋ ಶಿಲಾಸ್ಯಾತ್ತು ಚತುರ್ದಶಿ। ರಸಃ ಪಂಚದಶೋಜ್ಞೆಯಃ ಶ್ರೂಯತಾಮಂಬಿಕೇ ಶಿಲೇ ॥೪॥ ಯಿಾ ಶ್ಲೋಕಕ್ಕೆ ಸೂತ್ರಾ॥ ಸುಜ।ತಾ॥ದಿ

**ವಿಷಯ :** ಕೈಯಲ್ಲಿ ಹಿಡಿದ ಪದಾರ್ಥ ಹೇಳುವ ಲಕ್ಷಣ.

**ವಿಶೇಷ :** ಇದೇ ಕಟ್ಟಿನಲ್ಲಿ ಚಾಮುಂಡಿಕಾ ಲಘುನಿಘಂಟು, ಕುರಿತಕ್ಷರ ಹೇಳುವುದರ ಲಕ್ಷಣ ಮೊದಲಾದ ಇತರ ೧೮ ಕೃತಿಗಳಿವೆ.

—ವೈಸಿಬಿ

## 542

ಕೆ. ೬೫೨ **ಕೈವಲ್ಯ ಪದ್ಧತಿ** ಹಾಡು

೧೨.೨" × ೧.೨" ನಿಜಗುಣ ಶಿವಯೋಗಿ ಸು. ೧೫೦೦

೧-೬೦ ಪತ್ರ ೬-೭ ಪಂಕ್ತಿ ೬೦ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ। ನಿಜಗುಣಾರ್ಯರ ವಚನಾ ಪ್ರಾರಂಭಾ। ರಾಗ ನಾದರಾಮಕ್ರೀ॥ಪ॥ ಶ್ರೀಗುರು ವಚನೋಪಾ। ದೇಶಾವಾ ಲಾಲೀಸೀದಾಗಳಾಹುದು ನರರಿಗೆ ಮುಕ್ತಿ ॥ಪ॥

ದುರಿತಾ ಕರ್ಮವನೊಲ್ಲ। ನಿರುಪುಂಣ್ಯವನು ಮಾಡು। ಹರನಾಡೀವಿಡಿ ಶಾಂತ್ರರೊಡನಾಡೂ। ಕರುಣಾವೀರಲೀ ಜೀವಾ। ರೊಳುನೀತಿವಿದನಾಗು ಪೊರೆಪೊರ್ದಿದರನೆಂಮು॥ ಬೆಸಸೂವಾ ॥೧॥

**ಅಂತ್ಯ :** ಯಿತೀ ಜೀವಂನ್ಮುಕ್ತಿಸ್ಥಿತಿ ಪ್ರಕರಣಂ॥ ಯಿತೀ ಜ್ಞಾನಪಾದ ಪ್ರತೀಪಾದನಾ ಸ್ಥಲಕ್ಕೆ ಸೇರಿದಾ ವಚನಗಳ ಜೋಡು ೫೫೩ಕಂ ಕಲಗದ್ಯಾ। ಯಿತಿ ಶ್ರೀಗುರು ಶಂಭುಲಿಂಗದೊಲವಾ ನಿಜಗುಣ ಶಿವಯೋಗಿಯಾ ಬಾಲ ವೃದ್ಧರಿಗಾಯಾಸವಿಲ್ಲದಂತೆ ಸಂಮ್ಯಗ್ಜ್ಞಾನಿಗಳೊಡಂಬಡುವಾತೆ ಸಕಲ ವೇದ ವೇದಾಂತಾಗಮ ಶೃತಿಪುರಾಣ ಯಿಕವಾ ಪಂಚಸ್ತಲ ಪರಿವಿಡಿದು ಜೋಡು ೧೬೧ಕ್ಕಂ ಮಂಗಳಮಸ್ತು ಶ್ರೀ ಶ್ರೀ ಶ್ರೀ.

**ವಿಷಯ** : ವೀರಶೈವ ವೇದಾಂತ.

**ವಿಶೇಷ** : ೪೯ ಮತ್ತು ೫೧ ನೆಯ ಪತ್ರಗಳು ಅರ್ಧಕ್ಕೆ ಮುರಿದಿವೆ. ೫೭ ನೆಯ ಪತ್ರದಿಂದ ಮುಂದಿನ ಪತ್ರಗಳೆಲ್ಲವೂ ಪಕ್ಕದ ಅಂಚಿನಲ್ಲಿ ಸ್ವಲ್ಪ ತ್ರುಟಿತವಾಗಿವೆ. ಪ್ರತಿ ಸಮಗ್ರವಾಗಿದೆ.

—ಎಸ್ ಬಿ

## 543

ಕೆ. ೬೫೯/೧ **ಕೈವಲ್ಯ ಪದ್ಧತಿ** ಹಾಡು

೯.೩" × ೧.೮" ನಿಜಗುಣಶಿವಯೋಗಿ ಸು. ೧೫೦೦

೧-೪೯ ಪತ್ರ ೧೦ ಪಂಕ್ತಿ ೩೫ ಅಕ್ಷರ

**ಆದಿ** : ಶ್ರೀಗುರು ಬಸವಲಿಂಗಾಯ ನಮಃ। ನಿಜಗುಣದೇವರ ವಚನ ಬರವುದಕ್ಕೆ ಶುಭಮಸ್ತು। ನಿರ್ವಿಗ್ನಮಸ್ತು। ವಚನಾ। ರಾಗ ನಾದರಾಮಕ್ರಿಯೆ।
ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರನಿಗೆ ಮುಕ್ತಿ॥ ಪದನು॥

ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡೂ। ಹರನಡಿವಿಡಿ ಶಾಂತ ರೊಡನಾಡೂ।
ಕರುಣವಿರಲಿ ಜೀವರೊಳು ನೀತಿವಿಧನಾಗು। ಪೊರೆಪೊರ್ದಿಧರನೆಂದು ಬೆಸ ಸೂವಾ ॥೧॥
ನಿಂದಿಸಿ ನುಡಿಯದಿರಾರನು ಮನಸಿಗೆ। ಬಂದಂತೆ ನಡೆಯದಿರಿಹದಲ್ಲಿ।
ಕುಂದುವಡೆಯದಿರು ಕಾಮಾದಿಯನು ಜಯಿ। ಸೆಂದು ಕೈವಿಡಿದನುಗ್ರಹಿ ಸುವಾ ॥೨॥

**ಅಂತ್ಯ** : ಯಿಂತು ಕರ್ಮದ ಭೇದವೆಂತು ಫಲಿಸುತಿಹು। ದಂತೆ ಜ್ಞಾನಿಗಳಿಗೆ ಫಲ ವಂದದಿ॥
ಸಂತಸದೊಳು ಶಂಭುಲಿಂಗವಾಗಿಹ ಮೋಕ್ಷ। ದಂತರವರಿಗೆ ಸಮಾನವೆಯು ಹುದು ॥೫॥

ಇತಿ ಜೀವನ್ಮುಕ್ತಿಸ್ಥಿತಿಪ್ರಕಾರಂ ॥೧೬॥ ಜ್ಞಾನಪಾದ ಪ್ರತಿಪಾದನ ಸ್ಥಲಕ್ಕೆ ಶೇರಿದ ವಚನಂಗಳು ಜೋಡು ೫೫ಕ್ಕಂ ಮಂಗಳ ಮಹಾಶ್ರೀ॥ ಶ್ರೀಗುರು ಬಸವಲಿಂಗಾಯ ನಮಹಾ॥ ಗದ್ಯಾ॥ ಯಿಂತು ಶ್ರೀಗುರು ಶಂಭುಲಿಂಗದೊಲವಿನಿಂ ನಿಜಗುಣ ಶಿವಯೋಗಿ। ಅಬಾಲವೃದ್ಧರಿಗಾಯಾಸ ವಿಲ್ಲದಂತೆ। ಸಮ್ಯಜ್ಞಾನಿಗಳೊಡಂಬಡುಸಂದದಿಂ। ಸಕಲ ವೇದ ವೇದಾಂತಾ ಗಮ ಸ್ಮೃತಿ ಪುರಾಣ ಯಿತಿಹಾಸ ಭಾಷ್ಯ ಸೂತ್ರಾದಿ ಶಾಸ್ತ್ರಸಂಮತದಿಂ।

ಪುರಾತನ ಗೀತಾನುಗುಂಣ್ಯಮೆನಿಸಿ। ಕೈವಾಲ್ಯ ಪದ್ಧತಿಯುಂಬ ಪೆಸರನಿಟ್ಟು ಮ್ರುದುಮಧುರ ಲಕ್ಷಣ ಸಮೇತಮಾದ ಪಂಚಪುಸ್ಥಲ ಪರಿವಿಡಿದ ಜೋಡು ||೧೬೭|| ನೆಗಣನೆಯನುಳ್ಳ ಸ್ವರವಚನ ಸಂಗ್ರಹಮಂ ಪೇಳ್ದನಿದು ಸರ್ವ ಮಂಗಳಂ ನಿಜಗುಣ ಶಿವಯೋಗಿ ಪೇಳ್ದ ಕೈವಲ್ಯ ಪದ್ಧತಿ ಸಂಪೂರ್ನಂ ಮಂಗಳ ಮಹಾಶ್ರೀ ಶ್ರೀ|| ತಪ್ಪಂ ಬರದಾತಂ ಕಡು ಜಡನಪ್ಪಾತಂ ಯೆಂದು ನೀವು ಬೊಯ್ಯಲಿ ಬ್ಯಾಡಿ ತಪ್ಪಕ್ಕು ಶುದ್ಧಮಕ್ಕು ತಪ್ಪುಳ್ಳಡೆ ತಿದ್ದಿ ವೋದುವದುತ್ತಮ ಪುರುಷರೂ ||೧||

**ವಿಷಯ :** ವೀರಶೈವ ವೇದಾಂತ.

**ವಿಶೇಷ :** ಗ್ರಂಥ ಸಮಗ್ರ. ಸ್ಫುಟಾಕ್ಷರ. ಇದರೊಡನೆ. ಷಟ್ಸ್ಥಲ ತಿಲಕವೆಂಬ ಅಸಮಗ್ರ ಕೃತಿ ಇದೆ.

—ಎಸ್ ಎನ್ ಕೆ

## 544

ಕೆ. ೧೦೮೦ | **ಕೈವಲ್ಯ ಪದ್ಧತಿ** | ಹಾಡು

೫" × ೧.೩" | ನಿಜಗುಣ ಶಿವಯೋಗಿ | ಸು. ೧೫೦೦

೧೨-೧೨೦ ಪತ್ರ | ೬ ಪಂಕ್ತಿ | ೩೭ ಅಕ್ಷರ

**ಆದಿ :** ಪೂಜಿಸದಾರನು ಪೂಜೆಗೊಂಬಧಿಕನೆ ಜಾಣರದೇವಾ
ಮೂಜಗವೆಂಬ ಸರ್ವ........ವನೆ ಜಾಣರದೇವಾ
ರಾಜೀವನಾಭ ನವಧುವಾ ಗಣನನ ಜಾಣರದೇವಾ
ಸೋಜಿಗದೊ ........ ಶ್ಮರ........ಜಾಣರದೇವಾ

**ಅಂತ್ಯ :** ಧನಕನಕ ವಸ್ತ್ರಭೂಷಣ ಗಂಧಮುಲ್ಯವಾ
ಹನರಮ್ಯ ವಾಸವನಿತಾದಿ ವಸ್ತುಗಳೂ
ಮನಸಾರೆ ಮುಂದೆ ತೀವಿರೆ ಬೋಗಿಸುವಶಕ್ತಿ
ತನಗಿದೊ

**ವಿಷಯ :** ವೀರಶೈವ ತತ್ವಭೋದೆ.

**ವಿಶೇಷ :** ಅಸಮಗ್ರ. ಮೊದಲ ೫ ಮತ್ತು ಕೊನೆಯ ೯ ಓಲೆಗಳು ಉಪಯೋಗವಿಲ್ಲದಷ್ಟು ಜೀರ್ಣವಾಗಿವೆ.

—ಪಕರಾ

## 545

ಕೆ. ೧೧೭೩/೨ | **ಕೈವಲ್ಯ ಪದ್ಧತಿ** | ಹಾಡು

೬.೯" × ೧.೫" | ನಿಜಗುಣ ಶಿವಯೋಗಿ | ಸು. ೧೫೦೦

೮೮-೧೩೩ ಪತ್ರ | ೭ ಪಂಕ್ತಿ | ೨೫ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ। ನಿಜಗುಣ ಶಿವಯೋಗಿ ವಿರಚಿಸಿದ ಕೈವಲ್ಯ ಪದ್ಧತಿ ಬರವುದಕ್ಕೆ ಶುಭಮಸ್ತು।।
ರಾಗ ನಾದರಾಮಕ್ರಿ।।
ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕ್ತೀ।। ಪದ।।
ದುರಿತಾಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಾಡಿವಿಡಿ ಶಾಂತರೊಡನಾಡೂ
ಕರುಣವಿರಲಿ ಜೀವರೊಳು ನೀತಿವಿಧನಾಗು
ಪೊರೆ ಪೊರ್ದಿದರನೆಂದು ಜಿಸಸೂವಾ ।।೧।।

**ಅಂತ್ಯ :** ರಾಗ ಭೈರವಿ।। ಸೋಲದಾತನೆ ವಿರತನು
ಮನದೊಳಗೆ ಬಾಲೆಯರ ಸಿಂಗರವ ಕಂಡೂ। xxx
ಸುಗುಣಾ ಸಂತತಿಯಾನು
ನಿಗಮಾದಿ ವಿಧಿಯಾನೂ
ಮಿಗೆ ತಾಪವನೂ
ತನಗಕ್ಷ ಸಿಧಿಗಳನೂ
ಜಗದ ಪೂಜ್ಯತೆಯನೂ
ಸೊಗಸುವೀ ತನುವಾನೂ
ಬಗೆಯು ಕಾಮವೆ ಬಂಣವಳಿವುದರಿಂದಾ ।।೧।।

**ವಿಷಯ :** ವೀರಶೈವ ತತ್ತ್ವಬೋಧೆ.

**ವಿಶೇಷ :** ಅಸಮಗ್ರ. ಈ ಪ್ರತಿಯೊಡನೆ ಗುರುಭಕ್ತಾಂಡಾರಿಯ ಚರಿತ್ರೆ ಎಂಬ ಗ್ರಂಥ ವಿದೆ.

—ವೈಸಿಬಿ

## 546

| ಕೆ. ೧೧೯೩/೧ | **ಕೈವಲ್ಯ ಪದ್ಧತಿ** | ಹಾಡು |
|---|---|---|
| ೧೩.೪" × ೧.೬" | ನಿಜಗುಣ ಶಿವಯೋಗಿ | ಸು. ೧೫೦೦ |
| ೧-೧೧೬ ಪತ್ರ | ೮ ಪಂಕ್ತಿ | ೫೭ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ।। ನಿಜಗುಣ ಶಿವಯೋಗಿ ವಿರಚಿತಮಾದ ಕೈವಲ್ಯ ಪದ್ಧತಿ ಸ್ವರವಚನಂಗಳ ಬರವುದಕ್ಕೆ ಶುಭಮಸ್ತು।। ಶೋಭನ ಮಸ್ತು।। ರಾಗ ನಾದರಾಮಕ್ರಿ। ಚೌಪದಿ ವರ್ನ।। ಶ್ರೀಗುರು ವಚನೋಪ ದೇಶನ ಲಾಲಿಸಿ। ದಾಗಳಹುದು ನನರಿಗೆ ಮುಕ್ತೀ।।

ಪದ|| ದುರಿತ ಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಡಿವಿಡಿ ಶಾಂತ್ತರೊಡನಾಡೂ
ಕರುಣವಿರಲಿ ಜೀವರೊಳು ನೀತಿವಿಧನಾಗು
ಪೊರೆ ಪೊರ್ದ್ದಿಭರನೆಂದು ಬೆಸಸುವಾ ||೧||

**ಅಂತ್ಯ:** ನಿಂತು ನಿಜಗುಣಶಿವಯೋಗಿ ವಿರಚಿತ್ತವಾದ ಕೈವಲ್ಯ ಪದ್ಧತಿಯೆಂಬ ಪ್ರಕರಣದಲ್ಲಿ ಜ್ಞಾನಪಾದ ಪ್ರತಿಪಾದನಾಸ್ಥಲಕ್ಕೆ ಸೇರಿದ ವಚನಂಗಳು ಜೋಡು ೫೮ಕ್ಕಂ ಅಂತು ಪ್ರಕರಣ ೫ ರ ಜೋಡು ೧೭೫ಕ್ಕಂ ಮಂಗಳ ಮಹಾಶ್ರೀ||

ಗದ್ಯ|| ಶ್ರೀಗುರು ಶಂಭುಲಿಂಗದೊಲವಿಂ ಶ್ರೀ ನಿಜಗುಣ ಶಿವಯೋಗೀಂದ್ರ ವಿರಚಿತ ಮಾದ ಆಬಾಲವೃದ್ಧರಿಗೆ ಆಯಲಸವಿನಿತಿಲ್ಲದಂತ್ತೆ XXX ಸ್ವರವಚನ ಸಂಗ್ರಹಂ ಪೇಳ್ದ ನೀತಿಶಾಸ್ತ್ರ ಸ್ವರವಚನ ೭೦೦ಕ್ಕಂ ಮಂಗಳ ಮಹಾಶ್ರೀ|| ಸ್ವಸ್ತಿ ಶ್ರೀ ಕಾಳಾಯುಕ್ತಾಕ್ಷಿಯಾಭ್ಯುದಯ ಶಾಲಿವಾಹನ ಶಕ ವರುಷ ೧೭೩೦ ನೆ ಅಬ್ದದ ಜೇಷ್ಟ ಬ ೩ ಯು ಸುಕ್ರವಾರದ ೧೨ ನೆಯ ತಾಸಿನಲ್ಲಿ ನಿಜಗುಣಶಿವಯೋಗಿ ವಿರಚಿತವಾದ ಕೈವಲ್ಯಪದ್ಧತಿ ಚಿತ್ರಿಕೇಚರದ ಮಹಂತಸ್ವಾಮಿಗಳ ಕರಾಬ್ಜದಲ್ಲಿ ವುದ್ಭವಿಸಿದಂತ್ತ ರುದ್ರಮುರಿ ಬರದ ಸುಹಸ್ತ ಬರಹಕ್ಕೆ ಮಂಗಳ ಮಹಾಶ್ರೀ||

**ವಿಷಯ:** ವೀರಶೈವ ತತ್ತ್ವಬೋಧೆ.

**ವಿಶೇಷ:** ಸಮಗ್ರ. ಇದರಲ್ಲಿ ಚೆನ್ನಬಸವೇಶ್ವರ ಪುರಾಣ ಇದೆ.

—ವೈಸಿಬಿ

547

| ಕೆ. ೧೫೫೮ | **ಕೈವಲ್ಯ ಪದ್ಧತಿ** | ಹಾಡು |
|---|---|---|
| ೮.೧″ × ೨″ | ನಿಜಗುಣ ಶಿವಯೋಗಿ | ಸು. ೧೫೦೦ |
| ೧-೫೧ ಪತ್ರ | ೧೧ ಪಂಕ್ತಿ | ೪೫ ಅಕ್ಷರ |

**ಆದಿ:** ಶ್ರೀ ಸುಬ್ರಂಹ್ಮಂಣ್ಯನೆ ಗತಿ|| ಶ್ರೀ ನಿಜಗುಣ ದಿವ್ಯ ಶಿವಯೋಗಿ ವಿರಚಿತ ಮಪ್ಪ ಕೈವಲ್ಯ ಪದ್ಧತಿಯಂ ಬರಉದಕ್ಕೆ ಶುಭಮಸ್ತು|| ನಿರ್ವಿಘ್ನಮಸ್ತು|| ಭಕ್ತಿಜ್ಞಾನ ವೈರಾಗ್ಯ ಶ್ರೀಗುರು ಕೃಪೆಯಿಂದೊದಗಲಿ|| ವಚನಗಳು|| ರಾಗ ನಾದ ರಾಮಕ್ರಿಯ|| ಚೌಪದಿವರ್ನ

ಶ್ರೀಗುರೂ ವಚನೋಪದೇಶವನಾಲಿಸಿ
ದಾಳುಹುದು ನರರಿಗೆ ಮುಕ್ತಿ|| ಪದನು||

ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಾಡಿ ವಿಧಿಶಾಂತರೊಡನಾಡು
ಕರುಣವಿರಲಿ ಜೀವರೊಳು ನೀತಿವಿದನಾಗು
ಪೊರೆ ಪೊರ್ದಿದರನೆಂದು ಬೆಸಸುವ ||೧||

**ಅಂತ್ಯ :** ಯಿಂತು ಕರ್ಮದ ಭೇದ
ವೆಂತು ಫಲಿಸುತಿಹುದು
ದಂತೆ ಜ್ಞಾನಿಗಳರೆ ಪಲವಂದದಿ
ಸಂತಸದೊಳು ಶಂಭು
ಲಿಂಗವಾಗಿಹ ಮೋಕ್ಷ
ಪಂತವರಿಗೆ ಸಮಾನವೆಯುಹಂದೂ॥ ೫|| ೫೮|| ಇತಿ ಜೀವನ್ಮುಕ್ತಸ್ಥಿತಿ ಪ್ರಕರಣಂ|| ಇಂತು ನಿಜಗುಣ ಶಿವಯೋಗಿ ವಿರಚಿತಮಾದ ಕೈವಲ್ಯ ಪದ್ಧತಿಯಂಬ ಪ್ರಕರಣದಲ್ಲಿ ಜ್ಞಾನಪಾದಪ್ರತಿಪಾದನಾ ಸ್ಥಲಕೆ ಸೇರಿದ ವಚನಂಗಳು ೫೮ಕಂ ಅಂತೂ ಸ್ಥಲ ೫ಕ್ಕೆ ವಚನಂಗಳ ಜೋಡು ೧೬೩ಕಂ ಮಂಗಳ ಮಹಾಶ್ರೀ ಶ್ರೀ XXX ವಿಭವ ಸಂ|| ಪುಷ್ಯ ಶು ೩ಲ್ಲೂ ನಿಜ ಗುಣಶಿವಯೋಗಿ ವಿರಚಿತಮಾದ ಕೈವಲ್ಯ ಪದ್ಧತಿಯೆಂಬ ಕೃತಿ ಬರದ ಪುಸ್ತಕಕ್ಕೆ ಶ್ರೀರಸ್ತು||

**ವಿಷಯ :** ವೀರಶೈವ ಸಿದ್ಧಾಂತ. ಭಕ್ತಿ ಜ್ಞಾನ ವೈರಾಗ್ಯ ಪ್ರತಿಪಾದನೆ.

**ವಿಶೇಷ :** ಸಮಗ್ರ, ಪ್ರತಿ ಚೆನ್ನಾಗಿದೆ.

— ಜಿಜಿಎಂ

## 548

| ಕೆ.ಬಿ. ೬೫೧/೪ | **ಕೈವಲ್ಯ ಪದ್ಧತಿ** | ವಿವಿಧಷಟ್ಪದಿ |
|---|---|---|
| ೬.೫" × ೮" | ಷಡಕ್ಷರಸ್ವಾಮಿ | ೧೩ನೆಯ ಶತಮಾನ |
| ೫೨-೧೪೪ ಪತ್ರ | ೧೬ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಗುರು ಮುರುಗೇಂದ್ರಾಯನಮಃ|| xxx|| ಷಡಾಕ್ಷರ ಸ್ವಾಮಿಗಳವರ ಕೈವಾಲ್ಯ ಪದ್ಧತಿ ಬರಉದಕ್ಕೆ ಶುಭಮಸ್ತು ಶೋಭನಮಸ್ತು|| ಕುಸುಮ ಷಟ್ಪದಿ||

ಸಕಲಕೆಲ್ಲಕೆ ನೀನೆ
ಅಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳೂತಿರಲರಿದೆನೊ ||ಪಲ್ಲ||

ಯುರಗಂಬಳಿಯು ಸಿದ್ಧಾ
ವರಲಿಂಗ ನಾಮದಿಂ
ಹರನೆ ನೀನೆನಗೆ ದೀಕ್ಷೆಯು ಮಾಡಿದೆ
ವರ ಷಡಕ್ಷರಿಯ ದೇ
ವರ ನಾಮದಿಂದೆನಗೆ
ಅರುಹಿದಿರಿ ಶಿವಶಾಸ್ತ್ರದನುಭಾವವಾ ||೧||

ಅಂತ್ಯ : ಪ್ರೀಯಾತ್ಮಂತಾ ಕಾಮಾರಿ ಷಡಾಕ್ಷರಾರ್ಯಂ
ಸ್ತೋತ್ರಂ ನಹರ್ಸಿಶವದಂಶ ನಿತ್ಯಂ
ಭಕ್ತಿಶ್ಚ ಮುಕ್ತಿಶ್ಚ ಶತ ಪ್ರಧಾಯ್ಯೈ
ಕೈಲಾಸಮಂಧಿರ ಸದಾ ಸುಖಸ್ಥಂ ||೨೮||
ಪ ಲಲ ನುಡಿ ಜಂಲಕ್ಕಂ ಮಂಗಳ ಮಹಾಶ್ರೀ||

ವಿಷಯ : ವೀರಶೈವ ತತ್ತ್ವಬೋಧೆ.

ವಿಶೇಷ : ಸಮಗ್ರ. ಮೋಡಿ ಅಕ್ಷರ. ಇದರೊಂದಿಗೆ ಸದಾಶಿವ ನೀತಿ ಮುಂತಾದ ಕೃತಿಗಳಿವೆ.

— ಎಂಪಿಎಂ

## 549

ಕೆ.ಬಿ. ೭೧೮ — **ಕೈವಲ್ಯ ಪದ್ಧತಿ (ಸಟೀಕು)** — ಹಾಡು, ಟೀಕು
೧೨ ೮" × ೪" — ನಿಜಗುಣ ಶಿವಯೋಗಿ — ಸು. ೧೫೦೦
೧-೧೪೪ ಪುಟ — ೧೩ ಪಂಕ್ತಿ — ೪೦ ಅಕ್ಷರ

ಆದಿ : ಗುರು ಶಿವಲಿಂಗದೇವಾಯನ್ಮಃ XXX ಕೈವಲ್ಯ ಪದ್ಧತಿಯು ಟೀಕು ಬರ ವದಕ್ಕೆ ಶುಭಮಸ್ತು XXX ರಾಗ ನಾದ ರಾಮಕ್ರಿ|| ಪಲ್ಲ||
ಶ್ರೀಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ||

ಟೀಕೂ|| ಶ್ರೀ ಷಡ್ಗುಣೈಶ್ವರ್ಯ ಸಂಪತ್ಕರವನುಳ್ಳ ಗುರು ಗುರುಸ್ವಾಮಿಯು ವಚನ ವಾಕ್ಯದ ಉಪದೇಶವಂ ಅನುಗ್ರಹವನ್ನು ಆಲಿಸಿದಾಗಳೆ ಕೇಳಿದಾಕ್ಷಣದಲ್ಲಿಯೆ ನರರಿಗೆ ನರಜಂನ್ಮದ ಭಕ್ತರಿಗೆ ಮುಕುತಿ ಮೋಕ್ಷವು ಆಹುದು ಆಗುವದು

ಅಂತ್ಯ : ಯಿಂತು ಶ್ರೀಗುರು ಶಂಭುಲಿಂಗದೊಲವಿಂ ನಿಜಗುಣ ಶಿವಯೋಗಿ ಆಬಾಲ ವೃದ್ಧರಿಗಾಯಾಸವಿನಿತಿಲ್ಲದಂತೆ ಸಂಮ್ಯಜ್ಞಾನಿಗಳೊಡಂಬಡುವಂತೆ ಸಕಲ ವೇದಾಂತಾಗಮ ಶ್ರುತಿ ಪುರಾಣೇತಿಹಾಸ ಸೂತ್ರಾದಿ ಶಾಸ್ತ್ರ ಸಂಮತದಿಂ

ಪುರಾತನ ಗೀತಾನುಗುಣ್ಯವೆನಿಸಿ ಕೈವಲ್ಯ ಪದ್ಧತಿಯೆಂಬ ಪೆಸರನಿಟ್ಟು ಮೃದುಮಧುರ ಲಕ್ಷಣಸಮೇತವಾದ ಪಂಚಸ್ಥಲ ಪರಿವಿಡಿದು ಜೋಡು ಗಣನೆಯುಳ್ಳ ಸ್ವರವಚನ ಸಂಗ್ರಹಮಂ ಪೇಳ್ದ ನೀತಿ ಸರ್ವಮಂಗಲಂ ಮಹಂತು ಸ್ಥಲ ೫ಕ್ಕಂ ಪದ ಶಿವಪ್ರಾರ್ಥನ ಸ್ಥಲಕ್ಕೆ ಸೇರಿದ ವಚನಂಗಳ ಜೋಡು ೨ಲಕ್ಕೆ ಬಿಚ್ಚಿದ ಪದಂಗಳು ೧೧೬ ಜೀವ ಸಂಬೋಧನ ಸ್ಥಲಕ್ಕೆ ಶೇರಿದ ವಚಕಂಗಳ ಜೋಡು ೨೨ಕ್ಕೆ ವಿರಳ ಪದಂಗಳು ೭೦ ನೀತಿ ಕ್ರಿಯಾ ಪ್ರತಿಪಾದನ ಸ್ಥಲಕ್ಕೆ ಶೇರಿದ ವಚನಂಗಳ ಜೋಡು ೨೬ಕ್ಕಂ ಛಿದ್ರಪದಂಗಳು ೯ಲ ಯೋಗಪ್ರತಿಪಾದನ ಸ್ಥಲಕ್ಕೆ ಸೇರಿದ ವಚನಂಗಳ ಜೋಡು ೩೯ಕ್ಕಂ ಖಂಡನ ಪದಗಳು ೧೪೯ ಜ್ಞಾನಪ್ರತಿಪಾದನ ಸ್ಥಲಕ್ಕೆ ಸೇರಿದ ವಚನಂಗಳ ಜೋಡು ೫ಲಕಂ ತುಣುಕು ಪದಂಗಳು ೨೨೦ ಅಂತು ಸ್ಥಲ ೫ಕ್ಕಂ ವಟ್ಟು ಪದಜೋಡು ೧೭೩ ಬಿಚ್ಚಿದ ಪದ ೬೪೩ಕ್ಕಂ ಮಂಗಲ ಮಹಾಶ್ರೀ ಶ್ರೀ.

**ವಿಷಯ :** ವೀರಶೈವ ತತ್ವಬೋಧೆ.

**ವಿಶೇಷ :** ಸಮಗ್ರ. ಪ್ರತಿ ತುಂಬ ಚೆನ್ನಾಗಿದೆ.

—ಜಿಜಿಎಂ

## 550

ಕೆ. ೧೧೫೪/೪ | **ಕೈವಲ್ಯಸಾರದ ಟೀಕು** | ಗದ್ಯ

೧೫.೭" × ೨.೨" | ತೋಂಟದ ದೇಶಿಕೇಂದ್ರ | ?

೨೪೦-೨೬೪ ಪತ್ರ | ೧೪ ಪಂಕ್ತಿ | ೧೧೩ ಅಕ್ಷರ

**ಆದಿ :** ಶ್ರೀಗುರು ಶಾಂತವೀರೇಶ್ವರಾಯ ನಮಃ।। ವಾತುಳೆ।।
ಯೇಕಯೇವ ಪರಂಬ್ರಹ್ಮಂ। ಸಚ್ಚಿದಾನಂದ ಲಕ್ಷಣಂ।।
ಶಿವತತ್ವಂ ಶಿವಾಚಾರ್ಯಾಃ। ಸ್ಥಲಮಿತ್ಯಾಹುರಾಧರಾತ್।।

ಟೀಕು।। ಸಚ್ಚಿದಾನಂದ ಲಕ್ಷಣಂ। ಸತ್ತು ಚಿತ್ತು ಆನಂದಂಗಳೆ ಲಕ್ಷಣವಾಗಿಯುಳ್ಳ। ಏಕಮೇವ। ವೊಂದೆಯಾಗಿ। ಪರಂಬ್ರಹ್ಮಂ। ಪರಬ್ರಹ್ಮವೆನಿಸಿಕೊಂಬ। ಶಿವ ತತ್ವಂ। ಶಿವತತ್ವವನು। ಶಿವಾಚಾರ್ಯಾ। ಶಿವಾಚಾರ್ಯ್ಯರು। ಆಧರಾತ್। ಆದರ ದತ್ತಣಿಂ। ಸ್ಥಲಮಿತಿ। ಸ್ಥಲಮಿತಿ। ಸ್ಥಲವೆಂದು। ಆಹುಃ ಹೇಳುತ್ತಿಹರು ।।೧।।

**ಅಂತ್ಯ :** ಶೂನ್ಯಂ ಶೂನ್ಯಂ ಪುನಃ ಶೂನ್ಯಂ ತ್ರಿಶೂನ್ಯಂ ಪಶ್ಯತೀಕ್ಷಣಾತ್।
ಸರ್ವಶೂನ್ಯಂ ನಿರಾಭಾಸಂ ಸಾಮರಸ್ಯಂ ತಥಾಭವೇತ್।।

ಟೀ।। ಯದಾ। ಆವಾಗ। ಪರಮಾತ್ಮ ವಸ್ತುವನು। ಶೂನ್ಯಂ। ವುತ್ಪತ್ತಿಶೂನ್ಯ ವಾದುದನಾಗಿ। ಶೂನ್ಯಂ। ಸ್ಥಿತಿ ಶೂನ್ಯವಾದುದನಾಗಿ। ಪುನಃ। ಮರಳಿ।

ಶೂನ್ಯಂ। ಲಯಶೂನ್ಯವಾದುದನಾಗಿಯೂ। ತ್ರಿಶೂನ್ಯಂ। ಭೂತಭವಿಷ್ಯದ್ವರ್ತಮಾನವೆಂಬ ಕಾಲ ಮೂರರಿಂದವು ಶೂನ್ಯವಾದುದನಾಗಿ। ಕ್ಷಣಾತ್। ಕ್ಷಣಮಾತ್ರದಿಂದ। ಪಶ್ಯತಿ। ಕಾಣುತ್ತಿಹನು। ತದಾ। ಆಕಾಶದಲ್ಲಿ। ಸರ್ವಶೂನ್ಯಂ। ಸರ್ವಶೂನ್ಯವಾಗಿವುಳ್ಳುದಾಗಿ। ನಿರಾಭಾಸಂ। ಬೇರಾಗಿ ತೋರ್ಪುದಿಲ್ಲದಿಹಣವು। ಸಾಮರಸ್ಯಂ। ಸಮರಸತ್ವವು। ಭವೇತ್। ಅಹುದು ॥೪೭೯॥ ಕೈವಲ್ಯಸಾರದಲ್ಲಿಯು ಗ್ರಂಥ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ತತ್ವಬೋಧೆ.

**ವಿಶೇಷ :** ಇದೇ ಕಟ್ಟನಲ್ಲಿ ಹಾಲಾಸ್ಯ ಪುರಾಣ, ವಾತುಲಾಗಮ ಮತ್ತು ಅಷ್ಟಾವರಣ ವಿವೇಕಸ್ತೋತ್ರಂ ಎಂಬ ಕೃತಿಗಳಿವೆ.

—ವೈಸಿಬಿ

## 551

| ಕೆ. ೯೦೩/೨ | **ಕೈಶಿಕ ಪುರಾಣದ ಟೀಕು** | ಗದ್ಯ |
|---|---|---|
| ೧೬" × ೧.೩" | ? | ? |
| ೪೩-೫೧ ಪತ್ರ | ೪ ಪಂಕ್ತಿ | ೫೨ ಅಕ್ಷರ |

**ಆದಿ :** ಕೈಶಿಕ ಪುರಾಣದ ಟೀಕು. ಸಹಸ್ರಬಾಹು ಸಂಯುಕ್ತನಾಗಿ ಸರ್ವಾಭರಣ ಭೂಷಿತನಾಗಿ ಶಂಖ ಚಕ್ರಾದಿ ದಿವ್ಯಾಯುಧಧರದಾಗಿ ವರಾಹ ರೂಪಿಯಾದ ಸರ್ವೇಶ್ವರನಂ ನೋಡಿ ಸಂಹೃಷ್ಟೆಯಾಗಿ ಭೂದೇವಿಯೂ ಸಾಷ್ಟಾಂಗವಾಗಿ ದಂಡಪ್ರಣಾಮವಂ ಮಾಡಿ ವೊಂದು ಮಾತ್ರ ಬಿಂನಹಂ ಮಾಡಿದಳು

**ಅಂತ್ಯ :** ಕೇಳು ಭೂದೇವಿಯೆ ಆ ಬ್ರಾಂಹ್ಮಣನು ತಂಮ ಭಕ್ತನಲ್ಲದೆ ಯಿದ್ದರೂ ಬಾಹ್ಮಣನಿಗಿಂದಲೂ ತಂಮ ಭಕ್ತನಾದ ಶ್ವಪಚನಾದ ನೀಚನೆ ದೊಡ್ಡವನು ಯಂಬದಕ್ಕೆ ಯಿದೆ ದೃಷ್ಟಾಂತವು ಆ ಸಮಯದಲ್ಲಿ ಯಂದಿನಂತೆ ಬ್ರಾಹ್ಮಣನಾಗಿ ನಾರಾಯಣನ ಭಕ್ತನಾದನು. ಯಲ್ಲಿ ತಂಮ ಭಕ್ತನು ಯಂದಿನಂತೆ ಪುತ್ರದಾರಾದಿಗಳೊಡನೆ ಸುಖದಲ್ಲಿ ಯಿದ್ದು ಮತ್ತೂ ಗಾನವ್ರತನಾಗಿಯು ಯಿದ್ದು ನಾರಾಯಣನ ಪದನಂ ಯೈದಿದನು. ಯಂದು ಭೂದೇವಿಯರಿಗೆ ಆದಿವರಾಹಸ್ವಾಮಿಯು ಬುದ್ಧಿಗಲಿಸಿದರು ಯಂಬ ಬಳಿಗೆ ವರಾಹ ಪುರಾಣದ ನಾಲ್ವತ್ತನೇ ಅಧ್ಯಾಯ ಪರಿಸಮಾಪ್ತಃ ಮಂಗಳ ಮಹಾಶ್ರೀ.

**ವಿಷಯ :** ಕೈಶಿಕ ಪುರಾಣದ ಮಹಿಮೆ.

**ವಿಶೇಷ :** ನಲ್ವತ್ತನೆಯ ಅಧ್ಯಾಯ ಮಾತ್ರ ಪೂರ್ಣವಾಗಿದೆ. ಅಲ್ಲಲ್ಲಿ ಹುಳುಹೊಡೆದು ರಂಧ್ರಗಳಾಗಿವೆ. ಬರಹವು ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಗಜೇಂದ್ರ ಮೋಕ್ಷ ಮತ್ತು ನಾರಾಯಣ ಕವಚವೆಂಬ ಗ್ರಂಥಗಳೂ ಇವೆ.

—ಕೆಆರ್‌ಎಸ್

## 552

ಕೆ.ವಿ. ೪೬೭/೨ | **ಕೈಶಿಕ ಪುರಾಣದ ಟೀಕು** | ಗದ್ಯ

೧೨.೮" × ೮.೨" | ? | ?

೨೨-೨೯ ಪುಟ | ೨೯ ಪಂಕ್ತಿ | ೧೭ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ|| ಶ್ರೀ ರಾಮಾಯ ನಮಃ|| ಕೈಶಿಕೀ ಪುರಾಣದ ಟೀಕು||

ಸಹಸ್ರಬಾಹುಯುಕ್ತನಾಗಿ, ಸರ್ವಾಭರಣಭೂಷಿತನಾಗಿ, ಶಂಖಚಕ್ರಾದಿ ದಿವ್ಯಾಯುಧಧರನಾಗಿ, ವರಾಹರೂಪಿಯಾದ ಸರ್ವೇಶ್ವರನಂ ನೋಡಿ ಸಂಹೃಷ್ಟಿಯಾಗಿ ಭೂದೇವಿಯು, ಸಾಷ್ಟಾಂಗವಾಗಿ ದಂಡಪ್ರಣಾಮವಂ ಮಾಡಿ ವೊಂದು ಮಾತಂ ಬಿನ್ನಹಂ ಮಾಡಿದಳು ಶ್ರೀ ಭೂಮಿರುವಾಚ–ಸ್ವಾಮಿಾ, ನಾನು ತಮ್ಮ ವಿಷಯದಲ್ಲಿ ಶಿಷ್ಯೆಯಾಗಿ ಭಕ್ತೆಯು ದಾಸಿಯೂ ಆದುದರಿಂದ ತನ್ನ ಕುರಿತು ಸಕಲಜನ ಪ್ರಾಣಿಗಳಿಗೂ ಸ್ವರ್ಗಾಪವರ್ಗ ಸಾಧನವಾದ ಲಘೂಪಾಯವನ್ನು ಬುದ್ಧಿಗಲಿಸತಕ್ಕದ್ದು.

**ಅಂತ್ಯ :** ಕೇಳು ಭೂದೇವಿಯೆ— ಆ ಬ್ರಾಹ್ಮಣನು ತಮ್ಮ ಭಕ್ತನಲ್ಲದೆಯಿದ್ದರೂ ಬ್ರಾಹ್ಮಣನಿಗಿಂತಲೂ ಭಕ್ತನಾದ ಶ್ವಪಚನಾದ ನೀಚನೆ ದೊಡ್ಡವನು ಯಂಬದಕ್ಕೆಯಿದೆ ದೃಷ್ಟಾಂತಉ. ಆ ಸಮಯದಲ್ಲಿ ಯಂದಿನಂತೆ ಬ್ರಾಹ್ಮಣನಾಗಿ ನಾರಾಯಣ ಭಕ್ತನಾದನು. ಯಿಲ್ಲಿ ತಮ್ಮ ಭಕ್ತನು ಯಂದಿನಂತೆ ಪುತ್ರದಾರಾದಿಗಳೊಡನೆ ಸುಖದಲ್ಲಿ ಯಿದ್ದ ಮತ್ತು ಗಾನವ್ರತನಾಗಿಯೂ ಯಿದ್ದು ನಾರಾಯಣನ ಪದವಂ ಯೈದಿದನು ಯಂದು ಭೂದೇವಿಯರಿಗೆ ಆದಿವರಾಹಸ್ವಾಮಿಯು ಬುದ್ಧಿಗಲಿಸಿದರು ಯಂಬ ಬಳಿಗೆ, ವರಾಹ ಪುರಾಣದ ನಾಲ್ವತ್ತನಾಲ್ಕನೆಯ ಅಧ್ಯಾಯ ಪರಿಸಮಾಪ್ತಃ ಮಂಗಳ ಮಹಾಶ್ರೀ.

**ವಿಷಯ :** ಕೈಶಿಕಾದ್ವಾದಶಿಯ ಮಾಹಾತ್ಮ್ಯೆ.

**ವಿಶೇಷ :** ಇದೇ ಪುಸ್ತಕದಲ್ಲಿ ಕಬ್ಬಿಗರ ಕೈಪಿಡಿ ಎಂಬ ಕೃತಿಯಿದೆ.

—ವೈಸಿಬಿ

## 553

ಕೆ.ಎ. ೫೫೧/೧ **ಕೈಶಿಕ ಪುರಾಣದ ಟೀಕು** ಗದ್ಯ
೧೨.೨" × ೯.೬" ? ?
೧-೫ ಪುಟ ೨೪ ಪಂಕ್ತಿ ೨೬ ಅಕ್ಷರ

**ಆದಿ :** ಕೈಶಿಕ ಪುರಾಣದ ಟೀಕಾ:
ಸಹಸ್ರಬಾಹು ಸಂಯುಕ್ತನಾಗಿ, ಸರ್ವಾಭರಣಭೂಷಿತನಾಗಿ ಶಂಖ ಚಕ್ರಾದಿ ದಿವ್ಯಯುಧಧರನಾಗಿ ವರಾಹ ರೂಪಿಯಾದ ಸರ್ವೇಶ್ವರನಂ ನೋಡಿ, ಸಂಹೃಷ್ಟೆಯಾಗಿ ಭೂದೇವಿಯು ಸಾಷ್ಟಾಂಗವಾಗಿ ದಂಡಪ್ರಣಾಮನಂ ಮಾಡಿ ಒಂದು ಮಾತು ಬಿನ್ನಹಂ ಮಾಡಿದಳು

**ಅಂತ್ಯ :** ಆ ಸಮಯದಲ್ಲಿ ಎಂದಿನಂತೆ ನೀಚನೇ ದೊಡ್ಡವನು ಎಂಬುದಕ್ಕೆ ಇದೇ ದೃಷ್ಟಾಂತವು. ಆಸಮಯದಲ್ಲಿ ಎಂದಿನಂತೆ ಬ್ರಾಹ್ಮಣನಾಗಿ ನಾರಾಯಣನ ಭಕ್ತನಾದನು. ಇಲ್ಲಿ ತನ್ಮ ಭಕ್ತನು ಎಂದಿನಂತೆ ಪುತ್ರದಾರಾದಿಗಳೊಡನೆ ಸುಖದಲ್ಲಿ ಇದ್ದು ಮತ್ತು ಗಾನಪ್ರತನಾಗಿಯೂ ಇದ್ದು ನಾರಾಯಣನ ಪದವಂ ಐದಿದನು ಎಂದು ಭೂದೇವಿಯರಿಗೆ ಆದಿವರಾಹಸ್ವಾಮಿಯು ಬುದ್ಧೀಗರಿಸಿದರು ಎಂಬ ಬಳಿಗೆ ವರಾಹಪುರಾಣದ ನಲ್ವತ್ತನಾಲ್ಕನೇ ಅಧ್ಯಾಯ ಪರಿಸಮಾಪ್ತಿ. ಮಂಗಳ ಮಹಾಶ್ರೀ.

**ವಿಷಯ :** ಕೈಶಿಕ ದ್ವಾದಶಿಯ ಮಾಹಾತ್ಮ್ಯೆ.

**ವಿಶೇಷ :** ಅಸಮಗ್ರ. ಇದು ವರಾಹಪುರಾಣದಲ್ಲಿ ವರಾಹ ಭೂಮಿ ಸಂವಾದವೆಂದು ಉಕ್ತವಾಗಿದೆ. ಇದೇ ಪುಸ್ತಕದಲ್ಲಿ ನಾರಾಯಣ ಕವಚ, ರುಕ್ಮಾಂಗದ ಎಂಬೆರಡು ಗ್ರಂಥಗಳಿತಿ.

—ಕೆಆರ್‌ಎಸ್

## 554

ಕೆ. ೧೦೦೬/೧೧ **ಕೊಟ್ಟೂರಯ್ಯನ ಅಷ್ಟಕ** ವೃತ್ತ
೭.೭" × ೧.೫" ? ?
೨೯-೩೦ ಪತ್ರ ೭ ಪಂಕ್ತಿ ೩೮ ಅಕ್ಷರ

**ಆದಿ :** ಕೊಟ್ಟೂರಯ್ಯನ ಅಷ್ಟಕ||
ಬಟ್ಟೆಗಂಗಳೆ ಬಾರೆಲೆ ತೋರವು ಭಾನು ಜೊಲ್ದು ಪ್ರಕಾಸನ
ಯಿಷ್ಟರೊಳಗಿನ ಕೊಟ್ಟೆ ತೇಜನಾ ಕೊಟ್ಟೂರ ಬಸವ ಲಿಂಗೇಶನಾ|
ಮರಮರ್ದನವು ಜೂಟ್ಟನ ಮರುತನ ಸಖನೇತ್ರನಾ
ಮುರು ಪುರವನು ಸುಟ್ಟ ದೇವನ ಮೂರು ಲೋಕ್ಯದಿ ವಂದ್ಯನಾ

ಆರು ಅರಿಗಳ ಮಾಜಿಂದಚಲನೆ ಮೂರು ಮಲಗಳ ಜರಿದನ
ಆರು ಭಜಿಸಲು ಕರುಣವೀವನು ವುದಾರ ಚಿನ್ಮಯರೂಪನಾ ||೧||

ಅಂತ್ಯ : ಅಷ್ಟದಿಕ್ಕಿಗೆ ಪೇರುವಡದಿಹ ಕೊಟ್ಟೂರ ಪಟ್ಟಣವಾಸದಿ
ದ್ರುಷ್ಟ ಮೂರುತಿ ದೂರಿತನಾಶನಾ ಕೊಟ್ಟ ಪವಿಯು ಬೇಡನಾ
ಯಿಷ್ಟಲಿಂಗದಿ ನಟ್ಟ ದ್ರುಷ್ಟಿಯು ಬಿಟ್ಟು ಹಿಂಗದ ಮಹಿಮನಾ
ಕಟ್ಟಳೆಯಿಂದಲಿ ಭಜಿಸಿರೆಲ್ಲರು ಕೊಟ್ಟೂರ ಬಸವಲಿಂಗೇಶನಾ ||೮||
ಬಸವಾಷ್ಟಕಮಿದಂ ಪುಣ್ಯಂ ಯಃ ಪಠೇ ಶಿವಸಂನಿಧೌ
ಶಿವಲೋಕೇ ಮವಾಪ್ನೋತಿ| ಶಿವೇನ ಸಹಮೋದತೇ ||೧||

ವಿಷಯ : ಬಸವಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಷಡ್ವಕ್ತ್ರ(ಸಂ), ಮಂಗಳಾಷ್ಟಕ(ಸಂ), ಗುರು ಸ್ತೋತ್ರದ ತ್ರಿವಿಧಿ ಇತ್ಯಾದಿ ೨೧ ಗ್ರಂಥಗಳಿವೆ.

—ಕೆಆರ್‌ಎಸ್

## 555

ಕೆ. ೧೭೫೦/೭ **ಕೊಟ್ಟೂರಯ್ಯನ ಅಷ್ಟಕ** ವೃತ್ತ

೧೦.೨″×೧.೯″ ? ?

೧೮-೧೯ ಪತ್ರ ೧೦ ಪಂಕ್ತಿ ೫೦ ಅಕ್ಷರ

ಆದಿ : ಶ್ರೀಗುರುವೇ ಗತಿ|| ಕೊಟ್ಟೂರಯ್ಯನಾಷ್ಟಕ||
ಬಟ್ಟಗಂಗಳೆ ಬಾಲೆ ತೋರಮಭಾಮ ಜೂಟಪ್ರಕಾಶನಾ
ಯಿಷ್ಟರೊಳಗಿನ ಕೋಟಿತೇಜನಾ ಕೊಟ್ಟೂರ ಬಸವಲಿಂಗೇಶನಾ|| ||ಪದ||
ಮಾರಮರ್ದ್ದನ ಮಾವುಜೂಟನ ಮಾರುತಸಖನೇತ್ರನಾ
ಮೂರುಪುರವನು ಸುಟ್ಟದೀಶನ ಮೂರುಲೋಕಕೆ ವಂದ್ಯನಾ
ಆರು ಭಜಿಸಲು ಕರುಣವೀವನುಧಾರ ಚಿನ್ಮಯ ರೂಪನಾ ||೧||

ಅಂತ್ಯ : ಅಷ್ಟದಿಕ್ಕಿಗೆ ಪೆಸರುವಡದಿಹ ಕೊಟ್ಟೂರ ಪಟ್ಟಣವಾಸನಿಂ
ದೃಷ್ಟಮೂರುತಿ ದುರಿತನಾಶನಾ ಕೊಟ್ಟು ಪದವಿಯು ಬೇಡನು
ಯಿಷ್ಟಲಿಂಗದಿ ನಷ್ಟದೃಷ್ಟಿಯು ಬಿಟ್ಟು ಹಿಂಗದ ಮಹಿಮನಾ
ಕಟ್ಟಳೆಯಿಂದಲಿ ಭಜಿಸಿರೆಲ್ಲರು ವಿರಕ್ತ ಬಸವಲಿಂಗೇಶನಾ||

ವಿಷಯ : ಭಕ್ತಿಭಾವಗಳ ನಿರೂಪಣೆ.

ವಿಶೇಷ : ಇದೇ ಕಟ್ಟಿನಲ್ಲಿ ಶೀಲವಂತಯ್ಯನ ತ್ರಿವಿಧಿ, ಶಂಕರದೇವರ ಕಂದ, ಮಂತ್ರ

ಮಹಾತ್ಮೆಯ ಕಂದ, ಮರುಳಡೇವರ ಕಂದ, ಅಕ್ಷರಮಾಲಿಕಾ ಗದ್ಯ ಇವೇ ಮೊದಲಾದ ೨೫ ಕೃತಿಗಳಿವೆ.

—ವೈಸಿಬಿ

## 556

ಕೆ. ೧೦೭೪/೧ | ಕೊಟ್ಟೂರಯ್ಯನ ಕಂದ | ಕಂದ

೪" × ೧.೯" | ಮುಖಬೋಳು ಸಿದ್ಧರಾಮ | ಸು. ೧೬೫೬

೧-೨ ಪತ್ರ | ೧೦ ಪಂಕ್ತಿ | ೨೬ ಅಕ್ಷರ

**ಆದಿ:** ಶ್ರೀಗುರು ಬಸವಲಿಂಗಾಯ ನಮಃ|| ಮುಖಬೋಳು ಸಿದ್ಧರಾಮೇಶ್ವರ ದೇವರು ನಿರೂಪಿಸಿದ ಕೊಟ್ಟೂರಯ್ಯನ ಕಂದ||

ಶ್ರೀಮದ್ಗುರುವರ ಶಂಕರ
ಹೇಮಾಚಲವಾಸ ಯಿಾಸ ಮುನಿಗುಣಶೇವಿತ
ಕಾಮಪಿತ ನಯನಘ ಜಿತ
ಪ್ರೇಮದಿ ಸಲಹೆನ್ನ ಬಸವಲಿಂಗಪ್ರಭುವೆ ||೧||

**ಅಂತ್ಯ:** ದುಷ್ಟರ ನಿಗ್ರಯಿಸುತ್ತಂ
ಸ್ರೇಷ್ಟರ ಪ್ರತಿಪಾಲಿಸುತ್ತಂ ತ್ರೈಜಗವ ರಕ್ಷಿಸುತ
ಯಿಷ್ಟಸಿದಿಗಳನೀವುತಂ
ಕೊಟ್ಟೂರೊಳು ನಿಂದೆ ಬಸವಲಿಂಗಪ್ರಭುವೆ ||೧೫||

**ವಿಷಯ:** ವೀರಶೈವ ಕೊಟ್ಟೂರು ಬಸವೇಶನ ಸ್ತುತಿ.

**ವಿಶೇಷ:** ಇದರ ಜೊತೆಯಲ್ಲಿ ವಚನಗಳು, ಅಷ್ಟಾಂಗಯೋಗದ ವಚನ, ಪ್ರಣಮ ಸಂಬಂಧದ ವಚನ ಇತ್ಯಾದಿ ಇವೆ.

— ಜಿಜಿಎಂ

## 557

ಕೆ.ಬಿ. ೬೯೯/೩೯ | ಕೊಟ್ಟೂರು ಬಸವೇಶ್ವರನ ಅಷ್ಟಕ | ಭಾಮಿನೀಷಟ್ಪದಿ

೭" × ೮ ೫" | ? | ?

೪೭ನೆಯ ಪತ್ರ | ೨೫ ಪಂಕ್ತಿ | ೧೪ ಅಕ್ಷರ

**ಆದಿ:** ಕೊಟ್ಟೂರ ಬಸವೆಶ್ವರನ ಅಷ್ಟಕ||
ಶರಣು ಮಾಡಿರೆ| ಶರಣು ಮಾಡಿರೆ
ಶರಣು ಜಾನ ಮಾನಪಿಯಗೆ|
ಮರಣರಹಿತನು ಕರುಣಿಕಾಣಿರೆ
ತ್ರಿಣಯ ಕೊಟ್ಟೂರ ಬಸವಗೆ ||ಪಲ್ಲ||

ಚಾಲಿಗೊಲಿದದು ಹಲಿಸವಿದ್ದನು
ಸೂಲಧರ ಸುರರಾಳ್ದನು
ಜ್ವಾಲನೆತ್ರನು ನೀಲಕಂಠನು ಕಾಲಕಮು ಘಂಡನು
ವೇಲುಸಿರಾಗನು ಸೀಳಿ ತೈಸಪಾಕಟ್ಟ
ತಲಿಯೊಳು ಮೆರದನು ಪಾಲಿಸೊ ಯಂನ
ಪರವು ವೊಸ್ತ್ರವ! ಸಿಕ್ಕಿ ಸಿಲ್ಕಿದದೆವನು ||೧||

**ಅಂತ್ಯ :** ಮುರು ಪುರಗಳ ಸುಟ್ಟ ದೇವನು
ಮುರು ಪುರಗಳ ಗೆಲಿದನು
ಮುರು ಅರನೆ ಬೆರೆಯೊಳನಿವದಾತನು
ಮೂರು ಕಲ್ಲಾ ಶಿವಲ್ಲಾನ
ಮೂರು ಲೋಕಕೆ ಆದಿಪಲಾನು
ಮುನಿವ ಕೊಟ್ಟುರ ಬಸವನ ಬಸವಲಿಂಗ ||೮||

**ವಿಷಯ :** ಕೊಟ್ಟೂರ ಬಸವೇಶ್ವರನ ಮಹಿಮಾವರ್ಣನೆ.

**ವಿಶೇಷ :** ಸಮಗ್ರ ಕೃತಿ, ಶಿಥಿಲಪ್ರತಿ. ಮೋಡಿ ಅಕ್ಷರ. ಅಶುದ್ಧ ಬರವಣಿಗೆ. ಇದರೊಂದಿಗೆ ನೀತಿಪದ ಮುಂತಾದ ಕೃತಿಗಳಿವೆ.

—ಎಂಪಿಎಂ

## 558

ಕೆ.ಬಿ. ೫೬೬ — **ಕೊಡಗೂಸು ಚರಿತ್ರೆ** — ವತ್ಸಲಮಾಲಾ

೧೮″ × ೫.೭″ — ? — ?

೨೦-೨೯ ಪತ್ರ — ೨೫ ಪಂಕ್ತಿ — ೨೪ ಅಕ್ಷರ

**ಆದಿ :** ಕೊಡಗೂಸು ಚರಿತ್ರೆ ಬರೆಯುವುದಕ್ಕೆ ಶುಭಮಸ್ತು ನಿರ್ವಿಘ್ನಮಸ್ತು
ವತ್ಸಲ ಮಾಲಾವೃತ್ತ
ಶ್ರೀವಧುಮಾ ಮಹೇಶಯಾಮಿ
ಚಿತ್ತಪಯೋರಾಜ ದಿನಾಕರಪ್ರಭಾ
ಕಾಮುವಿದೂರ ಕರಿಕಲ್ಮಷಾ ನಾಶಪಮೋಷಾ
ನಚ್ಚಿನ ಪ್ರೇಮಾ ಭವಾದ್ರಿ ಶಂಭವ ದೂರಗಣೇಶಗ
ಚಾಚಿನಂಬರ ಸ್ತೋಮುಗಣೇಂದ್ರ
ರಕ್ಷಣದುರಿತ ಪಾಹಿ ಶಾಂಕಶೇಖರಃ||

**ಅಂತ್ಯ :** ಸತ್ಯವುೂರುತಿ ಮಂಗಳಂ ಸರ್ತೀಶವಾಹ
ನಿತ್ಯತೃಪ್ತ ಮಂಗಳಂ ಅತ್ಯಧಿಕ ಹಿಮಶಿಲ ಪುರಾಧಿಪ
ನುತ್ತಮ ಶ್ರೀ ವ್ರಷಭೇಶ ಶಿವಲಿಂಗೋತ್ತಮನೆ
ನೀರಾಜನವನೀನರ್ಥಿಯಿಂ ಕೈಕೊಳ್ಳುದ್ವೆ ಜಯ
ಜಯತು ನಿತ್ಯಮಂಗಳಂ ಶ್ರೀ ವೃಷಭೇಂದ್ರ ಜಯತು ನಿತ್ಯಮಂಗಳಂ||
ಇತಿ ಕೊಡಗೂಸು ಕಥಾ ಸಮಾಪ್ತಂ ಮಂಗಳ ಮಹಾಶ್ರೀ.

**ವಿಷಯ :** ಕೋಳೂರ ಕೊಡಗೂಸಿನ ಕಥೆ.

**ವಿಶೇಷ :** ಗ್ರಂಥ ಪೂರ್ಣವಿದೆ. ಕೊಡಗೂಸಿನ ಕಥೆಯನ್ನು ವಿವರಿಸತ್ತಾನೆ. ಸನ್ ೧೮೮೩ ಇಸ್ವಿ ಅಕ್ಟೋಬರ್ ೫ ನೆ ಸ್ವಭಾನು ಸಂವತ್ಸರದ ಆಶ್ವೀಜ ಶುದ್ಧ ೪ ಶುಕ್ರವಾರ ಬೆಳವ ೮ ಘಂಟೆಯಲ್ಲಿ ಪೂರ್ಣಮಾಡಿದರು.

—ಎಂಸಿಪಿ

## 559

| ಕೆ. ೯೪೧/೨ | **ಕೊರವಂಜಿ ಕಥೆ** | ಯಕ್ಷಗಾನ |
|---|---|---|
| ೧೮.೬" × ೧.೬" | ? | ? |
| ೧+೪-೫ ಪತ್ರ | ೭ ಪಂಕ್ತಿ | ೭೫ ಅಕ್ಷರ |

**ಆದಿ :** (೧ನೆಯ ಪತ್ರ) ಶುಭಮಸ್ತು। ಶ್ರೀ ರಂಗನಾಯಕಿ ಸಮೇತ ರಂಗನಾಥಾಯ ನಮಃ। ಅರಸಿನವರ ಮೇಲಣ ನಾಟಕಗಳು|| ಕೊಜವಂಜ ಕಟ್ಟೆ|| XX
(೪ನೆಯ ಪತ್ರ) ಆಂಧ್ರ ಕೊರವಂಜಿ ಸಂಪೂರ್ಣಂ
ಶುಭಮಸ್ತು। ಕನ್ನಡ ಕೊರವಂಜಿ|| (೨)
ಶ್ರೀಕಾಂತನಂಬುಜಾಕ್ಷಂ
ಲೋಕಸ್ತುತ ದಿವ್ಯಚಾರು ಮಹಿಮೋತ್ತುಂಗಂ
ಶ್ರೀ ಕಂಠೀರವ ನೃಪತಿಗ
ನೇಕೈಶ್ವರ್ಯಮನೊಡರ್ಚುಗೀ ರಂಗೇಶಂ||
ದ್ವಿಪದಿ|| ಶ್ರೀಕರಗುಣಧಾಮೆ ಶೃಂಗಾರ ಸೀಮೆ
ರಾಕೇಂದುಬಿಂಬಾಸ್ಯೆ ರಮಣೀಯಲಾಸೆ
ಸರಸಿಜದಳನೇತ್ರೆ ಸನ್ನುತಗಾತ್ರೆ
ಪರಭೃತ ಮೃದುವಾಣಿ ಪನ್ನಗವೇಣಿ।

**ಅಂತ್ಯ :** ಈ ತೆರದಿನನೇಕರಿಗೆ ಪೇಳಿದೆನು
ನಾನು ಪೇಳಿದುದು ತಪ್ಪದು ನಿನಗೂ
ನೆನದ ಕಾರ್ಯ ಕೈಗೂಡಿ
ಸಂತೋಸವಾದಿತು ಕಾಣೆಯಪ್ಪ. ಶ್ರೀ.

**ವಿಷಯ :** ಕೊರವಂಜಿ ಕಥೆ.

**ವಿಶೇಷ :** ಇದರ ಜೊತೆಯಲ್ಲಿ (೧) ಕೊರವಂಜಿ ಕಟ್ಲೆ (ತೆಲುಗು), (೩) ತಿಂಗಳ ಕೊರವಂಜಿ, (೪) ಪ್ರಾಕೃತ ಕೊರವಂಜಿ, (೫) ಪಂಚಾಯುಧ ಕಟ್ಲೆ (ತೆಲುಗು) (೬) ಲಕ್ಷ್ಮೀವಿಲಾಸ (ತೆಲುಗು) (೭) ಕಲವಾಣಿ ವಿಲಾಸಂ (ತೆಲುಗು) (೮) ನಾಟ್ಯವಿದ್ಯಾ ವಿಲಾಸ (ತೆಲುಗು) (೯) ವಸಂತೋತ್ಸವ ವಿಲಾಸಂ (ತೆಲುಗು) (೧೦) ವಿಭಕ್ತಿ ವಿಲಾಸಂ (ಸಂಸ್ಕೃತ, ತೆಲುಗು) ವಿಭಕ್ತಿ ಕಾಂತಾವಿಲಾಸಂ ಸಂಪೂರ್ಣಂ (೧೧) ಅಷ್ಟದಿಕ್ಪಾಲಕ ವಿಲಾಸಂ (ತೆಲುಗು) (೧೨) ಪಾವಕಿ ನಾಟಕಂ (ತೆಲುಗು) (೧೩) ವೈವಸ್ವತಿ ನಾಟಕಂ (ತೆಲುಗು) (೧೪) ನೈಋತಿ ನಾಟಕಂ (ತೆಲುಗು) (೧೫) ವಾರುಣಿ ವಚಕ್ರಮಂ (೧೬) ವಾಯುವಿ ನಾಟಕಂ (ತೆಲುಗು) (೧೭) ಕಾಬೇರಿ (ತೆಲುಗು) (೧೮) ಗೀತಗೋಪಾಲ ಮತ್ತಿತರ ಕೃತಿಗಳಿವೆ. ಪತ್ರ 24, 25, 26 ರಲ್ಲಿ ಕನ್ನಡ ತೆಲುಗು ಹಾಡುಗಳಿವೆ.

—ಎನ್ ಬಿಎ

## 560

| ಕೆ. ೧೪೮೮/೨ | **ಕೊರವಂಜಿ ಕಥೆ** | ಯಕ್ಷಗಾನ |
|---|---|---|
| ೭.೭″ × ೧.೩″ | ? | ಸು. ೧೭೦೦ |
| ೨-೯ ಪತ್ರ | ೬ ಪಂಕ್ತಿ | ೪೬ ಅಕ್ಷರ |

**ಆದಿ :** ....ಪ್ಪವ ವೀಳ್ಯವು ಮಂಜಳಿಯು ಸರ ಹವಳ ಪಚ್ಚೆ ಸರ ಮುತ್ತು ಕೊರ
ಳೊಳು ಹೊಳೆಯುತಾ ಆದಾಳೆ ಕೊರವೀ ||೮||
ಅಂಜನವ ನೆಂಬಿ ಅರಳುಗಂಣಿಗೆ। ಅತಿಹರುಷದಿಂದ ಬೇಗದೀ
ಕಂಜೋದ್ಭವಶ್ರಿಂಗರಿಸಿ ಬೆಳಗುವಾ ಕಂನಡಿಯನೀಕ್ಷಿಸಿದಳೆ। ವನಿತೆ ಕೊರವಿ
||!೯||

**ಅಂತ್ಯ :** ವಚನಾ|| ವುಂಡುಟ್ಟ ಕಂಡ ಕನಸು ಮೊದಲಾದ ವಿವರಂಗಳಂನು ಹೇಳೆನು
ಕೇಳಂಮ್ಮೆಯ|| ಕೇಳೆನು ಹೇಳು ಹೇಳು ಕೊರವಂಜಿ ||೭೨||
ಜಂಪೆ|| ಕಣಿ ಪೇಳೆ ಕಣಿ ಪೇಳೆ ಕಣಿ ಪೇಳೆ ಕೊರವಿ
ಗುಣಗಾಣದೊಳಗೆ ನಿನಗೆಣೆ ಕಾಣೆ....

**ವಿಷಯ :** ಚತುರ್ಮುಖ ಬ್ರಹ್ಮನು ಕೊರವಂಜಿವೇಷದಿಂದ ಬಂದು ದೇವಕಿಗೆ ಭವಿಷ್ಯತ್ಕೃಷ್ಣಾವತಾರದ ಕಥೆಯನ್ನು ತಿಳಿಸುವುದು.

**ವಿಶೇಷ :** ಅಸಮಗ್ರ. ಬರಹ ಅಷ್ಟು ಶುದ್ಧವಾಗಿಲ್ಲ. ಇದೇ ಕಟ್ಟಿನಲ್ಲಿ ಧನ್ಯಕುಮಾರ ಚರಿತೆ ಎಂಬ ಇನ್ನೊಂದು ಕೃತಿಯಿದೆ.

—ಕೆಆರ್ ಎಸ್

561

ಕೆ.ಎ. ೩೪೦/೪ **ಕೊರವಂಜಿ ಕಥೆ** ಯಕ್ಷಗಾನ
೧೧.೫″ × ೭.೭″ ? ೧೯ನೆಯ ಶತಮಾನ
೧-೧೦ ಪತ್ರ ೨೦ ಪಂಕ್ತಿ ೨೦ ಅಕ್ಷರ

ಆದಿ : ಶ್ರೀ ಗಣೆಶ ಶಾರದಾ ಗುರುಭ್ಯೋ ನಮಃ। ಶ್ರೀ ಪ್ರಸಂನ ಕೃಷ್ಣ ಕೊರವಂಜಿ ಕಥೆಯಂ ಬರೆಯುವದಕ್ಕೆ ನಿರ್ವಿಘ್ನಮಸ್ತು॥

ಕಂದ॥ ಶ್ರೀ ಕರ ಗುಣಗಣರಾಜಿತೆ
ನಾಕಾಧಿಪ ಮುಖ್ಯ ವಿಬುಧನಮಿತ ಪದಾಂಭೊ
ಜಾಕಲಿತೆ ಲಲಿತೆಯಂನಂ
ಬೇಕಾದರ್ಥಗಳನಿತ್ತು ವಿಭವದಿ ಸಲಹೆ ॥೧॥

X X X

ನರಪತಿ ಕೃಷ್ಣದರಾಧಿಪ
ವಿರಚಿತ ನವಪಾರಿಜಾತ ವಿಮಲ ಸುಕಥೆಯೊಳ್
ಮುರರಿಪು ಧರಿಶಿದ ವೇಷದ
ಕೊರವಂಜಿಯ ಕಥೆಯ ನಾನು ಕುಶಲದಿ ಪೇಳ್ವೆ ॥೩॥

ಮತ್ತೆಭ॥ ಕಲಿತೊದ್ದಾಮ ಮಣಿಪ್ರಭಾನಿಕರ ಸತ್ಕಲ್ಯಾಣ ಚಿತ್ರಾದ್ರಿ ಸಂ
ವಲಿತೊದಾರ ಮಹಾಮಹೀಸುರ ಪುರಪ್ರಾಂತಾಂಚಿತಕ್ಷ್ಮಾತಳೆಂ
ದ್ರಲಲಾಮೊತ್ತಮ ಕೃಷ್ಣಭೂಪತಿ ಸಭಾಸ್ಥಾನಸ್ಥ ನಾನಾ ಕಲೊ
ಜ್ವಲ ವಿದ್ವಜ್ಜನವೃಂದಮೀಕೃತಿಯ ತಾಂ ಸಂತೋಷದಿಂ ಕೇಳಲಿ ॥೪॥

ಅಂತ್ಯ : ಹರಿಯು ನಿಂನನುಮೆರದು ಕೊಪಗಳಿಲ್ಲ
ಭರದಿ ಜಾರಲು ಮಲಿದೂ।
ಪರಿಪರಿ ಭೊಗದಿ ಮೆರದು ಮೊದವ ಹೊಂದಿ
ಸರಸವನಾಡುತ। ಹರುಷವ ಮಾಡುವ॥ ಭಾಮೆ॥
ಕೊರವಂಜೀ ಕಥೆ ಸಂಪೂರ್ಣ ಮಂಗಳ ಮಹಾಶ್ರೀ.

ವಿಷಯ : ಬ್ರಹ್ಮನು ಕೊರವಂಜಿವೇಷದಿಂದ ಬಂದು ದೇವಕಿಗೆ ಭವಿಷ್ಯತ್ಕೃಷ್ಣಾವತಾರದ ಕಥೆಯನ್ನು ತಿಳಿಸುವುದು.

ವಿಶೇಷ : ಇದೇ ಪುಸ್ತಕದಲ್ಲಿ ಕರಿಯಭಂಟನ ಕಥೆ, ಜೋರಕಥೆ ಮೊದಲಾದ ಇತರ ನಾಲ್ಕು ಗ್ರಂಥಗಳಿವೆ.

—ಬಿಎಸ್ಎಸ್

## 562

ಕೆ. ೧೬೭೫ **ಕೊಲ್ಲಿಪಾಕಿ ಮಹಾತ್ಮೆ** ಯಕ್ಷಗಾನ
೧೬.೬" × ೧.೫" ಗುರು ಮುದ್ದು ಸಂಗಮದೇವ ಸು. ೧೭೦೦
೪೧ ಪತ್ರ ೮ ಪಂಕ್ತಿ ೭೪ ಅಕ್ಷರ

**ಆದಿ :** ಶಿವಲಿಂಗಾಯ ನಮಃ|| XXX ಓಂ ಶ್ರೀ ಪರಮಮುಕ್ತೈಶ್ವರ್ಯ ವೀರಶೈವಾಚಾರಸ್ಥಲದ ಪುರಾಣವೆಂಬ ಕೊಲ್ಲಿಪಾಕಿಯ ಮಹಾತ್ಮೆಯಂ ಬರವುದಕ್ಕೆ ಶುಭಮಸ್ತು|| ಅವಿಘ್ನಮಸ್ತು|| ಸದಾನಂದಾಭಿವೃದ್ಧಿರಸ್ತು|| ವೃತ್ತಪದ್ಯ
ಜಯ ಜಯ ಶಾಂಭವಿ ಶರಜಿತಾದ್ರಿ ನಿವಾಸ ಭುಜಂಗ ಭೂಷಣಾ
ಜಯ ಜಯ ಗಂಗ ತರಂಗ ಜಟಾಧರ ಚಂದ್ರಶೇಖರಾ
ಜಯ ಜಯ ಮಾಯಭಂಗ ಭಸ್ಮಾಂಗ ಪರಾತ್ಪರ ಜಾಲವಿಗ್ರಹಾ
ಜಯ ಜಯ ದೇವ ವಸದೈವ ಜಯಾ ಕೊಣಂಡೂರ್ತಿ ಪುರಾಧಿಪಾ ||೧||

X X X

ನೀ ಹ್ಯಾಗೆ ಯಂನ ಮನದೊಳು
ವೂಹಾಹವ ಮಾಡಿ ಯಿಾ ನುಡಿಸುವ ತರದಿಂ
ನಾ ಹಾಗೆ ನುಡಿಪು ಭಕ್ತಿಯ
ಸಾಹಾಸದಿ ಪೇಳ್ವೆ ಕೊಲ್ಲಿಪೇಕೆ ಮಾಹಾತ್ಮೆ ||೧೦||

**ಅಂತ್ಯ :** ವಸುಧಾಧಿಪಂಗೆ ಯೆದುರಾಗಿ ಬರಲಾ ರಾಜ
ಶಶಿಮೌಳಿ ಶರಣರ ನೋಡಿ ತನ್ನೊಳಗೆ ||೧೧||
ಪರಮಹರುಷರು ಪರಮನಿರ್ವಾಣರಜಹರಿಯ
ದೊರೆಯು ಸಮಾನಕೆನ್ನದಿರಿ ಕೊಳದಾಗೀ ||೧೨||
ಬಂದರೆನುಲಿ ಬಹಳ ಸಂತೋಷದಿಂದಲತಿ
ವಂದನೆಯನವರಿಗೆ ಮಾಡಿ ಧರಣೀಶಾ ||೧೩||

**ವಿಷಯ :** ವೀರಶೈವಾಚಾರದ ಸ್ಥಲಪುರಾಣ.

**ವಿಶೇಷ :** ಅಸಮಗ್ರ. ೧ ರಿಂದ ೨೨ ನೆಯ ಪತ್ರದವರೆಗೆ ಕ್ರಮಾಂಕವಿದೆ. ೨ ನೇ ಪತ್ರವಿಲ್ಲ. ೨೨ ರಿಂದ ಮುಂದಿನ ಪತ್ರಗಳಿಗೆ ಕ್ರಮಾಂಕಗಳಿಲ್ಲ. ಬರಹ ಚೆನ್ನಾಗಿದ್ದರೂ ಅಕ್ಷರಗಳು ಸಣ್ಣದಾಗಿವೆ.

—ಕೆಆರ್ಎಸ್

## 563

ಕೆ. ೯೧೬ **ಕೋಕಶಾಸ್ತ್ರ** ಭಾಮಿನೀಷಟ್ಪದಿ
೧೧.೩" × ೧.೩" ಮಲ್ಲಣ !
೮೯-೧೨೭ ಪತ್ರ ೬ ಪಂಕ್ತಿ ೫೦ ಅಕ್ಷರ

ಆದಿ : ಶ್ರೀ XXX ಕೋಕಶಾಸ್ತ್ರವು ಬರವುದಕ್ಕೆ ನಿರ್ವಿಘ್ನಮಸ್ತು||
ಭಾಮಿನಿ ಷಟ್ಪದ|| ಸೂಚನೆ||

ಪಲ್ಲ|| ಸಕಲ ಪೌರಾಣವನು ಕೇಳ್ದಡೆ
ವಿಕಳಗೊಂಬುದು ಮನವು ಜಗದೊಳು
ಸುಖದ ಸಾಗರ ಮುಕುತಿಯೋಗದ ಕೋಕಶಾಸ್ತ್ರವಿದು||

ಪದನೂ|| ನೆಲದ ಮೇಲಣ ಗಿರಿಗೆ ವೆಗ್ಗಳ
ವೆನಿಪ ಹೇಮಾಚಲದಿ ಪುಟ್ಟಿದ
ಲಲಿತ ಚಂದನಗಂಧಿ ಲಲನಾಕುಲಸಿರೋಮಣಿಯಾ
ಚೆಲುವಿಕೆಯ ಚೈತಂನ್ಯ ಚಂದ್ರಿಕೆ
ಯಳೆನಗೆಯ ಸಿರಿಮೊಗದ ಶಂಕರಿ
ಗೊಲಿದ ದೇವನೆ ಸಲಹು ಶ್ರೀ ಗಿರಿಮಲ್ಲಿಕಾರ್ಜುನನೆ ||೧||

ಅಂತ್ಯ : ಮತಿ ಪ್ರಕ್ರುತಿ ಪ್ರಕಾಶಕ್ಕೆ ಸತ್ಕ್ರುತಿ
ಚತುರ ನಡವದು ಚೋದ್ಯವೆಯಿ
ಪ್ರತಿ ವರುಷ ಮಳೆಗಾಲವಾದಡೆ ಸರ್ವ ಮೇಧಿನಿಯೂ
ಅತಿಶಯದಿ ತಾ ಬೆಳದು ಫಲವನು
ಕ್ಷಿತಿಯು ಕೊಡುವದು ವರಿದೆ ದಕ್ಷ
ಕ್ರತುಹರನ ಕ್ರುಪೆಯಾಗೆ ಮುಕ್ತಿಯು ಸಾಧ್ಯವೇನೆಂದಾ ||೮೮||
ರಾಜ್ಯ ಪಾಲಕನ ಮನೆಯು ಮಧ್ಯ
ತೇಜಿ ಗಜ ರಥ ದ್ರವ್ಯಸಂಪದ
ತೇಜರಾಜಿತ ಚತ್ರ ಮುತ್ತಿನ ಭರಣಮಣಿಮಯದಾ||
.................. ......................
||೮೯|| ಸೊಕ್ಕು ವಿಜೆಯನ ಜಾಜಿಕಾಯಿ ಪತ್ರೆಯು....

ವಿಷಯ : ಕಾಮಶಾಸ್ತ್ರ.

ವಿಶೇಷ : ೭ ನೆಯ ಸಂಧಿ ೮೯ ನೆಯ ಪದ್ಯದವರೆಗೆ ಮಾತ್ರವಿದೆ. ಕೆಲವು ಪತ್ರಗಳ ಅಂಚುಗಳು ಮುರಿದುಹೋಗಿವೆ.

—ಕೆ ಆರ್ ಎಸ್

564

| ಕೆ.ಎ. [illegible] | ಕೋಕಶಾಸ್ತ್ರ | ಭಾಮಿನೀಷಟ್ಪದಿ |
|---|---|---|
| ೧೦.೭" × ೯.೩" | ಮಲ್ಲಣ | ? |
| ೧-೭೮ ಪುಟ | ೨೦ ಪಂಕ್ತಿ | ೧೮ ಅಕ್ಷರ |

ಆದಿ : ಕೋಕಶಾಸ್ತ್ರ ಬರಿಯುವುದಕ್ಕೆ ನಿರ್ವಿಘ್ನಮಸ್ತು.
ಭಾಮಿನೀ ಷಟ್ಪದಿ|| ಸೂಚನೆ|| ಪಲ್ಲ||
ಸಕಲ ಪೌರಾಣವನು ಕೇಳ್ದಡೆ
ವಿಕಳಗೊಂಬುದು ಮನವು ಜಗದೊಳು
ಸುಖದಸಾಗರ ಮುಕುತಿಯೋಗದ ಕೋಕಶಾಸ್ತ್ರವಿದ.||

ಪದನು|| ನೆಲದ ಮೇಲಣಗಿರಿಗೆ ವೆಗ್ಗಳ
ವೆನಿಪ ಹೇಮಾಚಲದಿ ಪುಟ್ಟಿದ
ಲಲಿತ ಚಂದನಗಂಧಿ ಲಲನಾಕುಲಶಿರೋಮಣಿಯ
ಚೆಲುವಿಕೆಯ ಚೈತನ್ಯಚಂದ್ರಿಕೆ
ಯೆಳೆನಗೆಯ ಸಿರಿಮೊಗದ ಶಂಕರಿ
ಗೊಲಿದ ದೇವನೆ ಸಲಹು ಶ್ರೀಗಿರಿ ಮಲ್ಲಿಕಾರ್ಜುನನೆ ||೧||

ಯೇಸು ಪರಿಯಲಿ ಕವಿಕದಂಬದ
ದಾಸ ದಾಸರದಾಸ ನಿಮ್ಮಯ
ಆ ಶಿಶುವು ಮಲ್ಲಣನ ಬಿನ್ನಹ ನಿಮ್ಮ ಶ್ರೀಪದಕೆ ||೨||

ಅಂತ್ಯ : ರಾಜ್ಯಪಾಲಕನ ಮನೆಯ ಮಧ್ಯ
ತೇಜಿ ಗಜ ರಥ ದ್ರವ್ಯಸಂಪದ
ತೇಜರಾಜಿಪ ಛತ್ರ ಮುತ್ತಿನ ಭರಣ ಮಣಿಮಯದ
ಜನ........ಗಳು
ಹೂಜೆ........ ಲೆಯಳುವೆ........
ಮೋಜಿಪುನದೇ ಸುಖದ ತೇಜನು ಮೂಜಗಂಗಳಲಿ ||೪೯||
ಸೊಕ್ಕು ವಿಜಯನ ಜಾಜಿಕಾಯಿ ಪತ್ರೆಯ....

ವಿಷಯ : ಕಾಮಶಾಸ್ತ್ರ.

ವಿಶೇಷ : ಅಸಮಗ್ರ. ೭ ನೆಯ ಸಂಧಿಯಲ್ಲಿ ೪೯ ನೆಯ ಪದ್ಯದವರೆಗೆ ಮಾತ್ರಗ್ರಂಥ ವಿದೆ. ಈ ಗ್ರಂಥದ ಸಂಪ್ರತಿಯು 'ಶ್ರೀ ಪಿ. ಸುಬ್ರಾಯ ಭಟ್ಟ ಪಂಡಿತ' ಅವರಿಂದ ಆಗಿರುತ್ತದೆಂದು ಅಂತ್ಯದಲ್ಲಿ ತಿಳಿದು ಬರುತ್ತದೆ.

—ಕೆಆರ್‌ಎಸ್

## 565

| ಕೆ.ಬಿ. ೭೪೦ | **ಕೋರ್ಟಿನ ಕಟ್ಟಳೆ** | ಗದ್ಯ |
|---|---|---|
| ೬.೫" × ೮.೫" | ? | ? |
| ೧-೧೬ ಪುಟ | ೨೧ ಪಂಕ್ತಿ | ೧೨ ಅಕ್ಷರ |

ಆದಿ: ನಂದಿದುರ್ಗ ಡಿವೀರ್ಜ ಡಿಸ್ಟ್ರಿಕ್ಟ್ ಜಡ್ಜರವರ ಕೋರ್ಟಿನ ಸನ್ ೧೮೯೭ನೇ ಇಸವಿ ವೊರ್ಜನಲ್ ನಂ/೧೪
ವಾದಿ ಮೈಸೂರು ಮಹಾರಾಜಾ ಸಂಸ್ಥಾನದಲ್ಲಿ ವಾಸವಾಗಿರುವ ಮತದಲ್ಲಿ ಲಿಂಗಾಯಿತ (ವೀರಶೈವ) ಜಾತಿಯಲ್ಲಿ ವೀರಶೈವ ಬ್ರಾಹ್ಮಣನು ಆದ ವೀರ ಸಂಗಪ್ಪ ಪ್ರತಿವಾದಿ ಬೆಂಗಳೂರು ಸಿಟಿ ಹಲಸೂರ್ ಪ್ಯಾಟೆಯಲ್ಲಿ ಇರುವ ಮೈಸೂರು ಗೌರ್ನಮೆಂಟ್‌ಗೆ ಜನರಲ್ ಸೆಕ್ರೆಟರಿಯಾಗಿರುವ ವಿ. ರ್ಯ. ನರಸಿಹ್ಮಯ್ಯಂಗಾರ್ರು

ಅಂತ್ಯ: ಪೇಜು ೧೨ ಅಪೆಂಡಿಕ್ಸ್ ಪ್ಯಾರಾ ೩। ಲಿಂಗಾಯಿತರನು ಗಣನೆ ಮಾಡುವಾಗ, ಮತ ಮತ್ತು ಜಾತಿ ಎಂಬ ೩-೪ ನೆ ಕಲಂಗಳಲ್ಲಿ ಲಿಂಗಾಯಿತ ಎಂತಲೇ ದಾಖಲ್ ಮಾಡಬೇಕು XXX ಲಿಂಗಾಯಿತನನ್ನು ಆಯಾಯ ವೊಳಭೇದಕ್ಕೆ ಅವನು ಸೇರಿದವನೊ ಅಲ್ಲವೊ ಎಂಬುವದನ್ನು ಕೇಳಿ ಅವನ ವುತ್ತರವನ್ನು ೫ ನೆ ಕಲಂನಲ್ಲಿ ವಿವರವಾಗಿ ಬರೆಯಬೇಕು.

ವಿಷಯ: ಕೋರ್ಟಿನ ವಿಚಾರ.

ವಿಶೇಷ: ಸ್ಪಷ್ಟವಾದ ಬರವಣಿಗೆ. ಸಮಗ್ರ ಕೃತಿ.

—ಎಂಪಿಎಂ

566

| ಕೆ.ಬಿ. ೭೪೧ | **ಕೋರ್ಟಿನ ಕಟ್ಟಳೆ** | ಗದ್ಯ |
|---|---|---|
| ೬.೫″ × ೮.೫″ | ? | ? |
| ೧-೩೬ ಪತ್ರ | ೨೦ ಪಂಕ್ತಿ | ೯ ಅಕ್ಷರ |

ಆದಿ: ಬೆಂಗಳೂರು ನಂದಿದುರ್ಗದ ದಿವಿರ್ಜ ಡಿಸ್ಟ್ರಿಕ್ಟ್ ಜಡ್ಜಿಯವರ ಕೋರ್ಟಿನ ಸನ್ ೧೮೯೫-೯೬ನೆ ಇಸ್ವಿ ವರಿಜನಲ್ ನಂಬರು ೧೪
ವಾದಿ ವೀರಸಂಗಪ್ಪ ವಗೈರೇ ಪ್ರತಿವಾದಿ ವಿ. ರ್ಯ ನರಸಿಹ್ಮಯ್ಯಂಗಾರವರೂ
ವಾದಿ ಪರ ೧ ನೇ ಸಾಕ್ಷಿ ೧ ನೇ ವಾದಿ ಹೆಸರು ವೀರಸಂಗಪ್ಪ ವಯಸ್ಸು ೫೩ ವರುಷ ಜಾತಿ ವೀರಶೈವ ಅಥವಾ ಲಿಂಗಾಇತ ತಂದೆ ಮಲ್ಲಂಣ ಕಸಬು ವ್ಯಾಪಾರ-ಸ್ಥಳ ಮೈಸೂರು

ಅಂತ್ಯ: ನಂದೀಧ್ವಜದ ವಿಷಯವಾಗಿ ವ್ಯವಹಾರ ಹುಟ್ಟಿದಾಗ ನಾನು ಸೆನಸಸ್ ಸೂಪರಿಂಟೆಂಡೆಂಟ್ ಆಗಿದ್ದೆ ಇತರ ಗದ್ದಲವು ಷುರು ಆಇತು ಯಾಕಂದರೆ ತಮ್ಮನ್ನು ಶೂದ್ರರೆಂಬದಾಗಿ ಬಯ್ಯುತ್ತಾರೆಂದು ಅವರಿಗೆ ಭಯವುಂಟಾಯಿತು ತಮ್ಮನ್ನು ವೀರಶೈವ ಬ್ರಾಹ್ಮಣರೆಂದು ಅರಿಯಬೇಕೆಂಬುದಾಗಿ ಅವರು ಕೇಳಲಿಲ್ಲಾ ತಾ। ೧೦-೮-೯೯ ಯಿಾ ಬಳಿಕ ಇಂಗ್ಲಿಷ್....

**ವಿಷಯ :** ಕೋರ್ಟಿನ ವಿಷಯ.

**ವಿಶೇಷ :** ಅಸಮಗ್ರ ಕೃತಿ. ಸ್ಪಷ್ಟ ಬರವಣಿಗೆ.

—ಎಂಪಿಎಂ

## 567

ಕೆ. ೯೯೦/೧ **ಕೋಡಗದ ಮಾರಯ್ಯನ ಚರಿತೆ** ಸಾಂಗತ್ಯ

೮.೩" × ೨.೧" ನವವೀರ ೧೫೭೦

೧-೧೯ ಪತ್ರ ೧೫ ಪಂಕ್ತಿ ೫೬ ಅಕ್ಷರ

**ಆದಿ :** ಶ್ರೀಗುರುಬಸವಲಿಂಗಾಯ ನಮಃ॥ ಕೋಡಗದ ಮಾರ್ರೈಯಗಳ ಸಂಗತ್ಯ.
ಶ್ರೀಗುರುಮೂರ್ತ್ತಿಗೆ ಹೊಗದ ಕೀರ್ತ್ತಿಗೆ ತ್ರೈ
ಜಗಮಯ ಕರ್ತ್ತಿವಿಗೆ
ಅಘಮಃಚಕ್ರವರ್ತಿಗೆ...... ಶಿರವನು
ದ್ಯೋಗಿಸಿದೆ ಗುರುವಿನ ಕೃಪೆಯಂ ॥೧॥xxx
ಕೋಡಗದ ಮರ್ರೈಯ್ಯನಾಡಂಭರದ ಭಕ್ತ
ಯಾಡಿ ಮೆಚ್ಚಲು ಲಿಂಗದೊಳಗೆ
ಯಾಡಿಪಂ ಕೋಡಗ ಸಹಾ ಪಡಗೂಡಿರ್ದ
ಮಾಡಿಂದ ಕಥೆ ಪೂರ್ವಕದಿ ॥೨೧॥

**ಅಂತ್ಯ :** ಪದಲಕ್ಷಣ ತೊರ್ದಲಿ ನವರಸ ಶಬ್ದ
ಚದುರೆಂಬ ಭಡರವನು
ಅಧಿಕ ಷಟ್ಪದನೆಂಬ ಪದನದೊಳಗೆ ತುಂಬಿ
ಹೂದನಾರಾಗಿತ್ತೆ ಭಕ್ತಿಯೊಳು ॥೨೬೭॥
ಪೋಂನ್ನಮೊ ಶಿವಯೆನ್ನಿ ವೊ ನಮೊ ಸಿದ ಎಂನ್ನಿ
ಓನ್ನಮೋ ಶಿವಶಿವ ಯೆಂನ್ನಿ
ಓನ್ನನೋ ಶಿವ ಎಂಬದು ತಂನ್ನ ಲಿಂಗದ್ದಿ ಮಾರ
ಓನ್ನಮೋ ಶಿವನಾದನೆಂದು ॥೨೨೮॥
ಅಂತು ಸಂಧಿ ಮೂರಕ್ಕಂ ಪದನು ೫೯೯ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಕೋಡಗದ ಮಾರಯ್ಯಗಳ ಕಥೆ.

**ವಿಶೇಷ :** ಅಕ್ಷರವನ್ನು ಸುಲಭವಾಗಿ ಓದಿ ಅರ್ಥಮಾಡಿಕೊಳ್ಳುವುದು ಸ್ವಲ್ಪ ಪ್ರಯಾಸ. ಪತ್ರಸಂಖ್ಯೆ ಸ್ಪಷ್ಟವಾಗಿ ಗೋಚರಿಸದಿರುವುದರಿಂದ ಎಣಿಸಿ ಪತ್ರಸಂಖ್ಯೆ ಹಾಕಿದೆ. ಗ್ರಂಥವು ಪೂರ್ಣವಾಗಿದೆ. ಶಕಟರೇಫವನ್ನು ಸರಿಯಾದೆಡೆಗಳಲ್ಲಿ ಬಳಸಿಲ್ಲ. ಇದೇ ಕಟ್ಟಿನಲ್ಲಿ ಹಡಪದಪ್ಪಣ್ಣಗಳ ವಚನವೆಂಬ ಗ್ರಂಥವಿದೆ.

—ಕೆಆರ್‌ಎಸ್

## 568

ಕೆ.ಎ. ೩೫೭ | **ಕೋಡಗದ ಮಾರಯ್ಯನ ಚರಿತೆ** | ಸಾಂಗತ್ಯ

೧೩.೨″ × ೮.೨″ | ನವವೀರ | ಸು. ೧೫೬೦

೧-೮೮ ಪತ್ರ | ೨೬ ಪಂಕ್ತಿ | ೧೩ ಅಕ್ಷರ

**ಆದಿ:** ಕೋಡಗದ ಮಾರಯ್ಯನ ಚರಿತ್ರೆ. ಶ್ರೀಗುರುಬಸವಲಿಂಗಾಯ ನಮಃ|
ಶ್ರೀ ಗುರುಮೂರ್ತಿಗೆ ತ್ರೈಜಗಕರ್ತುವಿಗೆ
ಆಗೆದು ಚಕ್ರವರ್ತಿಗೆ|
ಬಾಗಿಪೆ ನೆರವನು ಯೋಗಿ ಮಲ್ಲೇಶಗೆ
ಸಾಗಿಸು ಶರಣನ ಕೃತಿಯಾ ||೧||XXX
ಹಿರಿಯ ಬಾಗೂರೊಳು ಪರಮ ಸಿಂಹಾಸನ
ಚರ ಪತ್ರಿಮಮ ಕರ್ತುವೆನಿಪಾ
ಗುರುವು ನಂಜುಂಡನ ಚರಣಕಮಲದೊಳು
ಶಿರಮಣಿವೆನು ಭೃತ್ಯನಾಗಿ ||೨||
ಅವರ ಶ್ರೀಕರದೊಳು ಭವಹರ ಜನಿಸಿರ್ದ
ಶಿವನೆಂಕಾರ ದೇಶಿಕನಾ
ತವಕದ ಶಿಷ್ಯನು ನವವೀರ ಭೃತ್ಯನು
ಅವ ಪೇಳ್ವ ಶರಣರ ಕೃತಿಯಾ ||೩||

**ಅಂತ್ಯ:** ಪದಲಕ್ಷಣ(ವು)ಕೊದವಿದ ನವರಸ ಶಬ್ದ
ಚದುರೆಂಬ ಭಂಡಾರವನು
ಅಧಿಕ ಷಟ್ಪದನೆಂಬ ಸದನದೊಳಗೆ ತುಂಬಿ
ಮದನಾರಿಗಿಂತೆ ಭಕ್ತಿಯೊಳೂ ||೨೩೧||

XXX ಅಂತು ಸಂಧಿ ೩ಕ್ಕಂ ಪದನು ೫೫೫ಕ್ಕಂ ಮಂಗಳ ಮಹಾಶ್ರೀ. ಸಿದ್ಧಾರ್ಥಿ ಸಂವತ್ಸರದ| ಮಾಘ ಶು ೧೦ ಲೂ ಶ್ರೀ ಮತ್ತು ಆಲದಹಳ್ಳಿ ತಿಪ್ಪಣ್ಣನ ಮಗ ಗುರುಬಸವೈಯ್ಯಗೆ ಓದಿಸುವ ಶೇಷಪ್ಪನು ಬರದುಕೊಟ್ಟ ಕೋಡಗದ ಮಾರೈಯ್ಯನವರ ಚಾರಿತ್ರಕ್ಕೆ ಐಶ್ವರ್ಯಮಸ್ತು| ಶ್ರೀ.

**ವಿಷಯ:** ಕೋಡಗದ ಮಾರಯ್ಯ ಎಂಬ ಶರಣನ ಜೀವನ ಚರಿತ್ರೆ.

**ವಿಶೇಷ:** ಈ ಪ್ರತಿಯನ್ನು ಭದ್ರಾವತಿ ತಾಲ್ಲೂಕು, ಮಂಗೋಟೆಯ ಮಠದ ಕರಿಸಿದ್ದಯ್ಯನವರ ಹಸ್ತಪ್ರತಿಯಿಂದ, ತಾ 23-1-56 ರಲ್ಲಿ ಶ್ರೀಮತಿ ಬಿ. ಕೆ. ಪ್ರಭಾಮಣಿಯವರು ಪ್ರತಿಮಾಡಿದ್ದಾರೆ.

—ಬಿಎಸ್‌ಎಸ್

## 569

ಕೆ.ಎ. ೪೦೦/೪ **ಕೋಮಟಿಗರ ಜಾತಿ ಕೈಫಿಯತ್ತು** ಗದ್ಯ
೯.೬" × ೭.೩" ? ?
೧೦೫-೧೧೯ ಪತ್ರ ೧೭ ಪಂಕ್ತಿ ೨೧ ಅಕ್ಷರ

**ಆದಿ :** ಕೋಮಟಿಗರ ಜಾತಿ ಕೈಫಿಯತ್ತು।
ಶ್ರಿಷ್ಟಿ ಆಗುವಲ್ಲಿ ಬ್ರಂಹ್ಮ ಕ್ಷತ್ರಿಯ ವೈಶ್ಯ ಶೂದ್ರ ಯಿಾ ನಾಲ್ಕು ಜಾತಿ ನಿರ್ಮಾಣ ಆದಲ್ಲಿ ವೈಶ್ಯ ಜಾತಿ ಮಾಡೊ ಕ್ರಮ।
ಯಿಾ ವೈಶ್ಯರು ಕೈಲಾಸದಲ್ಲಿ ಯಿಾಶ್ವರನ ಬಳಿಯ ಯಿದ್ದರ್‍ರು ಆಗ—ಆಗ ಪ್ರಪಂಚದಲ್ಲಿ ಕ್ರಯ ವಿಕ್ರಯ ಮಾಡುವದಕ್ಕೆ ವರ್ತಕರು ಯಾರು ಆದ್ದರಿಂದ ನೀಉ ಭೂಲೋಕಕ್ಕೆ ಹೋಗಿ ಯಂಬದಾಗಿ ಮಹಾದೇವರ್‍ರು ಅಪ್ಪಣೆ ಕೊಟ್ಟಲ್ಲಿ।

**ಅಂತ್ಯ :** ಯಿದು ನಿಶ್ಚಯವಾಗಿ ಕೊಟ್ಟು ನಂನ ವಂಶ ನಿರ್ವಂಶವಾಗಲೀ ನಂನ ಜಾತಿಯಲ್ಲಿ ರೂಪಾವತಿಯಾಗಿ ಹುಟ್ಟಿದೇ ನೂರು ಯರಡು ಗೋತ್ರವೇ ಹೊರ್ತು ಆರುನೂರು ಗೋತ್ರಕ್ಕೆ ನೀಉ ಶ್ಯಾರಬ್ಯಾಡರೀ ಯಂದು ಶ್ಯಾಪವ ಕೊಟ್ಟು ಗುಂಡ ಪ್ರವೇಶವಾದರೂ॥

**ವಿಷಯ :** ಕೋಮಟಿಗರ ಜಾತಿ ವಿಚಾರ.

**ವಿಶೇಷ :** ೧೧೯ ರ ಹಿಂಬದಿ ಮತ್ತು ೧೧೦ ಪತ್ರಗಳು ಖಾಲಿ ಇವೆ. ೧೧೧ ನೆಯ ಪತ್ರದ ಒಂದು ಭಾಗದಲ್ಲಿ ಉಪ್ಪರಿಗರ ಕೈಫಿಯತ್ತು ಅಸಮಗ್ರವಾಗಿದೆ. ೧೧೧ರ ಹಿಂಬದಿ ಮತ್ತು ೧೧೨ ನೆಯ ಪತ್ರಗಳು ಖಾಲಿ ಇವೆ. ಇದರ ಜೊತೆಯಲ್ಲಿ ರಂಗನಾಥಸ್ವಾಮಿ ಗುಡಿ ಲೆಖ್ಖ, ಬೆಟ್ಟದಕೋಟೆ ಕೈಫಿಯತ್ತು ಮೊದಲಾದ ಇತರ ನಾಲ್ಕು ಗ್ರಂಥಗಳಿವೆ.

—ಬಿಎಸ್‌ಎಸ್

## 570

ಕೆ. ೧೫೪೯/೨ **ಕೌಶಿಕ ರಾಮಾಯಣ** ಭಾಮಿನೀಷಟ್ಪದಿ
೧೫.೧" × ೨.೨" ಬತ್ತಲೇಶ್ವರ ಸು. ೧೪೩೦
೧೨-೨೩ ಪತ್ರ ೮ ಪಂಕ್ತಿ ೬೮ ಅಕ್ಷರ

**ಆದಿ :** ಕವುಶಿಕ ರಾಮಾಯಣ ಬರವುದಕ್ಕೆ ಶುಭಮಸ್ತು॥
ಶ್ರೀ ಸಕಲ ಜಗವಂದ್ಯನಂಕುಶ
ಪಾಶಮೋದಕ ಪರಶುಧರ ವಿ
ಘ್ನೇಶ ಗಜಮುಖ ಗಣಪ ಲಂಬೋಧರ ಮಹಾಕಾಯಾ

ವಾಸುವಾರ್ಜಿತ ಕಮಲಭವ ಗಿರಿ
ಜೇಶ ಹರಿಪೂಜಿತ ವಿನಾಯಕ
ಯಿಾಶಸುತ ರಕ್ಷಿಸುಗೆ ನಂಮನು ಪಾರ್ವತೀತನೆಯಾ ||೧||

**ಅಂತ್ಯ :** ಪುದವಿಸಂಭವೆಯಂಗವಟ್ಟದಿ
ತೊಡಿಗೆ ರನ್ನವ ಹಡವಳಲ್ಲದೆ
ತೊಡಿಗೆಯಿಂದವೆ ದೇವಿಯೊಪ್ಪಂವಡುವಳೇಯಂದೂ
ಮಾಡದಿ ಭೂಷಿತೆಯಾಗಿ ಕರದಲಿ
ಹಿಡಿದಳೈರಾವತಪ ಮುಪ್ಪವು
ಗಡಣದಬಲೆಯರೊಡನೆ ಬಂದಳು ರಾಜಸಭೆಗಾಗೀ ||೧೧||

**ವಿಷಯ :** ರಾಮಾಯಣದ ಕಥೆ.

**ವಿಶೇಷ :** ಅಸಮಗ್ರ. ಪೀಠಿಕಾ ಸಂಧಿಯಲ್ಲಿ ೧೭ ಪದ್ಯಗಳು, ೧ನೆಯ ಸಂಧಿಯಲ್ಲಿ ೮೪ ಪದ್ಯಗಳು ಹಾಗೂ ಎರಡನೆಯ ಸಂಧಿಯಲ್ಲಿ ೧೧ ಪದ್ಯಗಳು ಮಾತ್ರ ಇವೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಕೌಶಿಕ ರಾಮಾಯಣದ ಪ್ರತ್ಯೇಕವಾಗಿ ಕೌಸಲ್ಯಾ ವಿವಾಹದ ಪ್ರಕರಣ ೧–೧೨ ಗರಿಗಳಲ್ಲಿ ಬಂದಿರುತ್ತದೆ.

—ಕೆಆರ್‌ಎಸ್

## 571

| ಕೆ. ೧೫೯೯/೧ | **ಕೌಶಿಕ ರಾಮಾಯಣ** | ಭಾಮಿನೀಷಟ್ಪದಿ |
|---|---|---|
| ೧೫ ೧″ × ೨.೨″ | ಬತ್ತಲೇಶ್ವರ | ಸು. ೧೪೩೦ |
| ೧-೧೨ ಪತ್ರ | ೮ ಪಂಕ್ತಿ | ೬೮ ಅಕ್ಷರ |

**ಆದಿ :** ಕಲ್ಲಗಾರ ಲಕ್ಷ್ಮೀನಾರಾಯಣ ದೇವರ ಪಾದವೇ ಗತಿ|| ಕಂಶಿಕ ರಾಮಾಯಣ ಬರವುದಕ್ಕೆ ಶುಭನುಸ್ತು|| ಸ್ವಸ್ತಿಶ್ರೀ ಜಯಾಬ್ಧಿ ಜಯಶಾಲಿವಾಹನ ಶಖ ವರುಷ ೧೭೯೨ ನೆಯ ಪರಿವರ್ತಮಾನಕ್ಕೆ ಸಲ್ಲುವ ಪ್ರಮೋದೂತ ಸಂವತ್ಸರದ ಮಾಘ ಶುದ್ಧ ಆಧಿತ್ಯವಾರದಲ್ಲು ರಾಮಕಥಾ ಪ್ರಾರಂಭಾಃ||
ಕುಶಲಭೂಪನ ಮಗಳ ನಿಶಿಯೊಳು
ದಶಶಿರನು ಪಿಡಿತಂದು ಉದದಿಯ
ಬಸುರೊಳಿಡೆ ವಿಧಿವಶದೊಳಾದುದು ಮದುವೆ ದಶರಥಗೆ ||ಪದ||
ಸುರಪತಿಗೆ ಜನಿಸಿದನ ತಂದನ
ನರಸಯುವ್ವೆಯಬೆಂನ ಬಂದನ
ಅರಿಯ ಬಿಗಿದನ ತಾಯ ಸವತಿಯೊಳ್ ಜನಿಸಿದರೆ ಸುತರಾ

ಹಿರಿದು ಸಲಹಿದಗುದಿಸಿದಾತನ
ಕರದೊಳವಚಿಯೋ ಪೋದಸಂಣನ
ಶಿರವನಂದನ ಸಖನ ಹಿರಿಯ ಕುಮಾರಗೆರಗುವೆನೂ

ಅಂತ್ಯ: ಬರೆದ ನಾನಿದ ಕಲಿಯ ಕಾಲದೊಳ್
ನಿರುತ ಪೂರ್ವದ ಪ್ರತಿಯ ಪದಗಳ
ಸರಿವಿಡಿಯೆ ತಪ್ಪುವುದು ನಿದ್ರಾಸಲ್ಯ ಮರವೆಯುಲೀ
ಅರಿತು ತಪ್ಪುವನಲ್ಲ ಮಿಕ್ಕಿನ
ಗುರುಹಿರಿಯರಾದವರು ತಿದ್ದಿದ
ಪರಿವಿಡಿಯೆ ನಡಸುವುದು ಮರದನು ತರಳನಿವನೆಂದೂ ||೫೫||
ಉಭಯ ಸಂಧಿ ೨ ರಕ್ಕೆ ಪದ ೧೨೦ ಕ್ಕಂ ಮಂಗಳ ಮಹಾಶ್ರೀ.

ವಿಷಯ: ದಶರಥನು ಕೌಸಲ್ಯೆಯನ್ನು ವಿವಾಹವಾದ ಪ್ರಸಂಗ.

ವಿಶೇಷ: ಸಮಗ್ರ. ಬರಹ ಚೆನ್ನಾಗಿದೆ. ಆ ಗ್ರಂಥವೂ ರಾಮಾಯಣದ ಕಥಾವಸ್ತುವನ್ನೊಳಗೊಂಡಿದ್ದು ಕೌಶಿಕ ರಾಮಾಯಣವೆಂದೇ ಗ್ರಂಥಾರಂಭದಲ್ಲಿ ಬರೆದಿದೆ.

—ಕೆಆರ್ಎಸ್

## 572

| ಕೆ. ೬೯೫ | **ಕ್ಷಪಣಸಾರ (ಸಟೀಕು)** | ಪ್ರಾಕೃತ |
|---|---|---|
| ೧೧.೪" × ೨.೧" | ನೇಮಿಚಂದ್ರ-ಸಕಲಚಂದ್ರಭಟ್ಟಾರಕ | ? |
| ೧-೧೩೪ ಪತ್ರ | ೧೦ ಪಂಕ್ತಿ | ೫೬ ಅಕ್ಷರ |

ಆದಿ: ನಮಃ ಸಿದ್ಧೇಭ್ಯಃ
ಶ್ರೀ ಸದ್ಧರ್ಮ ಸಮುದ್ರನಂದನವರಸ್ಸಂ ವೃದ್ಧರತ್ನಾಕರಃ
ಸತ್ವೇರ್ವ್ಯೋ ವಿಮಳಾತುಳಸ್ಸುಖಕದೋಲೋಕ ಪ್ರಕಾಶಪ್ರದಃ।
ಉದ್ಯದ್ದೀ.... ದ್ರಮುದವನುತ ಶ್ರೀಪಾದ ಪದ್ಮದ್ವಯೋ
ಯೋಯಊಯಂ ನಮತಾದರಾತ್ಕೃತಧಿಯಸ್ತನ್ನೇಮಿಚಂದ್ರಂ ಸದಾ ||೧||

ಕ್ಷಪಣ ಸಾರಶಾಸ್ತ್ರದ ನಾಂದಿ ಸೂತ್ರದ ವ್ಯಾಖ್ಯಾನಮಿದು। ಶ್ರೀ ಸದ್ಧರ್ಮ ಸಮುದ್ರನಂದನವರ:– ಸಪ್ತಾಂಗರಾಜ್ಯಲಕ್ಷ್ಮಿಯೊಳೆ ಕೂಡಿದ ವಿಶಿಷ್ಟ ಕ್ಷಾತ್ರಧರ್ಮಮನುಳ್ಳ ಸಮುದ್ರವಿಜಯ ವಿಜಯ ಪ್ರಿಯಪುತ್ರಂ, ಸಂವೃದ್ಧ ರತ್ನಾಕರಃ– ಪರಮೋತ್ಕರ್ಷಮನೆಯ್ದಿದ ಪರಮಾವಗಾಢ ಸಮ್ಯಕ್ತ್ವ ಕೇವಲಜ್ಞಾನ ಯಥಾಖ್ಯಾತ ಶುದ್ಧ ಚಾರಿತ್ರಂಗಳೆಂಬ ರತ್ನಂಗಳುತ್ಪತ್ತಿ ಗಾಗರಮಾದಂ

**ಅಂತ್ಯ :** ಅಮುನಾ ಮಾಧವಚಂದ್ರ ದಿವ್ಯಗಣಿನಾ ತ್ರೈವಿದ್ಯ ಚಕ್ರೇಶಿನಾ ಕ್ಷಪಣ ಸಾರಂ ಅಕಾರಿ ಬಾಹುಬಲಿ ಸಂನ್ಮಂತ್ರೀಶ ಸಂಜ್ಞಪ್ತಯೇ ಶಕೆಕಾಲೇ ಶರ ಸೂರ್ಯ ಚಂದ್ರಗಣಿತೇಪ್ಸರೇ ಕ್ಷುಲ್ಲಕೇ ಶುಭದೇ ದುಂದುಭಿವತ್ಸರೇ ವಿಜಯತಾಂ ಆಚಂದ್ರತಾರಂ ಭುವಿ॥ ಕ್ಷಪಣಸಾರ ಸಂಪೂರ್ಣ॥
ಯಾದೃಶಂ ಪುಸ್ತಕಂ ಜೈವಾ ತಾದೃಶಂ ಲಿಖಿತಂ ಮಯಾ।
ಯದಿ ಶುದ್ಧ ಮಶುದ್ಧಂ ವಾ ಮಮದೋಷೆನವಿದ್ಯತೇ॥

**ವಿಷಯ :** ಜೈನತತ್ತ್ವ.

**ವಿಶೇಷ :** ಗುಣಸ್ಥಾನ ಕ್ರಮವನ್ನು ಅನುಸರಿಸಿ ಕ್ಷಪಣಸಾರವನ್ನು ರಚಿಸಿರುತ್ತಾರೆ. ಅನಾದಿ ಸಂಸಾರದಲ್ಲಿ ದೋಷಯುಕ್ತರಾದ ಆತ್ಮರುಗಳು ವಿಶುದ್ಧರಾಗಲು ಅಪಗಾಢ ಸಮ್ಯಕ್ತ್ವವೇ ಮೊದಲಾದ ವಿಷಯಗಳನ್ನು ಚೆನ್ನಾಗಿ ಚರ್ಚಿಸಿದ್ದಾರೆ. ಗ್ರಂಥ ಪೂರ್ಣವಾಗಿದೆ. ಶುದ್ಧವಾಗಿದೆ. ಈ ಕ್ಷಪಣಸಾರ ಗ್ರಂಥದ ಕೊನೆಯ ಭಾಗದಲ್ಲಿ ವ್ಯಾಕರಣ ಗ್ರಂಥದ ಒಂದು ಓಲೆ ಇದೆ. ಅದು ಸಹ ಸಂಸ್ಕೃತ ವ್ಯಾಖ್ಯಾನದೊಡನೆ ಕೂಡಿರುವುದಾಗಿದೆ. ಗ್ರಂಥ ತ್ರುಟಿತವಾಗಿದೆ.

—ಎಂಸಿಪಿ

## 573

| ಕೆ. ೮೯೧/೨ | **ಖಗಪುರಿ ಚೆನ್ನನೀತಿ** | ಕಂದ |
|---|---|---|
| ೮.೯" × ೧.೩" | ಲಕ್ಷ್ಮಯ್ಯ | ೧೭೨೩ |
| ೬೯-೧೦೩ ಪತ್ರ | ೫ ಪಂಕ್ತಿ | ೩೮ ಅಕ್ಷರ |

**ಆದಿ :** ....ಗಂತುಜ ಸಖ ಹೇಳಿಗೊಂಬನೆ
ಅಂಜುವನೇ ಕವಿಗೆ ಮುನ್ನ ಖಗಪುರಿ ಚೆನ್ನಾ ॥೧೨॥
... ಚನವೃತವ ತಂದೊಡೆ ಬರಡಿನ ಬಕತರು ಮದುಂಟೆ ಲೋಕದ ನೀತಿಯು ಗರುಡಿಯನು.... ಉ ಜರಡುಗವಿಪೇಳೆ....ಣ ಖಗಪುರಿ ಚೆಂನ್ನಾ ॥೧೩॥

**ಅಂತ್ಯ :** ಸುರಧನವು ಹೆಣನತೋಡಿಯು
ಬಿರುಗಾಳಿಯ ದೀಪ ಕತ್ತಿಗೊಡ್ಡಿದ ಕಂಠ
ವುರಗನ ವದನಥ ಕರವುಂ
ದರಿಯದ ನೃಪಸಿರಲು ಕೇಳೋ ಖಗಪುರಿ ಚೆಂನಾ ॥೨೯೮॥
ಕವಿಲಕ್ಷ್ಮಯ್ಯನವರು ಹೇಳಿದ ಕಂದಪದ್ಯ ಸಮಾಪ್ತಂ

**ವಿಷಯ :** ನೀತಿ ಪದ್ಯಗಳು.

**ವಿಶೇಷ :** ಅಸಮಗ್ರ. ಅಲ್ಲಲ್ಲಿ ಪತ್ರಗಳ ಅಂಚುಗಳು ಮುರಿದು ಲುಪ್ತವಾಗಿವೆ. ಹುಳು ಹೊಡೆದಿದೆ. ಇದೇ ಕಟ್ಟಿನಲ್ಲಿ ಅಷ್ಟಪದಿ ಎಂಬ ತೆಲುಗು ಗ್ರಂಥವಿದೆ.

ಗ್ರಂಥಾಂತ್ಯದ ಪತ್ರದ ಮತ್ತೊಂದು ಪಾರ್ಶ್ವದಲ್ಲಿ ಬಾಲರಾಮಾಯಣ ಎಂಬ ಸಂಸ್ಕೃತ ಕೃತಿಯನ್ನು ಬರೆಯಲು ಆರಂಭಿಸಿರುವುದನ್ನು ಗಮನಿಸ ಬಹುದು.

—ಕೆಆರ್‌ಎಸ್

## 574

ಕೆ.ಎ. ೪೬೦/೨ | ಖಗಪುರಿ ಚೆನ್ನನೀತಿ | ಕಂದ

೯.೫" × ೧೦.೩" | ಲಕ್ಷ್ಮಯ್ಯ | ೧೨೬೩

೩-೪೭ ಪುಟ | ೨೦ ಪಂಕ್ತಿ | ೧೫ ಅಕ್ಷರ

**ಆದಿ:** ಕಂಜಸಖ ಹೇಳಿಗೊಂಬನೆ
ಅಂಜುವನೆ ಕವಿಗೆ ಮುನ್ನ ಖಗಪುರಿ ಚೆನ್ನಾ ||೧೦||
........ಡನಮ್ಮ ತವ ತಂದಡೆ
ಬಕ ತರುವುದುಂಟೆ ಲೋಕದ ನೀತಿಯು ಗರುಡಿಯುನ
ಉ ಜರಡುಗವಿ ಪೆಳಗಣ ಖಗಪುರಿ ಚೆನ್ನಾ ||೧೩||

**ಅಂತ್ಯ:** ಸಂದುಣಿ ತೀರಲು ನೀನೇ
ಬಂದುರೆ ಹೋಗೆಂಬ ಹೀನಮಾನವ ಹೆಡ್ಡನು
ಇಂದು ನಾಳೆನಲು ಸಿರಿತಾ
ಕಂದಲ ನೀರೇನೊ ತನಗೆ ಖಗಪುರಿ ಚೆನ್ನಾ ||೨೪೭||
ಸುರಧನವು ಹೆಣನ ತೊಡಿಗೆಯುಂ
ಬಿರುಗಾಳಿಯು ದೀಪ ಕತ್ತಿಗೊಡ್ಡಿದ ಕಂಠವು
ಉರುಗನ ವದನಥಕರ ಮುಂ
ದರಿಯುದ ನೃಪನಿರಲು ಕೇಳೊ ಖಗಪುರಿ ಚೆನ್ನಾ ||೨೩೮||
ಕವಿ ಲಕ್ಷ್ಮಯ್ಯನವರು ಹೇಳಿದ ಕಂದಪದ್ಯ ಸಮಾಪ್ತಂ||

**ವಿಷಯ:** ನೀತಿನಿರೂಪಣೆ.

**ವಿಶೇಷ:** ಇದೇ ಪುಸ್ತಕದಲ್ಲಿ ನೀತಿಸಾರ ಎಂಬ ಗ್ರಂಥವಿದೆ.

—ವೈಸಿಬಿ

## 575

ಕೆ. ೧೪೭೪ | ಖಗೇಂದ್ರಮಣಿದರ್ಪಣ | ಚಂಪು

೯" × ೧.೮" | ಮಂಗರಸ | ಸು. ೧೩೬೦

೧-೬೯ ಪತ್ರ | ೮ ಪಂಕ್ತಿ | ೫೦ ಅಕ್ಷರ

**ಆದಿ:** ಶ್ರೀಮದ್ಗೀರ್ವಾಣ ಶೋಣಾಮಳ ಮಣಿಮಕುಟಾದ್ಯತ್ಪ್ರಭಾವಲ್ಲರೀಪ್ರೋ
ದ್ಭಾಮಾಂಘ್ರಿ ದ್ವ....ಸ್ವಾತ್ಮರ್ಥವಿನ್ನಿ

ಷ್ಕಾವಮಂ ಸೋಮಾರ್ಕ್ಕ ಕೋಟಿದ್ಯುತಿ ವಿಮಳ ಗುಣಾಮುಕ್ತಿ ಸೌಖ್ಯಾವನಿಜಾ ರಾಮಂ ಶ್ರೀ ಪಾರ್ಶ್ವನಾಥಂ ನಿರವಧಿಕ ಸುಖಾ ವಾಪ್ತಿಯಂ ಮಾಳ್ಕೆ ನಂಮೊಳ್॥

**ಅಂತ್ಯ :** ಆದಕ್ಕೌಷಧಂ॥ ಚಿತ್ರಾದ್ರಕೇಂದ್ರ ವಾಸುಕಿರುಣಿ ಸತ್ರಿಫಲಾ ಕಟುಕ ರಾಜ ಕೋಶಾತತಿಯಂ ಸತ್ರಂಗಳೊಡನೆ ತುಡೆ ವಿಷವಿತ್ರಸಂಸಾನ ಮಾತ್ರದಿಂ

**ವಿಷಯ :** ವಿಷವೈದ್ಯ.

**ವಿಶೇಷ :** ಬರಹ ಸುಂದರವಾಗಿದೆ. ಶಕಟರೇಫವನ್ನು ಬಳಸಿದೆ. ಅಸಮಗ್ರವಾಗಿದ್ದು ಚತುರ್ಥ ಆಶ್ವಾಸದವರೆಗೆ ಪೂರ್ಣ ಇದೆ. ಅನಂತರ ಇನ್ನೊಂದು ಗರಿಯಲ್ಲಿ ಮಾತ್ರ ಗ್ರಂಥ ಮುಂದುವರಿದಿದೆ.

—ಕೆಆರ್‌ಎಸ್

## 576

ಕೆ. ೧೫೭೪/೧ **ಖಗೇಂದ್ರಮಣಿದರ್ಪಣ** ಚಂಪು
೧೪″ × ೧.೮″ ಮಂಗರಾಜ ಸು. ೧೩೬೦
೧-೭೭ ಪತ್ರ ೭ ಪಂಕ್ತಿ ೫೫ ಅಕ್ಷರ

**ಆದಿ :** ಶ್ರೀ ವೀತರಾಗಯೆಂ ನಮಃ XXX ಕಗೇಂದ್ರಮಣಿ॥
ಶ್ರೀಮದ್ಗೀರ್ವಾಣ ಶೋಣಾಮಳ ಮಣಿಮಕುಟೋದ್ಯತ್ಪ್ರಭಾವಲ್ಲರೀಪ್ರೋ ದ್ದಾಮಾಂಬ್ರೂದ್ವಂದಕೋಲ್ಪೋಂಘ್ರಿ ಘನನಘನಚಿಂತ್ಯಾಸಮುಸಾರ್ಕುವಿನಿ ಷ್ಕಾಮಂ ಶೋಮಾರ್ಕ ಕೋಟಿದ್ಯುತಿವಿಮಳ ಗುಣಂ ಮುಕ್ತಿ ಸೌಖ್ಯಾವ ನೀಜಾ
ರಾಮು ಶ್ರೀ ಪಾರ್ಶ್ವನಾತಂ ನಿರವಧಿಕ ಶುಖವ್ಯಾಪ್ತಿಯಂ ಮಾಳ್ಕೆ ನಂಮೊಳು ॥೧॥

**ಅಂತ್ಯ :** ಕರಿಯ ಕೌಕೆಯಂ ಸೊಪ್ಪತಂದು ಕೈಯಲಿ ಹೊಸಕಿ ಆ ರಸದೊಳಗೆ ನಾಲ್ಕು ಮೆಣಸನಿಕ್ಕಿ ತಿಂಬುದು ಹೊಟ್ಟೆವಳಗೆ ಯಿದ್ದಂತ ಹೊಟಿರೋಗ ಹೋಹದು.

**ವಿಷಯ :** ವಿಷವೈದ್ಯ.

**ವಿಶೇಷ :** ಅಸಮಗ್ರ. ಪ್ರತಿ ತ್ರುಟಿತ.

—ಜಿಜಿಎಂ

## 577

ಕೆ. ೧೮೧೪ **ಖಗೇಂದ್ರಮಣಿದರ್ಪಣ** ಚಂಪು
೧೦.೫″ × ೧.೬″ ಮಂಗರಾಜ ಸು. ೧೩೬೦
೨-೮೫ ಪತ್ರ ೧೦ ಪಂಕ್ತಿ ೩೮ ಅಕ್ಷರ

ಆದಿ : ... ಕರ್ಬುರ ವಿಲ್ಕಮಳನಾಳದ ನೂಲರಲಂಬು ಮನ್ಮಥಂ
ತ್ರಿಭುವನಮಂ ಭಯಂಗೊಳಿಸಿದಂ ಗಡಮೆಂಬತಿಗರ್ವ....
ಕಂದII ಗುರುಕುಚೆಯರ ಮಜೀತಯಿಂದಂ
ಸ್ಮರನಾರ್ದೆಸಲರಳ ಸರಳ್ಗಳಿಂ ತನ್ನ ತಪ
ಶ್ಚರಣದವಾಗ್ನಿಯಿನುರುಪಿ....

ಅಂತ್ಯ : ಇದು ಸಕಲವಿದಮಲಜಿನೇಂದ್ರೋಕ್ತ ಸಿದ್ಧಾಂತ ಪಯಂಷಿಯೋಧಿ ಪಾರಗ ಶ್ರೀ ಪೂಜ್ಯಪಾದ ಮುನೀಂದ್ರ ಚಾರುವರಣ........ ಮಂಗವಿಭು ವಿರಚಿತಮಪ್ಪ ಖಗೇಂದ್ರಮಣಿದರ್ಪಣದೊಳ್ ಸಕಲ ವಿವರಣಂ ಷೋಡ ಶಾಧಿ ... ಗುಣಶಶಿಶತದಾ ವರುಷದೊಳಂ ಯುಕ್ತಮಾದ ದುರ್ಮತಿ ಸಂವತ್ಸರದ ಮಧುಮಾಸ ಕಾಲದೊಳುರುಪಂ ಭವಿಸಿತು ಜನದಿನದೊಳೀ ಗ್ರಂಥXXX ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೧೬ ಸಂದ ವರ್ತಮಾನ ಜಯಸಂವತ್ಸರದ ಶ್ರಾವಣ ಶು ೧೨ ಲ್ಲು ಮುಕ್ಕೋಡೆಹಳ್ಳಿ....ಯರ ಮಗ ಪದ್ಮರಸಯ್ಯನು ತಮ್ಮ ಹಿರಿಯಣ್ಣಾಜಿಗೆ ಬರೆದಂಥಾ ಖಗೇಂದ್ರ ಮಣಿದರ್ಪಣಕ್ಕೆ ಆಚಂದ್ರಭದ್ರಂ ಶುಭಮ್ಮಂಗ....

ವಿಷಯ : ವಿಷವೈದ್ಯ.

ವಿಶೇಷ : ಅಸಮಗ್ರ. ತೀರಾ ಶಿಥಿಲ ಪ್ರತಿ. ಎಲ್ಲ ಪತ್ರಗಳ ಅಂಚು ಮುರಿದು ಗ್ರಂಥ ಲುಪ್ತ.

—ವೈಸಿಬಿ

## 578

| ಕೆ.ಎ. ೪೦೭ | **ಖಗೇಂದ್ರಮಣಿದರ್ಪಣ** | ಚಂಪು |
|---|---|---|
| ೧೦.೪″ × ೯.೫″ | ಮಂಗರಾಜ | ಸು. ೧೩೬೦ |
| ೧-೨೨೦ ಪುಟ | ೨೦ ಪಂಕ್ತಿ | ೨೦ ಅಕ್ಷರ |

ಆದಿ : ಖಗೇಂದ್ರಮಣಿದರ್ಪಣ
ನಮಃ ಸಿದ್ಧೇಭ್ಯ।
ದೇವಾದಿ ದೇವನಂ ಜೇತ
ಭಾವ ಜನನ ಚಿಂತ್ಯ ಮುಕ್ತಿ ಲಕ್ಷ್ಮೀವರನಂ
ಚಾವಿಸಿ ವಂದಿಸಿ ಜನದಾ
ಸಾವರ ವಿಷಹರನೊಮೆಂಭಿ ಲಕ್ಷಿಸಿ ಪೇಳ್ವೆಂII

ಅಂತ್ಯ : ಕಂII ಯಿಾ ಮಂತ್ರದಿಂದೆ ಸಾಸಿರ
ಹೋಮಂ ತತ್ರುವಿತಮಿತಗ್ರ್ಯರ್ವಾಂ ಲಕ್ಷಜಪಂ

ತಾಮಗಲ್ಪರ ವಿದ್ಯಾ
ನಾಮಚ್ಛೇದನವುದಲ್ತೆ ಶತಭೋಜನರಿಂ॥
ದ್ರಾವಿಡಮಂತ್ರಂ—
ಕಱುವನೊಲ್ಲದ ಆವಿಂಗೆ ಸುಗಂದಿ ಕಲ್ಲುಪ್ಪು ಜೀರಿಗೆ ಹುಲ್ಲಳಿಯಲರದು
ಕಱುವಿನ ಮೈಯ್ಯಂ ಪೂಸಿ ಕಱುವ ನೆಕ್ಕಿಸಲು ಕಱುಗೊಳ್ಗುಂ

**ವಿಷಯ :** ವಿಷವೈದ್ಯ.

**ವಿಶೇಷ :** ಅಸಮಗ್ರ ಪ್ರತಿ. ೧೩ ನೆಯ ಅಧಿಕಾರದನಂತರ ಸ್ವಲ್ಪ ಭಾಗವಿದೆ. ೧೯೧೫ ರಲ್ಲಿ ಮದರಾಸಿನಲ್ಲಿ ಪ್ರತಿಮಾಡಲಾಗಿದೆ.

—ಬಿಎಸ್ಎಸ್

579

| ಕೆ. ೧೭೬೩/೩ | **ಖಡ್ಗ** | ಗದ್ಯ |
|---|---|---|
| ೯.೫″ × ೧.೪″ | ? | ? |
| ೪ ಪತ್ರ | ೫ ಪಂಕ್ತಿ | ೩೫ ಅಕ್ಷರ |

**ಆದಿ :** ಸುಬಮಸ್ತು
ಶರಣು ಶ್ರೀ ಚೆನುವೀರಭದ್ರ ಕರುಣಾಸಮುದ್ರ ದುರಿತ ಬಹುಸಂಹ್ವಾರ ಶರಬಾವತಾರ ತಳಿರಂದಿಗೆಯು ನಾದನಂದಿಗೆಯು ಪಾವುಗೆಯು ಶೆಳೆನಡುವಿನ
ವತ್ಪಾಣದ ವಂಕ್ಕಿಯಜಾಣ ಸುಳಿನಾಭಿಧೀರಾ ವುರಕ್ಕೆ ಮುತ್ತಿನಹಾರಾ ಕಳೆಯುಳ್ಳ ನವರತ್ನ ಚಾಲಕಂಠಮಾಲ ಗರಳ ಸಿರಿಗಳ ರುಂಡಮಾಲಾ ಸುಶೀಲಾ ತಳತಳಿಪ ಕೆಂಮಿಶಾಶೆಗಳಿಂದ್ದ ರವರವರುದ್ರ ಪೊಳೆವ

**ಅಂತ್ಯ :** ಮೇಲುಕೊರಗೆ ಸುತ್ತವಾದಂ ಪೆಕ್ಕಿನ ಭೂಚಕ್ರವಾದಂಬು ಗಜಂಡ್ಡಗೊಡಲಿ ಆಚೆಆಚಳಿನ ಗಜನ ಮಾಯಾಲೆ ಮಾಯಾಲೆ ಹಾಲಿಕುಟ್ಟಿಥನ್ನೆಯಾ ಯೇನಪಾ ಚೆನಃವೀರಭದ್ರ ಶ್ರೀ ವೀರಾದಿವೀರ ಚೆನುವೀರಭದ್ರ.

**ವಿಷಯ :** ವೀರಭದ್ರನ ಸ್ತುತಿ.

**ವಿಶೇಷ :** ಇದೇ ಖಡ್ಗಗಳು ಇದೇ ಕಟ್ಟಿನಲ್ಲಿ ಮುಂದಿನ ಐದು ಪತ್ರಗಳಲ್ಲಿ ಬರೆಯಲ್ಪಟ್ಟಿವೆ. ಇದಲ್ಲದೆ ಕಾಲಚಕ್ರ, ವಿಶ್ವಕರ್ಮಪುರಾಣ ವ್ಯಾಖ್ಯಾನ ಮುಂತಾದ ೮ ಕೃತಿಗಳಿವೆ.

—ಜಿಜಿಎಂ

## 580

ಕೆ. ೧೭೬೩/೪ | ಖಡ್ಗ | ಗದ್ಯ
೯.೫" × ೧.೪" | ? | ?
■ ಪತ್ರ | ೫ ಪಂಕ್ತಿ | ೩೫ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇನ್ನಮಃ॥ ಶುಭಮಸ್ತೂ॥ ಶರಣು ಶ್ರೀ ಜೆನುವೀರಭದ್ರ ಕರುಣಾ ಸಮುದ್ರ ದುರಿತ ಬಹುಸಂಹ್ವಾರ ಶರ್ಭಾವತಾರ ತಳಿರಂದಿಗೆಯು ಪಾವುಗೆಯು ಪಾದವಂದಿಗೆಯೂ ಶೆಳೆನಡುವಿನ ಪಡ್ವಾಣದ ವಂಕಿಜಾಣ ಸುಳನಾಭಿಧೀರಾ ಪುರಕ್ಕೆ ಮುತ್ತಿನಹಾರ ಕಳೆಯುಳ್ಳ ನವರತ್ನ ಚಾಲಕಂಠ ಮಾಗರಳ ಸಿರಿಗಳ ರುಂಡಾಮಾಲ ಸುಶೀಲಾ ತಳಿತಳಿಪ ಕೆಮ್ಮಾಶೆಗಳಿಂದ್ದಾ

**ಅಂತ್ಯ :** ಆಗ ದಕ್ಷಣಗೆ ಪದವಿಭಾಗ್ಯವನಿತ್ತು ಸಲಹಿ ಸಂಬಿದೆನು
ಮುದದಿಂದ್ದ ಶರಣರು ಕರುಣ ಕೃಪದೊರೆಯೆ ಪರಮಪ್ರತಾಪ
ದೊಳಾಡಿ ಪ್ರಮತರು ಕೂಡಿ ಶರಣು ಪ್ರತಿಪಾಲಿಪಸೆಂದ್ದು
ಡಂಗ್ಗುರವ ಪೊಯ್ದು ಶರಣು ಶ್ರೀ ಜೆನ್ವೀರಭದ್ರಾ

**ವಿಷಯ :** ವೀರಭದ್ರನ ಸ್ತುತಿ.

**ವಿಶೇಷ:** ಇದೇ ಖಡ್ಗಗಳು ಇದರ ಹಿಂದಿನ ಐದು ಪತ್ರಗಳಲ್ಲಿ ಪ್ರತಿಯಾಗಿವೆ. ಇದಲ್ಲದೆ ಕಾಲಚಕ್ರ, ವಿಶ್ವಕರ್ಮ ಪುರಾಣ ವ್ಯಾಖ್ಯಾನ ಮುಂತಾದ ಲ ಕೃತಿಗಳಿವೆ.

—ಜಿಜಿಎಂ

## 581

ಕೆ. ೧೭೬೩/೫ | ಖಡ್ಗ | ಗದ್ಯ
೯.೫" × ೧.೪" | ? | ?
೫ ಪತ್ರ | ೫ ಪಂಕ್ತಿ | ೩೬ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ ಖಡ್ಗ ಬರೆಯುದಕ್ಕೆ ಸುಬಮಸ್ತು ಯಿಘರಾಂತ್ತ ಭಟರಾರು ನಿನಗೆ ಜೆದುರ ಮುರವೀರ ಜಗದಂಕ್ಕೆ ಸಂಹ್ವಾರ ಪುರಹರ ಯೆಂಬುದನು ಅರಿಯದೆ ದಕ್ಷಣನು ಬರದಿಂದ ಯಜ್ಞ್ಯವಂನು ಮಾಡಲು ನಂಮ ಪರಮೇಶ್ವರನ ತಾಗಿ ಆಗ ನಂಮ ಶಿವನು ಧರೆಗೆ ವರಗಿ ದರಂತೆ ಮೂಡಲ ವುರಿ ಬಂದು ಲಕ್ಷಯೋಜನರೆಲ್ಲ ಕೇಚರಗಳೆಲ್ಲ ಭೂಚರ ಗಳಾಗಿ ಆಗ ಆಜ್ಞಾಕ್ಷರ ರುದ್ರಾಕ್ಷರ ವೈರಾಗಜಾಕ್ಷರ ಪ್ರಚಂಡಾಕ್ಷರ ಯೆಂಬತ್ತುಕೋಟಿ ರಾಕ್ಷಸರನೆಲ್ಲ ಸಂಹ್ವಾರವನ್ನು ಮಾಡಿದರು.

**ಅಂತ್ಯ :** ತುರಕರ ಖಡ್ಗ.

ಪೀರು ಪೀರು ಲಿಂಗಕ್ಕೆ ವೀರ್ ಮುಸಲ್ಮಾನಕೆ ಪೀರ್
ಯೇಕೀ ಚುಡಾಣಪಿ ಕಂಡ್ಯಾ ಅದಕೊದ
ಯೆಕದುರ್ಗೀ ವಿಜೇಭನ
ಮಾರ್ವಾಸಿ ಮರಾಟಿ ಜುಂಜ್ಜರಿ ಪಟಾಣಿಕ್ಯಾ ಬೋಲೀಜಂಗ್ಗಾಂ
ಕರಾಮತ್ತಿಯೇನೆಂತಂದರೇ
ದಟ್ಟೀ ಅಚ್ಣದಂತ್ತುದಾಡ ಕವಿಗೆ ಪಾವಾಡ
ನಾರ್ಬೀ ಕಂಬ್ಳಾಳಿ ತೂಮೆ ಗುರಾಣಿ ಜಾಗ್ರಿಸ್ತೆ
ಲಿಂಗಾಂಗ್ಗ್ಯ ಲೀಲಾ ವಿನೋದ|| ಶ್ರೀ ಶ್ರೀ ಶ್ರೀ

**ವಿಷಯ :** ವೀರಭದ್ರನ ಸ್ತುತಿ.

**ವಿಶೇಷ :** ಇದಲ್ಲದೆ ಕಾಲಚಕ್ರ, ವಿಶ್ವಕರ್ಮ ಪುರಾಣ ವ್ಯಾಖ್ಯಾನ ಮುಂತಾದ ೮ ಕೃತಿಗಳಿವೆ.

—ಜಿಜಿಎಂ

## 582

ಕೆ.ಎ. ೪೨೩/೧೧ **ಗಂಗಾಧರನ ಅಷ್ಟಕ** ವೃತ್ತ
೮.೪″ × ೧೨.೮″ ? ?
೪೫-೪೭ ಪುಟ ೨೬ ಪಂಕ್ತಿ ೧೭ ಅಕ್ಷರ

**ಆದಿ :** ಚಿಕ್ಕಪ್ರಾಯದಿ ನಿನ್ನ ರೂಪಿಗೆ ಸಿಕ್ಕಿ ದಕ್ಕಿದ ನಾರಿಯಾ
ತಕೆಯೊಳಗೆಗಲಿ ಹೋಹರೆ ದಕ್ಕುಪಾರಿಯ ನಿರೆಯ
ಅಕರಿಂದಲ್ಲಿ ಕರೆದು ಮನ್ನಿಸೋ ಮನ್ನಿಸಿ ಅಧಿಕರ್ತಿವ್ವೈಯ್ಯಾರಿಯಾ
ಮಕ್ಕಳಾಟಿಕ ಬೇಡವೋ ನಿನ್ನ ದಯಿಕೋ ಶ್ರೀ ಗಂಗಾಧರ ||೧||

**ಅಂತ್ಯ :** ಹರುಷದಿಂದಲಿ ನಿನ್ನ ಮಾತಿನ ಮಸಣ ನಾರಿಕುಲತಾಗಿರಿಯಾ
ಕರೆದು ಪ್ರಿಯದಿ ಮಮಕರವ ಪಿಡಿದು ಶುಭಾಂಗಿಯು
ಪರಿಮಳದ ಹೂವು ಹಾಸುವ ಮಂಚದಿ ನೆರದಯ್ಯ ಮೋಹನಾಂಗಿಯು
ಹೊರನ ಭಕ್ತರ ನೀ ಸಲಹೋಕದ್ಗಿರಿಯ ಶಿವಗಂಗಾಧರ ||೮||

**ವಿಷಯ :** ಗಂಗಾಧರನ ಸ್ತುತಿ.

**ವಿಶೇಷ :** ಇದೇ ಪುಸ್ತಕದಲ್ಲಿ ಗುರುಪಂಚವಿಂಶತಿ, ಗಣಸಹಸ್ರನಾಮ, ಹರಗಣಮಾಲೆ, ಮಲ್ಲಿಕಾಮಾಲೆ, ಕಿನ್ನರಿದೇವರು ನಿರೂಪಿಸಿದ ವಚನ, ರಾಜಮಾತಂಗಿ ಮಂತ್ರ, ಸಿದ್ಧೇಶ್ವರನ ಪವಾಡದ ವಚನ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 583

ಕೆ.ಎ. ೫೬೮/೯ **ಗಂಗಾಧರನ ಅಷ್ಟಕ** ವೃತ್ತ
೧೨" × ೯.೮" ? ?
೬೩-೬೪ ಪುಟ ೨೪ ಪಂಕ್ತಿ ೧೯ ಅಕ್ಷರ

**ಆದಿ :** ಗಂಗಾಧರನ ಅಷ್ಟಕ। ಶುಭಮಸ್ತು
ಚಿಕ್ಕ ಪ್ರಾಯದಿ ನಿನ್ನ ರೂಪಿಗೆ ಸಿಕ್ಕಿದಕಿದನಾರಿಯಾ
ತಕ್ಕೆಯೊಳಗಗಲಿ ಹೊಹರೆದಕ್ಕುವಾರಿಯ ನೀರೆಯಾ
ಅ....ರಿಂದಲ್ಲಿ ಕರದು ಮನ್ನಿಸೊ ಅಧಿಕರ್ತಿ ವೈಯ್ಯಾರಿಯಾ
ಮಕ್ಕಳಾಟಿಕೆ ಬೇಡವೊ ನಿನ್ನದಯಕೋ ಶ್ರೀ ಗಂಗಾಧರಾ ॥೧॥

**ಅಂತ್ಯ :** ಹರುಷದಿಂದಲಿ ನಿನ್ನ ಮಾತಿನ....ನಾಲಿಸು ಲತಾಂಗಿಯಾ
ಕರದು ಪ್ರಿಯದಿ ಮಮಕರವ ಪಿಡಿದು ಶುಭಾಂಗಿಯ
ಪರಿಮಳದ ಹೂವು ಹಾಸು ಮಂಚದಿ ನೆರೆಮೋಹನಾಂಗಿಯ
ಹೊರೆವ ಭಕ್ತರನು ನಿಸಲಹೊ ಕೊಲ್ಗಿರಿಯ ಶಿವಗಂಗಾಧರಾ ॥೮॥
ಶ್ರೀ ಗಂಗಾಧರನ ಅಷ್ಟಕ ಸಮಾಪ್ತ

**ವಿಷಯ :** ಕೊಲ್ಗಿರಿಯ ಗಂಗಾಧರನ ಸ್ತುತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಈ ಪುಸ್ತಕದಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

## 584

ಕೆ. ೧೨೨೫ **ಗಂಗೆ ಗೌರಿ ಸಂವಾದ** ಯಕ್ಷಗಾನ
೯" × ೧.೮" ? ?
೧-೯೦ ಪತ್ರ ೮ ಪಂಕ್ತಿ ೪೮ ಅಕ್ಷರ

**ಆದಿ :** ಗಂಗೆ ಗಿರಿಜೆಯರ ಸಂಹ್ವಾದವ ಬರೆಯುವದಕ್ಕೆ ಶುಭಮಸ್ತು॥ ಶೋಭನ ಮಸ್ತೂ॥ ನಿರ್ವಿಗ್ನಮಸ್ತು॥ ಕಂದಾ॥ ಸೂಚನೆ॥ ಶ್ರೀ ಮಹಾ ಕಲ್ಯಾಣ ಪಟ್ಟಣದಲ್ಲಿ। ಪರಮ ಗ್ನ್ಯಾನಶಕ್ತಿಯಾ ಹಂತ್ರ ನೀಲಲೋಚನೆ ತಂಮಾ। ಪುರುಷಾ ಬಸವೇಶ್ವರ ದೇವರಿಗೆ। ನಿರೂಪಿಸಿ ಪೇಳ್ದ। ಗಂಗೆ ಗವುರಿಯರ ಸಂಹ್ವಾದ ಸಮರಸ ಸಂಪೂರ್ನದ ಚಾರಿತ್ರವನು। ಅರುಮೆಂಬ ಗುರುವೆಂಬ ಗ್ನ್ಯಾನವೆಂಬ ಶಿಷ್ಯ ನಿರೂಪಿಸಿ ಪೇಳ್ದ। ಗಂಗೆ ಗಿರಿಜೆಯ ಸಂಹಾದವ ಪೇಳ್ವೆ ಲಾಲಿಸಿ ಶರಣರೂ॥
ಅಂಬರದ ಗಂಗೆಯನು ಬೊಂಬೆರೂಪನೆ ಮಾಡಿ
ಅಂಬಿಗ ಶರಣರಾತ್ಮಜೆಯೆಂದೆನಿಸುತ್ತಂ

ಕುಂಭಿನಿಗೆ ಚೋದ್ಯವೆಂದೆಂಬ ಶಿವಗಂಗೆಯನು
ಹಂಬಲಿಸಿ ತಂದಾ ಹರುಷಾಬ್ಧಿ ಕಥೆಯಂ||

**ಅಂತ್ಯ :** ಜಗದ್ಗುರು ಬಸವ್ವೆಯ್ಯಾನೆ ಕೇಳಿಂನೂ
ಹಗರಣದ ಸತ್ಕಥೆಯನೂ
ವಿಗಡವಿಪ್ರಾದಿ ದಕ್ಷಣ ತಂನ ತಲೆನೀಗಿ
ತಗರೆಲೆಯ ಮಾಡಿಕೊಂಡಾ||
ನಿಗಮ ಗೋಚರನೆ ಕೇಳೂ ನಿರ್ಲೇಪ
ಖಗವಾಹನಾ ನಮಿತನೇ
ಜಗಜಗಿಪ ಬಾಲರ್ಕ ಕೋಟಿ ಶ್ರೀನೀಲಂಮಾ
ಮುಗಿಯಿತ್ತೈದನೆ ಸಂಧೀ ||೪೫||
ಅಂತೂ ಸಂಧಿ ೫ಕ್ಕಂ ಪದನೂ|| ಮಂಗಳ ಮಹಾಶ್ರೀ.

**ವಿಷಯ :** ಗಂಗೆಯನ್ನು ಶಿವನು ತಂದ ಬಗೆ, ಗಂಗೆ ಗೌರಿಯರ ವಾಗ್ವಾದ ಮತ್ತು ದಕ್ಷನ ವೃತ್ತಾಂತ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. [ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ. ಪುಟ ೩೭೫. ಕ್ರಮಾಂಕ 377 ನೋಡಿ.]

—ಕೆಆರ್ಎಸ್

## 585

ಕೆ. ೧೭೬೧/೧ **ಗಂಗೆ ಗೌರಿ ಸಂವಾದ** ಯಕ್ಷಗಾನ
೧೦.೫" × ೧.೧" ? ?
೧-೫೮ ಪತ್ರ ೪ ಪಂಕ್ತಿ ೪೦ ಅಕ್ಷರ

**ಆದಿ :** ಶ್ರೀ ಗಣಾಧಿಪತಾಯ ನಮಃ|| ಶ್ರೀ ಶಾರದ....ಸ್ವಾಮಿಯವರ ದಿವ್ಯ ಶ್ರೀ ಪಾದವೆ ಗತ್ತಿ|| ಶುಭಮಸ್ತು.... ಮಸ್ತುವಿಕೃತ ಸಂವತ್ಸರದ ವೈಶಾಖ ೭ ಗುರುವಾರದಿ... ಗೆ ಅಜಿಪುರದ ದೇವೈಯನವರ ಕುಮಾರ ಉಪಾದ್ಯರು ಬಾಳ್ವಿ.... ಮಾಡಿ|| ನೀಲಲೋಚನ ಬಸವೇಸ್ವರ ದೇವರಿಗೆ| ನಿರೂಪಿಸಿ ಪೇಳ್ದಗಂ ... ಶುಭಮಸ್ತು|| ಕಂದಪದ್ಯ||
ಅಂಬರದ ಗಂಗೆಯನು
ಬೊಂಬೆ ರೂಪ....
ಂಬಿನಿಗೆ ಚೋದ್ಯವೆಂದೆನಿಪ
ಸಿವ ಗಂಗೆಯನು ತಂದಾ ಹರುಷಾ....
XXX ವಚನ| ಗಂಗೆಯ ತಂದ ವಚನವ ಕೇಳಿ ಜನರೆಲ್ಲಾ
ನಮ್ಮ ಸಂಗವೇಶ್ವರ ದೈವಕಿಂದಾ ಮಿಗಿಲಿಲ್ಲಾ ||೪||

**ಅಂತ್ಯ :** ಅಂಧಿಗೆ ಹೋಗೆಂದು ಕುಂದುನುಡಿಯು ಕೇಳಿ
ಚಂದ್ರಶೇಖರನೊಂದು ಹಾಸಾ
ಮುಂದೆ ಮಾಡುವನಲ್ಲವಿಂದಜಡೆಯೊಳಿರ್ದ
ಗಂಗೆಗಿಕ್ಕಿದ ಜಗಳವನೂ ||೫||

ವಚನಾ|| ರಾಗ ತೆಲುಗು ಕಾಂಬೋಧಿ
ಗಂಗೆ ಗಿರಿಜೆ ಜಗಳ ಕೇಳಿ ಜನರೆಲ್ಲಾ
ನಮ್ಮ ಸಂಗಮೇಶ್ವರ ದೈವಕಿನ್ನು ಮಿಗಿಲಿಲ್ಲಾ
ಸತಿಯೂ ನೀಲಾ ರತ್ನಾದೇವಿಯೆಲ್ಲೆ ಹೆಂಣೆ ನಿಂನ್ನ

**ವಿಷಯ :** ಗಂಗೆ–ಗೌರಿಯರು ತಮ್ಮ ಮೇಲ್ಮೆಯನ್ನು ಕುರಿತು ಮಾಡಿದ ವಾದ.

**ವಿಶೇಷ :** ಅಸಮಗ್ರ. ೩ ನೆಯ ಸಂಧಿ ೫ ನೆಯ ಪದ್ಯದವರೆಗೆ ಕೃತಿ ಇದೆ. ಇದರ ಜೊತೆಗೆ ಷಡುಚಕ್ರ, ಭೂಚಕ್ರ, ಕಾಲಚಕ್ರ, ಮುಂತಾದ ೩ ಕೃತಿಗಳಿವೆ.

—ಜಿಜಿಎಂ

## 586

ಕೆ.ಬಿ. ೭೨೯/೧೪ **ಗಂಗೆಹುಟ್ಟು** ಹಾಡು

೩.೭" × ೩" ? ?

೧೨೮-೧೩೮ ಪತ್ರ ೧೦ ಪಂಕ್ತಿ ೧೦ ಅಕ್ಷರ

**ಆದಿ :** ಸುಭಮಸ್ತು| ಗಂಗೆ ಹುಟು ಬರೆಯುವದಕ್ಕೆ ನಿರ್ವಿಘ್ನಮಸ್ತು|| ಶ್ರೀ ಗಂಗಾಯ ನಮಃ ಶ್ರೀರಸ್ತು||
ಯಿಳೆ ನರಜನರ ಪಾವನ ಮಾಡಲೆಂದು ಧರೆಘದೀಕ ಥ್ತಳದ ಕಾಸಿಲೊಗಿ
ನಿಂದೇ ಜಗದ ಜೀವನರಾ ರಂಕ್ಷಿಪವದುವಾದೆ ನಿನಗೆ ಸರಿಯಾರೆ ಮೂಜಗ
ದೊಳಗೆ ಗಾಂಗೇ ಮನಮುಟ್ಟಿ ಭಜಿಸುವೆನು

**ಅಂತ್ಯ :** ವಂದೆ ಕಾಸಿಗುಹಂ ಗಂಗಾಜಾಪನಿಮಣಿಕರ್ನಿಕಾ
ಕಾಸ್ಮಿರ ಬಂದ್ರಾ ಶರರುದ್ರಾಪದಾ ಶ್ರೀರಂಗ ಕೆತ್ರಾರ
ಅನಂತ ಕಂನ್ಯಸ್ವಮಿ ಕುರುಕ್ಷೇತ್ರಾ ಸಧಸಮಸ್ತೆ
ಯಿಂತಿ ಕಾಸಿಖಂಡಾ ಸ್ತೋತ್ರಾ ನಮಸ್ತೆ ನಮಸ್ತೆ
ಗಂಗೆವುಟ್ಟು ಸಂಪೂರ್ಣ ಮಂಗಳಂ ಮಹಃ ಯಿಂತಿ ಗಂಗಾಯ ನಮಃ
ಶ್ರೀ ಶ್ರೀ.

**ವಿಷಯ :** ಗಂಗೆಯ ಇತಿ ವೃತ್ತ, ಸ್ತುತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರೊಡನೆ ಶ್ರೀ ಕೃಷ್ಣೇಂದ್ರ ಗೀತೆ ಮೊದಲಾದ ೧೫ ಕೃತಿಗಳಿವೆ.

—ಜಿಜಿಎಂ

## 587

ಕೆ. ೧೩೫೬/೧೧ **ಗಂಜೀಫು ಲಕ್ಷಣ** ಗದ್ಯ

೧೬.೪″ × ೧.೯″ ಮುಮ್ಮಡಿ ಕೃಷ್ಣರಾಜ ೧೮೫೦

೩೬೮-೩೭೭ ಪತ್ರ ೬ ಪಂಕ್ತಿ ೫೦ ಅಕ್ಷರ

**ಆದಿ :** ಶಾಲೀವಾಹನ ಶಕವರ್ಷಂಗಳು ೧೭೪೫ನೆ ಚಿತ್ರಭಾನು ಸಂವತ್ಸರದ ಆಷಾಢ ಶುದ್ಧ ೧೧ ಭಾನುವಾರದಲ್ಲು ಶ್ರೀಕೃಷ್ಣರಾಜ ಮಹಾರಾಜ ಕಂಠೀರವರು ವಿರಚಿಶಿ ಯಿರುವ ಚಾಮುಂಡೇಶ್ವರಿ ಗಂಜೀಫಿನ ವಿವರಾ॥

ಶ್ಲೋ॥ ಚಾಮುಂಡಾ ವಿಷ್ಣುರೀಶಶ್ಯ ಬ್ರಹ್ಮಾ ಗಣಪತಿ ಸ್ತಥಾ
ಸೇನಾನೀ ರ್ವೀರಭದ್ರಶ್ಯ ರಾಮಕೃಷ್ಣಾ ಮಹಾಫಣೀ।
ಯಿ ಚಾಮುಂಡೇಶ್ವರಿ ಗಂಜೀಫಿಗೆ ಬಾಜು ೧೬ ಕ್ಕೆ ವಟ್ಟು ಯಲೆ ೩೨೦ ಕ್ಕೆ ಚಾಮುಂಡೇಶ್ವರಿ ಬಾಜು ೧ಕ್ಕೆ ೧೮ ಯಲೆ। ಚಿಂನದ ಬಂಣ। ವಿಷ್ಣು ಬಾಜು ೧ಕ್ಕೆ ೧೮ ಯಲೆ। ಇಂಗಲೀಕದ ಬಂಣ। ಯಿಶ್ವರ ಬಾಜು ೧ಕ್ಕೆ ೧೮ ಯಲೆ। ಜಂಗಾಲು ಬಂಣ।

**ಅಂತ್ಯ :** ಯಿ ಮಹಾಕಾಳಿ ಹುಕುಮಿಯಲೆ ಹಗಲು ಆಡಿದರೆ ಮಹತಾಪು ಯನಿಶಿ ಕೊಳ್ಳುತ್ತೆ। ರಾತ್ರಿ ನಡಿದರೆ ಮಹತಾಪು ಯನಿಶಿಕೊಳ್ಳುತ್ತೆ ಮೇಲೆ ಬರದು ಯಿರುವ ವಂದೊಂದು ರಂಗಿನಲ್ಲಿ ಯಿರುವ ಹುಕುಮಿಯು ಯಲೆ ಮೊದಲು ಆಟದವರು ಯಿಳಕೊಂಡು ಆ ಹುಕುಮಿಗೆ ಖರ್ಚಿಯಲೆ ಬಂದದ್ದು ನೋಡಿ ಕೊಂಡು ಮುಂದಕ್ಕೆ ಆಡತಕ್ಕದ್ದು, ಆ ಹುಕುಮಿಗೆ ಖರ್ಚಿಯಲೆ ಯಾರ ಹತ್ತಿರ ಯಿಲ್ಲದೆ ಯಿರುತ್ತೊ ಅವರ ಕಡೆಯಿಂದ ವಂದು ಯಲೆಗೆ ವಂದು ಯಲೆ ಬೂಜು ತೆಗೆದುಕೊಂಡು ಖರ್ಚಿಯಲೆ ಕೊಡುವುದು। ಯಿ ಮೇರೆಗೆ ಆಯಾ ರಂಗಿನ ಖರ್ಚಿಯಲೆ ಪ್ರಕೃತದಲ್ಲಿ ಬೂಜು ಕೊಟ್ಟು ತೆಗೆದುಕೊಳ್ಳು ವದು। ಆಮೇಲೆ ಯಾವ ರಂಗಿನಲ್ಲಿ ಯರಡು ವಂದು ಖರ್ಚಿಯಲೆ ಯಿರುತ್ತೊ ಆ ಯಲೆ ಯಿಳಿದು ಆಟ ಮತ್ತೊಬ್ಬರ ಬಳಿಗೆ ಬರುವಂತೆ ಮಾಡುತ್ತಾ ಆಟದಲ್ಲಿ ಆಯಾ ರಂಗಿನ ಶಕ್ತಿತ್ರಯದ ಹುಕುಮಿ ಯಲೆಗಳಿಗೆ ಖರ್ಚಿಯಲೆ ಗಳು ಭೇದಿಸಿದಂತೆ ಬುದ್ಧಿವಂತರು ನೋಡಿಕೊಂಡಾಡುವುದು.

**ವಿಷಯ :** ಚಾಮುಂಡೇಶ್ವರಿ ಗಂಜೀಫು, ಜಗನ್ಮೋಹನ ಗಂಜೀಫು, ಪಂಚಪಾಂಡವರ ಗಂಜೀಫು, ನವರತ್ನ ಗಂಜೀಫು— ಈ ಆಟಗಳ ವಿವರ.

**ವಿಶೇಷ :** ಇದೇ ಕಟ್ಟಿನಲ್ಲಿ ಚಾಮುಂಡಿಕಾ ಲಘು ನಿಘಂಟು, ದೇವೀ ಸಾಯುಜ್ಯ ಮುಕ್ತಿ ಆಟದ ವಿವರ ಮೊದಲಾದ ಇತರ ೧೮ ಕೃತಿಗಳಿವೆ.

—ವೈಸಿಬಿ

## 588

ಕೆ. ಎ. ೩೪೮ **ಗಂಧಕ ತೈಲಾದಿ ಪ್ರಯೋಗಗಳು** ಗದ್ಯ
೧೩.೨" × ೮.೫" ? ?
೩೨ ಪತ್ರ ೧೯ ಪಂಕ್ತಿ ೧೫ ಅಕ್ಷರ

**ಆದಿ :** ಗಂಧಕ ತೈಲಾದಿ ಪ್ರಯೋಗಗಳು.
ಶ್ರೀ ಮಹಾಗಣಪತಯೇ ನಮಃ|| ನಿಷ್ಪ್ರತ್ಯೋಹಮಸ್ತು||
ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾ ಕೃತಿಂ|
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ||
ಸೂರಕಟ್ಟು|| ನವಾಸಾರ ||೧೦|| ಪೆಟ್ಲು ಉಪ್ಪು ||೩|| ಪಟಿಕಾ ||೩||
ತುರಶೀ ||೩|| ಯಿಾ ಮೂರು ದಿನಸನ್ನು ಪುಡಿಮಾಡಿ ಬೂರಗದ ಚಕ್ಕೆ
ಬೂದಿ ೨ ಪಡಿ| ಯಿಾ ಬೂದಿಯನ್ನು ಗಡಿಗೆಯಲ್ಲಿ ಹಾಕಿ ಮೂರುವಿಧ
ಪುಡಿಯನ್ನು ಹಾಕಿ

**ಅಂತ್ಯ :** ತುತ್ತ ಶ್ವೇತಾರ್ಕ ಕ್ಷೀರದಲ್ಲಿ ೩ ದಿನ ನೆನೆಹಾಕಿ ನಂತರ ಚೀರು ಮಾಡಿ ಪುಠ
ವಿಡಲು ಭಸ್ಮ|| ಗಂಧಕ|| ರಸಮಣಿ ಶಿಲಾ|| ಯಿಂಗಳೀಕ ಮಾದಲದ
ಹಂಣು|| ಕೆಂಪು ಅಗಶೆ| ಹೊಂಮುಗಳು||
ರಸ|| ಕೆಂಪುಗಣಿಕೆ ಸೊಪ್ಪು|| ರಸ|| ಹೊಂಮುಗಳು||

**ವಿಷಯ :** ವೈದ್ಯ–ತೈಲಾದಿಗಳನ್ನು ಬಳಸುವ ಕ್ರಮ.

**ವಿಶೇಷ :** ಈ ಗ್ರಂಥವು "Copy of the manuscript No. K49" ಎಂಬುದಾಗಿ ಆರಂಭದ ಪತ್ರದಲ್ಲಿ ತಿಳಿಸಿರುತ್ತದೆ. ಹಾಗೂ ಗ್ರಂಥಾಂತ್ಯದಲ್ಲಿ "Copied by Smt. B. K. Prabhamani and compared with the assistance of Sri S. N. Krishnajois" ಎಂದು ಬರೆದಿದೆ. ಪತ್ರದ ಒಂದು ಕಡೆ ಮಾತ್ರ ಬರಹವಿದೆ. ಅಸಮಗ್ರ ಗ್ರಂಥ.

—ಕೆಆರ್‌ಎಸ್

## 589

ಕೆ.ಬಿ. ೭೨೭ **ಗಗನ ಹಾರಾವಳಿ** ಭಾಮಿನೀಷಟ್ಪದಿ
೬.೫" × ೮" ನಿರಂಜನಾವಧೂತ ಸು. ೧೭೦೦
೧೫-೨೮೦ ಪುಟ ೨೦ ಪಂಕ್ತಿ ೨೨ ಅಕ್ಷರ

**ಆದಿ :** ..................................ದು
ತನಗೆಯು ಹಾನಿಯಿಲ್ಲದುದಾ|

ತಾನು ಕೇಳಿಯೆ ತಿಳುವೆನೆನುತಲಿ
ತಾನು ಕೇಳಿದರಾಗ ದಿವ್ಯಜ್ಞಾನ| ವೈರಾಗ್ಯಾದಿ ಷಡುವಿಧಾನ
ಗುಣದಿಂದೆ ||೨೫||

ಭಾನುವಿನ ಪರಿ ಬೆಳುಗುತಿಹ ಚಿ
ದ್ಭಾನು ಚಿದ್ಗಗನಾರ್ಯ ಶ್ರೀಗುರು
ನಾನು ನಾನಾ ವಿಷಯ ಚಿಂತೆಯ ಹೀನವೃತ್ತಿಯಲೀ
ನಾನು ಸಿಲುಕಿಯೆ ತ್ರಿವಿಧ ತಾಪದ
ಲಾನು ಬಳಲಿಯೆ ತೊಳಲಿ ದುಃಖಿಪೆ
ಯೇನು ಕಾರಣವೆನಗೆ ಬಂದಿತಿದೇನು ನಾನೇನೂ ||೨೬||

**ಅಂತ್ಯ :** ಕ್ಯಲವು ನೈಯ್ಯಾಯಿಕನು ಯಂಬರು
ಕ್ಯ....ರು ಬ್ರಾಂಹ್ಮಣನೆಂದುಕೊಂಬರು
ಕ್ಯಲರು ಕ್ಷಾತ್ರಿಯ ವೈಶ್ಯ ಸ್ಯೂದ್ರನು....ದು ಬಗೆಯುವರು
ಕ್ಯಲರಿವನು ಪಾಂಚಾಳನ್ಯಂಬರು
ಕೆಲ ... ಚರ‍್ಯನ್ಯೆಂಬರು
ಕ್ಯಲವರೀತ ಗೃಹಸ್ತ ವಾನಪ್ರಸ್ತ ನೆಂನು... ||

**ವಿಷಯ :** ಗಗನಗುರುವಾದ ಈಶ್ವರನ ಮಹಿಮೆ ಹಾಗೂ ವೇದಾಂತ ವಿಚಾರ.

**ವಿಶೇಷ :** ಅಸಮಗ್ರ ಕೃತಿ. ಶಿಥಿಲ ಪ್ರತಿ. ಸುಂದರ ಬರವಣಿಗೆ.

— ಎಂಪಿಎಂ

590

ಕೆ. ೮೩೨ | **ಗಜೇಂದ್ರಮೋಕ್ಷ** | ಭಾಮಿನೀಷಟ್ಪದಿ
೭.೯″ × ೧.೭″ | ? | ?
೧-೧೪ ಪತ್ರ | ೧೦ ಪಂಕ್ತಿ | ೪೦ ಅಕ್ಷರ

**ಆದಿ :** ಶ್ರೀಗಣಾಧಿಪತಯೇ ನಮಃ|| ಶುಭಮಸ್ತು|| ಗಜೇಂದ್ರಮೋಕ್ಷ||
ಶಾಪವಶದಲಿ ಗಜವೆನಿಸಿ ಸರ
ಭೂಪನಿಂದ್ರದ್ಯುಂವ್ನನೆಂಬ ಮ
ಹಾಪುರುಷನೆಸದನು ತ್ರಿಕೂಟಗಿರೀಂದ್ರ ಸಿಖರದಲಿ ||ಪಲ್ಲ||
ಅರಸ ಕೇಳಾ ಪಾಂಡ್ಯದೇಶದ
ಧರಣಿಪತಿ ಧರ್ಮಾತ್ಮನೆಂದನು
ಧರೆಯುಲಿಂದ್ರದ್ಯುಂವ್ನನೆಂಬಭಿಧಾನವನು ಪಡೆದೂ||

ಪರಮವಿಷ್ಣು ವ್ರತಪರಾಯಣ
ನುರುಗುಣಾಂಬುಧಿಯು.... ತಾಂತಃ
ಕರಣನಚ್ಯುತಗೋತ್ರನಿರತನಮೋಘ ಚಾರಿತ್ರಾ ||೧||

**ಅಂತ್ಯ :** ಕೇಳಿದಡೆ ದುಃಸ್ವಪ್ನನಾಶನ
ವಾಲಿಸಿಡಡಕುಲವಿನಾಶನ
ಪೇಳಿ ದಿಶದಿಂದೊಂಮೆ ಕೇಳಲು ಮನವ ಮಾಡಿದಡೆ||
ಆಲಯುವ ಮಾಡುವನು ಲಕ್ಷ್ಮೀ
ಲೋಲನವರೊಳಗೊಲಿದು ತ್ರಿಭುವನ
ಪಾಲಕನು ನಿತ್ಯಾತ್ಮ ಕ್ರುಷ್ಣನಶೇಷಜನಬಂಧೂ ||೩೯||
ಅಂತು ಸಂಧಿ ೩ಕ್ಕಂ ಪದನು ೧೧ಲಕ್ಕಂ ಮಂಗಳ ಮಹಾಶ್ರೀ ಶುಭಮಸ್ತು||
ಸುತ್ರೂರ ಸಿದ್ಧಕ್ಕನಿಗೆ ಸಮಸ್ತ ಕಂಟಕ ನಿವ್ರಿತ್ತಿರಸ್ತೂ|| ರಂಗಧಾಮ
ಕ್ರುಪಾನಿತ್ಯಾಸ್ತು.

**ವಿಷಯ :** ಗಜೇಂದ್ರನು ವಿಷ್ಣುವನ್ನು ಸ್ತುತಿಸಿ ಬಂದೊದಗಿದ್ದ ವಿಪತ್ತಿನಿಂದ ಮುಕ್ತಿ ಗೊಂಡ ಕಥೆ.

**ವಿಶೇಷ :** ಸಮಗ್ರವಾಗಿದೆ. ಬರವಣಿಗೆ ಚೆನ್ನಾಗಿದೆ. ಪತ್ರಗಳನ್ನು ಅಲ್ಲಲ್ಲಿ ಹುಳು ಹೊಡೆದಿದೆ. ಶಕಟರೇಫ ಪ್ರಯೋಗವಿದೆ.

—ಕೆಆರ್ಎಸ್

## 591

ಕೆ. ೯೦೩/೧ **ಗಜೇಂದ್ರಮೋಕ್ಷ** ಭಾಮಿನೀಷಟ್ಪದಿ
೧೬"×೧.೩" ? ?
೩೧ ಪತ್ರ ೩ ಪಂಕ್ತಿ ೫೬ ಅಕ್ಷರ

**ಆದಿ :** ಗಜೇಂದ್ರಮೋಕ್ಷ||
ಶಾಪವಶದಲಿ ಗಜವೆನಿಸಿ ವರ
ಭೂಪನಿಂದ್ರದ್ಯುಮ್ನನೆಂಬ ಮ
ಹಾಪುರುಷನೆಸೆದನು ತ್ರಿಕೂಟಗಿರೀಂದ್ರ ಶಿಖರದಲಿ||
ಪದನೂ|| ಅರಸ ಕೇಳಾ ಪಾಂಡ್ಯದೇಶದ
ಧರಣಿಪತಿ ಧರ್ಮಾತ್ಮನೆಸದನು
ಧರೆಯಲಿಂದ್ರದ್ಯುಮ್ನನೆಂಬಭಿಧಾನವನು ಪಡದೂ||
ಪರಮು ವಿಷ್ಣುವ್ರತಪರಾಯಣ
ನುರುಗುಣಾಂಬುಧಿ ನಿಯಮಿತಾಂತಃ
ಕರಣನಚ್ಯುತ ಗೋತ್ರನಿರತನಮೋಘ ಚಾರಿತ್ರಾ ||೧||

ಅಂತ್ಯ : ಕೇಳಿದಡೆ ದುಸ್ವಪ್ನನಾಶನ
ಪಾಲಿಸಿದಡಕುಲವಿನಾಶನ
ವೇಳೆ....ಮೆ ಕೇಳಲು ಮನವು ಮಾಡಿದೊಡೆ
ಆಲಯುವ ಮಾಡುವನು ಲಕ್ಷ್ಮಿ
ಲೋಲನವರೊಳಗೊಲಿದು ತ್ರಿಭುವನ
ಪಾಲಕನು ನಿತ್ಯಾತ್ಮ ಕೃಷ್ಣನ ಶೇಷಜನಬಂಧು ||೩೯||
....ಮಾಪ್ತ|| ಮಂಗಳ ಮಹಾಶ್ರೀ.

ವಿಷಯ : ಗಜೇಂದ್ರಮೋಕ್ಷದ ಕಥೆ.

ವಿಶೇಷ : ಅಸಮಗ್ರ. ಮಧ್ಯೆಮಧ್ಯೆ ಪತ್ರಗಳು ಲೋಪವಾಗಿವೆ. ದೊರೆಯುವ ಪತ್ರಗಳಲ್ಲಿ ಅಲ್ಲಲ್ಲಿ ಹುಳು ಹೊಡೆದು ರಂಧ್ರಗಳಾಗಿವೆ. ಕೆಲವು ಮುರಿದು ಹೋಗಿವೆ. ಬರಹವು ಬಹಳ ಚೆನ್ನಾಗಿದೆ. ಇದೇ ಕಟ್ಟನಲ್ಲಿ ಕೈಶಿಕ ಪುರಾಣದ ಟೀಕು ಮತ್ತು ನಾರಾಯಣ ಕವಚವೆಂಬ ಗ್ರಂಥಗಳೂ ಇವೆ.

—ಕೆಆರ್ಎಸ್

592

ಕೆ. ೧೩೨೯/೧ — **ಗಟ್ಟಪದಗಳ ಅರ್ಥ** — ಕಂದ,ವೃತ್ತ,ಟೀಕು,ಷಟ್ಪದಿ
೧೦.೫" × ೨" — ? — ?
೧-೨೪ ಪತ್ರ — ೧೦ ಪಂಕ್ತಿ — ೫೪ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ|| ಪದ||
ಕಡೆಗೆ ಕಾಲಾಗ್ನಿ ಕವಿದಟ್ಟಿ ಮೂಲೋಕವಂ
ಸುಡುವೆನೆಂದುರಿ ಮಸಗುವಂತೆ ಶಿಖಿಯಾಗಿ ಜೊ
ಬ್ಬಿಡುವ ಶಿರದಬ್ಬರವ ಕೇಳಿ ಶಶಿಫಣಿಬೆದರೆ ಪಿಂಡದೆರಡು ಭಾಗಮಾಡಿ
ಕಡಲೊಳಿಡಲೊಡನೆ ಬಂಬಲ್ಗಿಡಿಯು ಗಡಣದಿಂ
ದೊಡಭನೊಡಗೂಡಿತೊಂದುಳಿದೊಂದು ಭಾಗವಂ
ಪಿಡಿದು ಭೂತೇಶ್ವರಂ ಭಿಕ್ಷಾಟಣಕೆ ನಡೆವೆನೆಂಬ ಕಾಲೋಚಿತದೊಳು ||೧||

ಟೀಕು|| ಕೇಳಿರೆ ಎಲೆ ಮುನಿಗಳಿರಾ|ಆ ಪರಮೇಶ್ವರವ ಕೈಯೊಳಗಿರ್ದ ಬ್ರಹ್ಮಕಪಾಲದಲ್ಲಿ ರಕ್ತ ಹೊರವಂಟು ತೆರೆಮಸಗಿ| ಸಮುದ್ರೋಪಮಾನವಾಗಿ....

ಅಂತ್ಯ : ಭೃತ ಸಗಧರ್ಮ ಧರ್ಮಪರಿಪಾಲಕರೇಶರೇಶಸಂ
ಗತ ಕಾಮ ಕಾಮದಕ್ಷ... ಸಮಸ್ತಮಸ್ತಕ
ಸ್ಥಿತಪದಸಾರ ಸಾರಸಕುಮಾರ ಕುಮಾರಸ ದಾನದಾಗಲಾ
ಹಿತಹಿತ ದೇವದೇವ ಜಯಜಾಗರಲಾರಮುದ್ಯಶಂಕರಾ||

ಅರ್ಥವು—ಭೃತ ನಗಧರ್ಮ—ಭೃತ ಧರಿಸಲು ಪಟ್ಟ। ನಗ। ಕನಕಾದ್ರಿ ಯೆಂಬ। ಧರ್ಮ್ಮ ಬಿಲ್ಲನುಳ್ಳಂಥಾ XXX ಶಂಕರ। ಸುಖಂಕರನಾದಂಥಾ ಯೆಲೆ ದೇವನೆ। ಜಯ। ಸರ್ವೋತ್ಕರ್ಷನಾಗು॥
ಶಬರಶಂಕರದ ಘಟ್ಟಿಪದಗಳರ್ತ್ಥವು ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ಗುರುಲಿಂಗವಿಭುವಿನ ಭಿಕ್ಷಾಟನ ಚರಿತೆ ಮತ್ತು ಷಡಕ್ಷರಿಯ ಶಬರಶಂಕರ ವಿಲಾಸದ ಗಟ್ಟಿಪದಗಳ ಅರ್ಥ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಕಾಲಜ್ಞಾನ ಮತ್ತು ಕರಸ್ಥಲದ ನಾಗಲಿಂಗನ ತ್ರಿವಿಧಿಗಳಿವೆ.

—ಜಿಜಿಎಂ

## 593

| ಕೆ. ೧೧೩೯/೩೬ | **ಗಣಂಗಳ ತಾರಾವಳಿ** | ಪದ್ಯ |
|---|---|---|
| ೭″ × ೨″ | ? | ? |
| ೧೩೦-೧೩೧ ಪತ್ರ | ೧೦ ಪಂಕ್ತಿ | ೩೮ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ। ಗಣಂಗಳ ತಾರಾವಳಿ॥
ಪಲ್ಲ॥ ಬಸವಾದಿ ಪ್ರಮಥರ ಬಸುರಲ್ಲಿ ನಾಬಂದು
ಹೆಸರ ಹೇಳದೆ ಸುಂಮನಿರಲಾರೆನಯ್ಯಾ॥
ಪದ॥ ಕಕ್ಕಯ್ಯ ಕಲಕೇತ ಬ್ರಂಹ್ಮಯ್ಯ ನಿಜಲಿಂಗ
ಚಿಕ್ಕಯ್ಯ ಬಿಟ್ಟದೇವಯ್ಯ ಚೀಲಾಳಯ್ಯ
ಚಿಕ್ಕಾಂಣ ಮಾದಂಣ ಚೆಂಮುಲಿಗೆಯ ಚಂದಯ್ಯ XXX
ಪ್ರಮಥರಿಂದ ಚಿಕ್ಕಂದು ಮೊದಲಾಗಿ ಬದುಕಿದೆನೆಂದೆನೂ ॥೧॥

**ಅಂತ್ಯ :** ಕಾರಿಕಾಲಂಮ ಗೊಲ್ಲಾಳಯ್ಯ ಮಾನಕಂ
ಜಾರ ಜಂಬೂರ ಮಹಂಕಾಳಿ ದೇವಯ್ಯ XXX
ತೋಱದೆ ಚೆಂನವೀರೇಶಗೆಣೆಯಾದರ ಕಾಣೆನೆಂದೂ ॥೫॥
ಗಣಂಗಳ ತಾರಾವಳಿ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಪ್ರಮಥಗಣಂಗಳ ನಾಮಾವಳಿ.

**ವಿಶೇಷ :** ಈ ಕೃತಿಯೊಂದಿಗೆ ಕಲಿಗಣನಾಥನ ತಾರಾವಳಿ ಮೊದಲಾದ ಇನ್ನೂ ೩೬ ಗ್ರಂಥಗಳಿವೆ. ಅವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

— ಎಸ್‌ಬಿ

## 594

ಕೆ. ೧೮೯೫/೨ | ಗಣನಾಮಸ್ತೋತ್ರದ ತ್ರಿವಿಧಿ | ತ್ರಿವಿಧಿ

೮.೬" × ೨" | ? | ?

೮-೧೫ ಪತ್ರ | ೯ ಪಂಕ್ತಿ | ೨೬ ಅಕ್ಷರ

**ಆದಿ :** ಶ್ರೀಗುರುವೆ ಚಿತ್ಸೌಖ್ಯದಾಗರವೆ ಅಘತಿವಿುರಕಾದಿ
ತ್ಯಗುರುವೆ ಬಾವರೋಗ ಬೇಷಜನೆ
ಬೇಗಾನಿಯನಗೆ ಕೃಪೆಯಾಗು ||೧||
ಅಂಗಜಾ ಹರರುಪ। ಜಂಗಮಾಲಿಂಗವೆ
ಮಂಗಳಾತ್ಮಕನೆ ಮಹಾಗುರುವೆ
ಪ್ರಭುುರಾಯ ಹಿಂಗಾದೆಯನಗೆ ಕೃಪೆಯಾಗು ||೨||
ಹರಿಯಕ್ಷಿಪೂಜಿತನೆ। ಹರಿಸಖನೇತ್ರನೆ
ಹರಿಯಾ ಶಿರದಲ್ಲಿ ನೆರೆತಾಳ್ದ ಹರಿಕಟಕ
ಹರಿಸೆಂನ ಭಾವವಾ ಶ್ರೀಗುರುವೆ ||೩||

**ಅಂತ್ಯ :** ಎಲ್ಲಾ ಪುರಾತನರ ಮೆಲ್ಲಡೆಯಾ ಸ್ತೋತ್ರನನೂ
ಬಲ್ಲಂತೆ ಸ್ತುತಿಸಿ। ದರುಣಾಚಲನೆಂಬವಗೆ
ಅಲ್ಲಮಪ್ರಭುವೆ ಕೃಪೆಯಾಗು ||೭೫|| XXX
ಅಣಿಮಾದೇಗ....ಳ ತೃಣವೆಂದು ಲೆಕ್ಕಿಸದೆ
ಗಣನಾಮಸ್ತುತಿಯಾ ಬರದೋದೆ ಕೇಳಲ್ಕೆ
ತ್ರಿಣೆಯಾನೊಳೈಕ್ಯವಿದು ಸಿದ್ಧಾ ||೭೭|

**ವಿಷಯ :** ಪುರಾತನ ಶಿವಶರಣರ ಸ್ತುತಿ.

**ವಿಶೇಷ :** ಈ ಕಟ್ಟನಲ್ಲಿ ಗಣನಾಮ ಸ್ತೋತ್ರದ ತ್ರಿವಿಧಿ, ಬಸವಸ್ತೋತ್ರದ ತ್ರಿವಿಧಿ, ಮುಂತಾದ ೧೯ ಗ್ರಂಥಗಳೊಂದಿಗೆ ಈ ಕೃತಿ ಇದೆ. ಪತ್ರ ೮ ರಿಂದ ೧೫ರ ವರೆಗೆ ಗಣನಾಮಸ್ತೋತ್ರದ ತ್ರಿವಿಧಿ ಕಂಡುಬರುತ್ತದೆ. ಮೊದಲ ಮೂರು ಪದ್ಯಗಳಿಲ್ಲ. ೧೨ನೆಯ ಪತ್ರ ಮುರಿದು ಲುಪ್ತವಾಗಿದೆ

—ವೈಸಿಬಿ

## 595

ಕೆ. ೧೩೭೬/೧೪ | ಗಣನಾಮಸ್ತೋತ್ರದ ತ್ರಿವಿಧಿ | ತ್ರಿಪದಿ

೨.೦" × ೮.೮" | ? | ?

೪೭-೫೨ ಪತ್ರ | ೧೧ ಪಂಕ್ತಿ | ೩೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಗಣನಾಮ ಸ್ತೋತ್ರದ ತ್ರಿವಿಧಿ||

ಶ್ರೀಗುರುವೆ ಚಿತ್ಸೌಖ್ಯದಾಗರವೆ ಅಘತಿಮಿರಕಾದಿತ್ಯ
ಗುರುವೆ ಭವರೋಗ ಭೇಷಜನೆ
ಬೇಗ ನೀನೆನಗೆ ಕೃಪೆಯಾಗು ||೧||

ಅಂಗಜಹರರೂಪ ಜಂಗಮಲಿಂಗವೆ
ಮಂಗಳಾತ್ಮಕನೆ ಮಹಗುರುವೆ ಪ್ರಭುರಾಯ
ಹಿಂಗದೆ ಯನಗೆ ಕೃಪೆಯಾಗು ||೨||

**ಅಂತ್ಯ :** ಅಣಿಮಾದಿ ಸಿದ್ಧಿಗಳ ತೃಣವೆಂದು ಲೆಕ್ಕಿಸಿದೆ
ಗಣನಾಮ ಸ್ತುತಿಯ ಬರದೋದಿ ಕೇಳಲ್ಕೆ
ತ್ರಿಣೆಯನೊಳ್ಳೈಕ್ಯವಿದು ಸಿದ್ಧ ||೭೬||
ಶ್ರೀಗಣನಾಮ ಸ್ತೋತ್ರದ ತ್ರಿವಿಧಿ ಸಂಪೂರ್ನ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ಸಹಸ್ರ ಗಣನಾಮ.

**ವಿಶೇಷ :** ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳೂ ವಾಗಾದ್ವೈತ ನಿರಸನ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳೂ ಮತ್ತು ಶೀಲವಂತಯ್ಯನ ಆತ್ಮಲಿಂಗಸಂಯೋಗ ಸ್ಥಲವೂ ಇದೆ.

—ಜಿಜಿಎಂ

## 596

ಕೆ. ೬೫೬/೧ **ಗಣಭಾಷ್ಯರತ್ನಮಾಲೆ** ವಚನ
೧೧″ × ೨″ ಗುಬ್ಬಿಯ ಮಲ್ಲಣ್ಣ ೧೪೭೫
೧-೧೩೦ ಪತ್ರ ೧೦ ಪಂಕ್ತಿ [illegible] ಅಕ್ಷರ

**ಆದಿ :** ಗುರು ಬಸವಲಿಂಗಾಯ ನಮಃ। ಗಣಭಾಸ್ಯರತ್ನಮಾಲೆ।
ಶ್ರೀಗುರುವೆ ಪರಮಗುರುವೆ ಮಹಾಗುರುವೆ ನಿಂಮ ಕೃಪೆಯೊಳುಂ ಪರಮಾಮೃತಸಾಗರನೆಂಬೊಲಿದನುದ್ಯೋಗಿಸಿದೆಂ ಶಾಸ್ತ್ರ ವಚನ ಸನುಮಥದಿಂದಂ। ಯಿದು ಶ್ರೀಮದನಿರ್ವಾಚ್ಯಸ್ವರೂಪನಪ್ಪ ಪರಶಿವನ ಸಾಕಾರ ಸ್ವರೂಪರಾದ ಅಸಂಖ್ಯಾತ ಮಹಾಗಣಂಗಳ್ಪರಮ ಕಲ್ಯಾಣಪುರದೊಳು ವಿರಚಿಸಿ ಮಾರ್ಗ್ಗಮಂ ಸ್ಥಲವಿಟ್ಟು ನುಡಿವ ವಚನಂಗಳಂ ವರಗುರುನಾಥನಾಜ್ಞೆಯಿಂ ಧರೆಯೊಳು ನೂತನ ಗಣಂಗಳಜಃಯುಲೊರೆದನು

**ಅಂತ್ಯ :** ನಿಂಮ ಕಾರುಣ್ಯದ ಶಿಶು ಗುಬ್ಬಿಯ ಮಲ್ಯಂಣಗಳು ಶಿವಗಣಂಗಳ ಶಿವಾನುಭಾವ ಸ್ತೋತ್ರಮಂ ಮಾಡಿ ಶಿವಗಣಂಗಳ ಮುಖಕ್ಕೆ ನಿರ್ಮ್ಮಲದರ್ಪ್ಪಣಮೆನೆ ಸಮರ್ಪ್ಪಿಸಿದೆನು .. ಸುಕಿಸೂದು ಗಣಭಾಷ್ಯ ರತ್ನಮಾಲೆ ಸಮಾಪ್ತ ಶ್ರೀ ಶ್ರೀ.

ಯಿೂ ಗಣಭಾಷ್ಯ ರತ್ನಮಾಲೆಯು ಪುಸ್ತಕವು ಸಿದ್ಧಾರ್ತ್ರಿ ಶಂವತ್ಸರ ವೈಸಾಕ ಮಾಸದ ಸುದ್ಧ ।೯। ಯು ಸೋಮವಾರದಲು ಸಂಕಲಾಪುರದ ಚೆಂನ ಬಸವರಾಜ ದೇವರ ಶಿಷ್ಯರು ಪುಷ್ಪದ ದೇವರು ಹಲ್ಕರಟೆಯು ಮುರುಳು ವಿರಂಣೊಡದ್ದೇವರ ಶಿಷ್ಯ ಕಿರು ಗುರುಪಾದ ದೇವರಿಗೆ ಬರದು ಸಮಾಪ್ತವ ಮಾಡಿದರು. ಸುಭಮಸ್ತು ಸೋಭನಮಸ್ತೂ ಆಯುರಾರೋಗ್ಯಮಸ್ತು ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ವೇದಾಂತ.

**ವಿಶೇಷ:** ಈ ಕಟ್ಟಿನಲ್ಲಿ ಈ ಗ್ರಂಥವಲ್ಲದೆ 'ಪ್ರಸಾದ ಚಿಂತಾಮಣಿ' ೧೩೧ ರಿಂದ ೧೪೯ ಪತ್ರ ಆದಮೇಲೆ ೧ ರಿಂದ ೪ ಪತ್ರಗಳಲ್ಲಿ ಅವಯುವಗಳನ್ನು ಕಾಶಿ, ಶ್ರೀಗಿರಿ ಮೊದಲಾದ ಸುಕ್ಷೇತ್ರಗಳಿಗೆ ಹೋಲಿಸಿರುವ ವಾತುಲಾಗಮದ ೧೦ ಶ್ಲೋಕಗಳೂ ಶಿವಲಾಂಛನಕ್ಕೆ ಸಂಬಂಧಿಸಿದ ಕಾರಣಾಗಮದ ೩೭ ಶ್ಲೋಕಗಳೂ ಪಾದೋದಕವನ್ನು ಲಿಂಗಕ್ಕೆ ಸಮರ್ಪಿಸುವ ವಿಷಯುವನ್ನು ಕುರಿತ ೩ ಶ್ಲೋಕಗಳೂ, ಲಿಂಗಾರ್ಪಿತ ಭಿಕ್ಷಕ್ಕೆ ಹೋಗಬೇಕಾದ ವಿಷಯಕ್ಕೆ ಸಂಬಂಧಿಸಿದ ಶ್ಲೋಕ, ಪಂಚಾಕ್ಷರಂಗಳ ಮಂತ್ರವಲ್ಲದೆ ಕೊನೆಯ ೨ ಪತ್ರ ಗಳಲ್ಲಿ ಸಮಾಧಿಕ್ರಿಯೆಗೆ ಸಂಬಂಧಿಸಿದ ಸಂಸ್ಕೃತ (ಕನ್ನಡ ವಿವರಣೆಯೊಂದಿಗೆ) ಶ್ಲೋಕಗಳಿವೆ.

—ಎಸ್ ಬಿ

## 597

| | | |
|---|---|---|
| ಕೆ. ೯೮೬/೨ | **ಗಣಭಾಷ್ಯರತ್ನಮಾಲೆ** | ವಚನ |
| ೨೫.೮"×೧.೭" | ಗುಬ್ಬಿಯ ಮಲ್ಲಣ್ಣ | ೧೪೭೫ |
| ೧೩೭-೨೦೪ ಪತ್ರ | ೧೧ ಪಂಕ್ತಿ | ೧೨೫ ಅಕ್ಷರ |

**ಆದಿ :** ಶ್ರೀಗುರು ವಿಶ್ವಪತಿಯೆ ನಮಃ XXX ಗಣಭಾಷ್ಯ ರತ್ನಮಾಲೆ ಕಂದ
ಶ್ರೀಗುರುವೆ ಪರಮಗುರುವೆ ಮ
ಹಾಗುರುವೆ ನಿಂಮ ಕೃಪೆಯೊಳು ಪರಮಾಮೃತ
ಸಾಗರಮೆಂಬೊಲಿದನು
ದ್ಯೋಗಿಸಿದೆಂ ಶಾಸ್ತ್ರವಚನ ಸಮುಮಥದಿಂದಂ ॥೧॥ XXX
ಗಣಭಾಷ್ಯ ರತ್ನಮಾಲೆಯಂ ವರವೇದ ಶಾಸ್ತ್ರಾಗಮ ಪುರಾಣ ಇತಿಹಾಸಾದಿ ನಾನಾ ಧರ್ಮಶಾಸ್ತ್ರೋಕ್ತ ಗ್ರಂಥಂಗಳಿಂ ಆಧ್ಯರ ವಚನಂಗಳಿಂ ನೂಱಿಒಂದು ಸ್ಥಲಮಾಗೆ ಸೇರಿಸಿದ ಹರಶರಣರಣುಗಂ ಗುಬ್ಬಿಯ ಮಲ್ಲಂಣಗಳು

**ಅಂತ್ಯ :** ಕರ್ಮೇಭ ಪಂಚಾನನಾ .ಗುರುಕುಲ ಜ್ಯೋತಿಸ್ವರೂಪ ಲಿಂಗಾಂಗಸಂಗ ಸಂಗಹಿತ ಜಗದಾರಾಧ್ಯರುಮಪ್ಪ ಶ್ರೀದೇವಾ ಪೃಥ್ವಿ ಮಹಾಮಹತ್ತಿನ ಸಿವಶಕ್ತರುಮಪ್ಪ ನಂಜನಗೂಡು ಯಂಬ ದಕ್ಷಿಣ ಕಾಶಿಗೆ ದಕ್ಷಣದಲ್ಲಿ ಹುಣಸೆ ನೆಳಲೆಂಬ ಗ್ರಾಮದ ಶ್ರೀ ಶಿವಯೋಗಿ ಮಲ್ಲಿಕಾರ್ಜುನ ಸ್ವಾಮಿ ಯವರ ಕೊಮಾರರು ಕೊಡೆಗೆ ಹಳ್ಳಿಯ ಮಲ್ಲಿಕಾರ್ಜುನ ದೇವರು ಅವರ ಕುಮಾರನು ಶ್ರೀಗುರುದ್ಯಪರು ಬರದ ಗಣಭಾಷ್ಯ ರತ್ನಾಮಾಲೆಯ ಪುಸ್ತ ಕಕ್ಕೆ ಶುಭಮಸ್ತು XXX ಕ್ರೋಧಿಸಂವತ್ಸರದ ಮಾರ್ಗಶಿರ ಶುದ್ಧ ೧೧ ಯಲ್ಲು ಯಿಾ ಗಣಭಾಷಿತ ರತ್ನಾಮಾಲೆಯ ಬರದು ಮುಕತ್ತಿಯ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಪ್ರತಿ ಸಮಗ್ರ. ಅಕ್ಷರ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ೧–೩೬ ಪತ್ರಗಳಲ್ಲಿ ಶೈವರತ್ನಾಕರ ಎಂಬ ಗ್ರಂಥವಿದೆ.

—ಜಿಜಿಎಂ

## 598

ಕೆ. ೧೦೬೩ **ಗಣಭಾಷ್ಯರತ್ನಮಾಲೆ** ವಚನ

೮.೧″ × ೧.೭″ ಗುಬ್ಬಿಯ ಮಲ್ಲಣ್ಣ ೧೪೭೫

೧-೭೫ ಪತ್ರ ೮ ಪಂಕ್ತಿ ೪೮ ಅಕ್ಷರ

**ಆದಿ :** ಶ್ರೀ ಗುರುಶ್ರೀಭ್ಯೋನ್ನಮಃ॥ ಶ್ರೀಗುರು ಬಸವಲಿಂಗಾಯ ನಮಃ
ಶ್ರೀಗುರುವೆ ಪರಮಗುರುವೆ ಮ
ಹಾಗುರುವೆ ಸಂ....ಳುಂ ಪರಮಾಮೃತ
ದಾಗರವೆಂಬೊಲಿದ್ಧನು
ದ್ಯೋಗಿಸಿದೆಂ ಶಾಸ್ತ್ರ ವಚನ ಸಮ್ಮತದಿಂದಂ ॥೧॥

XXXಗಣಭಾಷ್ಯ ರತ್ನಮಾಲೆಯಂ ವರವೇದ ಶಾಸ್ತ್ರಪುರಾಣಾಗಮ ಯಿತಿ ಹಾಸಾದಿ ನಾನಾ ಧರ್ಮ ಶಾಸ್ತ್ರೋಕ್ತ ಗ್ರಂಥಂಗಳಿಂ ಆದ್ಯರ ವಚನಂಗಳಿಂ ನೂಱತೊಂದು ಸ್ಥಲಮಾಗೆ ಸೇರಿಸಿದ ಹರಶರಣರಣಂಗಂ ಗುಬ್ಬಿಯ ಮಲ್ಲಂಣಗಳು ಮಾಡಿದ ಭಾಷ್ಯರತ್ನಮಾಲೆಯ ಪ್ರಥಮದಲ್ಲಿ ಅನುಭಾವ ಸ್ಥಲ XXX

**ಅಂತ್ಯ :** ....ರಾಸರ ಪುರಾಣದಲ್ಲಿ। ಊರ್ಧ್ವಪುಂಡ್ರಂಚ ಶೂಲಂಚ ವರ್ತುಳಂ ಚೌರ್ಧ ಚಂದ್ರಕಂ ಲಲಾಟಿಧಾರಯಿಸ್ಯಂತಿ। ಮನುಷ್ಯ....ಣಂ ಮತ್ತಂ ಶಾಂಭನ ಪುರಾಣದಲ್ಲಿ ಅಶುದ್ಧಂ ಚತಥಾಪ್ರೋಕ್ತಂ ವರ್ತುಳಂ ಚೂರ್ಧ್ವ ಪುಂಡ್ರಕಂ ಅಶುದ್ಧಂಚಾ....

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಅಸಮಗ್ರ.

—ಜಿಜಿಎಂ

## 599

ಕೆ. ೧೧೪೪/೩ **ಗಣಭಾಷ್ಯರತ್ನಮಾಲೆ** ವಚನ

೧೩.೦೦″ × ೨.೧″ ಗುಬ್ಬಿಯ ಮಲ್ಲಣ್ಣ ೧೪೭೫

೧೧೩-೧೪೭ ಪತ್ರ ೧೩ ಪಂಕ್ತಿ ೬೦ ಅಕ್ಷರ

**ಆದಿ :** ಭಾಷ್ಯರತ್ನಮಾಲೆ॥

ಕಂದ॥ ಶ್ರೀಗುರುವೆ ಪರಮ ಗುರುವೆ ಮ
ಹಾಗುರುವೆ ನಿಂಮ ಕ್ರುಪೆಯೊಳಂ ಪರಮಾಂಮ್ರುತ
ಸಾಗರವೆಂಬ ವೊಲಿವನು
ದ್ಯೋಗಿಸಿದೆಂ ಶಾಸ್ತ್ರ ವಚನ ಸಂಸ್ಕ್ರುತದಿಂದಂ॥

ಸೂತ್ರ॥ ಯಿದು ಶ್ರೀಮದನಿರ್ವಾಚ್ಯ ಸ್ವರೂಪನಪ್ಪ ಪರಶಿವನ ಸಾಕಾರಸ್ವರೂಪರಾದ ಸಂಖ್ಯಾನ ಮಹಾಗಣಂಗಳ್ಪರಮ ಕಂಲ್ಯಾಣಪುರದೊಳು ವಿರಚಿಸಿ ಹರಭಕ್ತಿ ಮಾರ್ಗ್ಗಮಂ ಸ್ತ್ಥಲವಿಟ್ಟು ನುಡಿಸಿದ ವಚನಂಗಳಂ ವರಗುರುನಾಥನಾಗ್ನೆಯಿಂXXX ದಿನೇ ದಿನೇ ವಿಶೇಷಂ ಚಾ। ಮಾಸೆ ಮಾಸೆ ಮಹಾಧ್ವಸೆ ವತ್ಸರಸ್ಯ ಮಹಾಭೋದ್ಯಂ। ಸದ್ಭಕ್ತನ ಲಕ್ಷಣವು ॥೧॥

**ಅಂತ್ಯ :** ಪಂಚಾಕ್ಷರ ಪ್ರಭಾವಶ್ಚ ಲೋಕಾದೇವಾ ಮಹಾಯಃ ಶಿಷ್ಟಂತಿ ಸಾಶ್ವತಾ ಧರ್ಮ್ಮಾ। ದೇವಾಸ್ಸರ್ವ್ವಮಿದಂ ಜಗತ್॥ ಟ್ಕೊ॥ ಪಂಚಾಕ್ಷರಿಯ ಪೆಸೆ ಸಾಮರ್ಥ್ಯ ದೆಶೆಯಿಂದ ಹದಿನಾಲ್ಕು ಲೋಕಂಗಳು। ಮೂವತ್ತಮೂಱು ಕೋಟಿ ದೇವರ್ಕ್ಕಳು। ಮೂಱು ಕೋಟಿ ಮಹಾರುಷಿಯರು ಸಮಸ್ತ ಜಗತ್ತು। ಸಮಸ್ತ ಧರ್ಮ್ಮಂಗಳು ನಾಲ್ಕು ವೇದಂಗಳು। ಯಿಂತಿಹವೂ ॥೧॥ ಆಶ್ರಿತ್ಯ

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಅಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಮೋಳಿಗಯ್ಯಗಳ ಪುರಾಣ ಲಿಂಗಚಿದಾಮೃತ ಬೋಧೆ, ಸಾನಂದ ಗಣೇಶ್ವರನ ರಗಳೆಗಳೆಂಬ ಇನ್ನೂ ಮೂರು ಕೃತಿಗಳಿವೆ.
[ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ ಪುಟ ೩೭೯–೩೮೧, ಕ್ರಮಾಂಕ 381–382 ನೋಡಿ]

—ಕೆಆರ್‌ಎಸ್

## 600

ಕೆ. ೧೧೬೪/೬ **ಗಣಭಾಷ್ಯರತ್ನಮಾಲೆ** ವಚನ
೧೧" × ೧.೭" ಗುಬ್ಬಿಯ ಮಲ್ಲಣ್ಣ ೧೪೭೫
೨೨-೩೧ ಪತ್ರ ೧೧ ಪಂಕ್ತಿ ೬೪ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಮಠಸ್ಥಲ ಬರೆವುದಕ್ಕೆ ಶುಭಮಸ್ತು॥ ಶ್ರೀಗುರು ಪಂಚಬ್ರಾಂಹ್ಮಣ॥ ಸಂಪುಟ ಮುಖ ನಾಲ್ಕು। ದಿಕ್ಕು ನಾಲ್ಕು ಕಳಸ ನಾಲ್ಕು। ಗಂಗೆ ನಾಲ್ಕು। ಪರ್ವತ ನಾಲ್ಕು। ವೃಕ್ಷ ನಾಲ್ಕು। ಆಚಾರ್ಯರು ನಾಲ್ವರು। ಪ್ರಾಣಲಿಂಗ ನಾಲ್ಕು। ಮುಖತತ್ತ್ವ ನಾಲ್ಕು। ಶಿಖಿ ನಾಲ್ಕು। ವಾಕೂಸ ನಾಲ್ಕು। ಭೇದ ನಾಲ್ಕು। ಆಚರಣೆ ನಾಲ್ಕು। ದಂಡ ನಾಲ್ಕು। ಕರ್ಪುರ ನಾಲ್ಕು। ಮುದ್ರೆ ನಾಲ್ಕು। ಕಂತೆ ನಾಲ್ಕು। ಸೂಜಿ ನಾಲ್ಕು। ದಾರ ನಾಲ್ಕು। ಆಸನ ನಾಲ್ಕು। ತೋರಣ ನಾಲ್ಕು। ಗದ್ದುಗೆ ನಾಲ್ಕು। ಯಿಂತಿವರ ವಿವರವೆಂತೆಂದಡೆ॥

**ಅಂತ್ಯ :** ಆ ಶಿಷ್ಯನತ್ಯುತ್ತಮನಂ ಮಾಡಿದ ಶ್ರೀಗುರುವಿಂಗೆ ನಾನು ನಮೋ ನಮೋ ಎಂಬೆಂದು ಬದುಕಿದೆನಯ್ಯ ಕೂಡಲ ಚಂನಸಂಗಮದೇವಾ ॥೨॥ ಯಿಂತೀ ಶ್ರೀಮದಸಂಖ್ಯಾತ ಪುರಾತನ ಗಣಭಾಷಿತ ರತ್ನಮಾಲಾಯಂ ದೀಕ್ಷಾ ವಿಧಾನಮಂ ಪ್ರತಿಷ್ಟಯಂ। ಮಾಡಿ ನುಡಿದಂಮ್ಮ ಮಹಾಪುರಾತನರು॥ XX ಮುಂದೆ ಗುರುಶಿಷ್ಯ ಪ್ರವೇಶ ಸ್ಥಲವಾದುದು। ಶಿವ ರಹಸ್ಯೆ॥ ಶ್ರೀ ಶ್ರೀ॥

**ವಿಷಯ :** ಷಟ್ಸ್ಥಲ ಸಿದ್ಧಾಂತದಲ್ಲಿ ದೀಕ್ಷಾವಿಧಾನದ ವಿವರಣೆ.

**ವಿಶೇಷ :** ಇದು ಮಠಸ್ಥಲ. ಗಣಭಾಷಿತ ರತ್ನಮಾಲೆಯಲ್ಲಿ ಒಂದು ಭಾಗ. ಅಕ್ಷರಗಳು ಸುಂದರವಾಗಿವೆ. ಪ್ರತಿ ಚೆನ್ನಾಗಿದೆ, ಈ ಕಟ್ಟಿನಲ್ಲಿ 'ಗುರುರಾಜ ಚಾರಿತ್ರ' ಮುಂತಾದ ಇತರ ೧೬ ಕೃತಿಗಳಿವೆ.

—ಎಂಪಿಎಂ

## 601

ಕೆ. ೧೧೬೯ **ಗಣಭಾಷ್ಯರತ್ನಮಾಲೆ** ವಚನ
೧೦.೫" × ೨.೨" ಗುಬ್ಬಿಯ ಮಲ್ಲಣ್ಣ ೧೪೭೫
೧-೧೮೮ ಪತ್ರ ೧೧ ಪಂಕ್ತಿ ೩೬ ಅಕ್ಷರ

**ಆದಿ :** ಶ್ರೀ ಬಸವಲಿಂಗಾಯ ಲನಮಃ॥ ಗಣಭಾಷ್ಯರತ್ನಮಾಲೆ॥

ಕಂದ॥ ಶ್ರೀಗುರು ಪರಮಗುರುವೆ ಮ
ಹಾಗುರುವೆ ನಿಮ್ಮ ಕೃಪೆಯೊಳಂ ಪರಮಾಮೃತ
ಸಾಗರವಂಬ ಪೊಲಿದನು
ದ್ಯೋಗಿಸಿದೆಂ ಶಾಸ್ತ್ರವಚನ ಸುಮತದಿಂದಂ ॥೧॥

**ಅಂತ್ಯ :** ಶಿವಾನುಭವ ಸ್ತೋತ್ರವಂ ಮಾಡೆ ಶಿವಗಣಂಗಳ ಮುಖಕ್ಕೆ ನಿರ್ಮಳ ದರ್ಪಣವೆನೆ ಸಮರ್ಪಿಸಿದೆನಂ ಯಿಾ ಮಹಾಪ್ರಸಂಗದ ಹೃದಯವನಜಂ ದೊಡೆ ನಿರವಯುಲಪ್ಪನು ಭಾವಬಾರಕಂಜಿಕೇಳಲು ಸದ್ಯೋನ್ಮುಕ್ತವಪ್ಪನು ಸತ್ಸಂಗದಿಂ ಕೇಳಿ ಮನದಲ್ಲಿ ಧರ್ವಿಸಲು ನಿರ್ಮಳಾತ್ಮಕನಪ್ಪನು ಶೋಧರ ಣಿಯಿಂ ಸ್ತೋತ್ರ ಸುಖಕ್ಕೆ ಕಿಳದಾತನು। ರುದ್ರಲೋಕಾಧಿಪತಿಯಪ್ಪನು ಮನೋರತಿಯಂ ಹೇಳಿದೊಡೆ। ಕೇಳಿದೊಡೆ ಪತಿಸಿದೊಡೆ ಚತುರ್ವಿಧಂ ಪದವ ಪಡವರೂ। ಯಿದನು ಶಿವಶರಣರು ಕೇಳೂದೂ। ಲಾಲಿಸೂದೂ। ಪಾಲಿಸೂದೂ॥ ಬರದೋದುವುದು। ಯಿಂ ಷಸ್ಥಲಂಗಳು। ವಚನಂಗಳು ಕ್ರಮುಸರುವೆ। ತಪ್ಪುಳ್ಳಡೆ ನಿಮ್ಮ ಪರ್ವಿಜ್ಞಾನದಿಂ ತಿದ್ದೀ। ಯಿಾ ವಚನಾನು ಭವ ಪ್ರಸಂಗವಂ ಮಾಡಿ ಸುಖಿಸುವುದು ಮಂಗಳ ಮಹಾಶ್ರೀ.
ವಿಜಯ ಸಂವತ್ಸರದ ಜೇಷ್ಠ ಶು. ೫ಯಲ್ಲು ಶನಿವಾರ ಉದೆದ ಅಯಿದನೆ ತಾಸಿಗೆ ಮುಗಿಯಿತ್ತು॥ ಗ್ರಂಥ ೪೮೩ ವಚನ ೯೯೭ ಅಂತು ೯೭೪ಲಕ್ಕಂ ಮಂಗಳ ಮಹಾಶ್ರೀ. ಶ್ರೀ ಶಾಂಭವಲೋಕಕ್ಕೆ ಪ್ರಾಧಿಪತಿಯಾದ ವೀರ ಮಾಹೇಶ್ವರರಾದ ಶಂಕರಲಿಂಗಾಯ ನಮಃ॥

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಸಮಗ್ರ. ಶಕಟರೇಫದ ಪ್ರಯೋಗವಿದೆ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

## 602

| ಕೆ. ೧೩೦೨/೧ | **ಗಣಭಾಷ್ಯರತ್ನಮಾಲೆ** | ವಚನ |
|---|---|---|
| ೧೦.೧″ × ೧.೮″ | ಗುಬ್ಬಿಯ ಮಲ್ಲಣ್ಣ | ೧೪೭೫ |
| ೧-೩೯ ಪತ್ರ | ೮ ಪಂಕ್ತಿ | ೪೪ ಅಕ್ಷರ |

**ಆದಿ :** ಶ್ರೀ ಗುರುನಿರಂಜನಾಯೆ ನಮಃxxಗಣಭಾಷ್ಯ ರತ್ನಮಾಲೆ॥
ಕಂದ॥ ಶ್ರೀಗುರುವೆ ಪರಮಗುರುವೆ ಮ
ಹಾ ಗುರುವೆನಿಯ ಕೃಪೆಯೊಳುಂ ಪರಮಾಮೃತ
ಸಾಗರವೆಂಬವೊಲಿದನು
ದ್ಯೋಗಿಸಿದೆಂ ಶಾಸ್ತ್ರವಚನ ಸಂಮತದಿಂದಂ
ಇತಿಹಾಸಾದಿ ನಾನಾಧರ್ಮ ಶಾಸ್ತ್ರೋಕ್ತಗ್ರಂಥಂಗಳಿಂ ಆದ್ಯರ ವಚನಂ ಗಳಿಂ ನೂಱಿಹೊಂದು ಸ್ಥಲಸಾಗೆ ಸೇರಿಸಿದ ಹರಶರಣರಣುಗಂ ಗುಬ್ಬಿಯ ಮಲ್ಲಂಣಗಳು ಮಾಡಿದ ಭಾಷ್ಯರತ್ನಮಾಲೆಯ ಪ್ರಥಮದಲ್ಲಿ

**ಅಂತ್ಯ :** ಬದ್ಧವೈರಲು ಮಧ್ಯತ್ರಯೋದ್ರುಶ್ಯಂತಾ
ಜಾತವೇದಾಸ್ಥಾಣುರುದ್ರ ತಿಷ್ಟದ್ಭುವಸ್ಯಗೋಪ್ತದ್ರುಷ್ಟಾ ಸ್ಥಾಣುಮಾಪ

ರಂ....ಪ್ರತಸ್ತತುದರ್ಥ್ಥರಮನಾದಿದ್ರುಕ್ಷರ್ವರಾಹೋ ವಿಷ್ಣುರ್ನಿಮಮಾ ರ್ಜಭೂಮೌಬ್ರಂಹ್ಮೇತ್ಯದಾದಿಮಾಶ್ರು ಗ್ರುದ್ಧಃಟೇ ರಾಜಸದಿಂದ ಕಟ್ಟಲು ಪಟ್ಟಂಥಾ...

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಅಸಮಗ್ರ. ಇದೇ ಕಟ್ಟಿನಲ್ಲಿ 'ರುದ್ರಭಾರತ'ವೆಂಬ ಕೃತಿಯೂ ಇದೆ.

—ಜಿಜಿಎಂ

## 603

| ಕೆ.ಬಿ. ೭೨೦ | **ಗಣಭಾಷ್ಯರತ್ನಮಾಲೆ** | ವಚನ |
|---|---|---|
| ೧೩.೨" × ೪.೧" | ಗುಬ್ಬಿಯ ಮಲ್ಲಣ್ಣ | ೧೪೭೫ |
| ೧-೧೩೦ ಪತ್ರ | ೧೧ ಪಂಕ್ತಿ | ೬೭ ಅಕ್ಷರ |

**ಆದಿ :** ಶ್ರೀ ಶಿವಾಯ ನಮಃ॥ ಗಣಭಾಷ್ಯರತ್ನಮಾಲೆ॥

ಕಂದ॥ ಶ್ರೀಗುರುವೆ ಪರ|ಮಗುರುವೆ ಮ
ಹಾಗುರುವೆ ನಿಂಮ ಕೃಪೆಯೊಳುಂ ಪರಮಾಮೃತ
ಸಾಗರವೆಂಬವೊಲದನು
ದ್ಯೋಗಿಸಿದೆಂ ಶಾಸ್ತ್ರ ವಚನಸಮುತದಿಂದ XXX
ಆರ್ಯರ ವಚನಂಗಳಿಂ ನೂರೊಂದು ಸ್ಥಲಮಾಗೆ ಸೇರಿಸಿದ ಹರಶರಣರಣುಗಂ ಗುಬ್ಬಿಯ ಮಲ್ಲಂಣಗಳು ಮಾಡಿದ ಭಾಷ್ಯರತ್ನಮಾಲೆಯ ಪ್ರಥಮದಲ್ಲಿ

**ಅಂತ್ಯ :** ಯಿದು ಅಜ್ಞಾನ ತಿಮಿರಾಂಜನಮಪ್ಪ ಮಹಾಪ್ರಸಂಗವಂ ಬಸವರಾಜ ದೇವರು ಚೆಂನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ನೂರೊಂದು ಸ್ಥಲದಲ್ಲಿ ನಡದು ನುಡಿದ ವಚನಂಗಳು ಸ್ಥಲಭಿಂನವಾಗಿರ್ದಡೆ ಚಂದವಲ್ಲೆಂದು ಕಂಠಮಾಲೆಯ ಪೊಹಣಿಯರಿದು ಸೇರಿಸಿದೆನು XXX ಯಿತಿ ಗಣಭಾಷಿತರತ್ನಮಾಲೆ ಸಮಾಪ್ತ ಮಂಗಲ ಮಹಾ ಶ್ರೀ ಶ್ರೀ ಪ್ರಜೋತ್ಪತ್ತಿ ಸಂ॥ರದ ಆಷಾಡ ಶು ೧೦ ಮಂಗಳವಾರದ ದಿವಿ ೫ ಘಳಿಗೆಯಲ್ಲು ಗಣಭಾಷ್ಯ ರತ್ನಮಾಲೆಯ ಪುಸ್ತುಕ ಪ್ರತಿಯಲ್ಲಿಯಿದ್ದಂತೆ ಬರದು ಸಮಾಪ್ತವಾಯಿತ್ತು ಶುಭಮಸ್ತು.

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 604

ಕೆ. ೬೬೩/೧ | **ಗಣಸಹಸ್ರನಾಮ** | ಗದ್ಯ,ಪದ್ಯ
೭.೮" × ೧.೯" | ಮಲ್ಲಿಕಾರ್ಜುನ ಪಂಡಿತಾರಾಧ್ಯ | ಸು. ೧೧೬೦
೧೬ ಪತ್ರ | ೧೦ ಪಂಕ್ತಿ | ೪೦ ಅಕ್ಷರ

**ಆದಿ :** ಬಸವಾಲ್ಲಿಂಗಾಯ ನಮಃ ಪಾಲ್ಕುರಿಕೆ ಸೋಮರಾಧ್ಯರು ನಿರೂಪಿಸಿದ ಗಣ ಸಾಹಸ್ರನಾ....ಬರುವುದಕ್ಕೆ ಶುಭಮಸ್ತು। ಶೋಭಾನುಮಸ್ತು। ಓಂ ಮಸ್ಯ ಶ್ರೀಸಿವಣ ಸ್ತೋತ್ರನಾಮಮೂಲ....ಂತ್ರಸ್ಯ ಭೃಂಗಿರುಷಿಃ ನಾನಾ ಚಂದಾಂಸಿ ಶ್ರೀ ಸದಾಶಿವೋ ದೇವತಾ। ಇಂ ಬೀಜಂ ಹ್ರೀಂ ಶಕ್ತಿಃ ಕ್ರೌಂ ಕಲಕಂ....ಲ ಮನೋರಥ ಶಿದ್ಧ್ಯಾರ್ಥೆ ಜೆಪೆ ವಿನಿಯೋಗಃ ಇಂನು ಅಂಗುಷ್ಟಾಕಾಭ್ಯೋ ನಮಃ

**ಅಂತ್ಯ :** ಶುಲಭಕ್ತಿರೆನಿಸುವಾದಶಗಣನೇ... ಜಾವಳಿನುಳದ। ಅಶಂಕೆಕ ಭಕ್ತರ್ಗೆ ಮನ್ಮದಾಚಲಪಂ ತೊಲಗಿಸಿ ನಿಜಾಂಗ್ರಿಯೊಳ್ಪೈವು....ನೋಧಿಪೆಂ। ಶಿವ ಬಸವೇಶಾ। ಸಾ॥ಹಾಸ್ತ್ರ ಗಣನಾಮ ಸಮಾಪ್ತಮಂ। ಮಂಗಳಮಹಾಶ್ರೀ।

**ವಿಷಯ :** (ವೀರಶೈವ) ಗಣಸಹಸ್ರ.

**ವಿಶೇಷ :** ಶಿಥಿಲ ಪ್ರತಿ. ಗರಿಗಳ ಒಂದು ಕಡೆಯ ಅಂಚು ಮುರಿದು ಅಕ್ಷರಗಳು ಲುಪ್ತವಾಗಿವೆ. ಅಕ್ಷರಗಳಲ್ಲಿ ತಪ್ಪು ಅಧಿಕ. ಇದಾದ ಬಳಿಕ ಕೆಲವು 'ಯಂತ್ರದ ಸಕಿಲು' ಎಂಬ ಕೆಲವು ಯಂತ್ರಗಳಿವೆ.

—ಎಸ್ ಎಸ್ ಕೆ

## 605

ಕೆ. ೮೩೦/೪ | **ಗಣಸಹಸ್ರನಾಮ** | ಶ್ಲೋಕ,ಟೀಕು
೧೩" × ೨.೫" | ಪಾಲ್ಕುರಿಕೆ ಸೋಮನಾಥ | ಸು. ೧೧೯೦
೭-೧೧ ಪತ್ರ | ೧೦ ಪಂಕ್ತಿ | ೫೫ ಅಕ್ಷರ

**ಆದಿ :** ಶ್ರೀಗುರು ಬಸವಾಯ ನಮಃ॥ ಸಹಸ್ರಗಣನಾಮಃ॥ ಅಶಂಖ್ಯಾತ ಮಹಾ ಪ್ರಮಥ ಗಣೇಭ್ಯೋ ನಮಃ॥
ಶ್ರೀ ಮಲ್ಲಿಕಾರ್ಜುನಾರ್ಯ್ಯ
ಧೀಮಂತಂ ಪಾಪರಹಿತ ಗಣಸಂಕುಳಂ
ಪ್ರೇಮದಿ ಸ್ತುತಿಪೆಂ
ಸಾವಿರ ನಾಮದ ಜಪಪೆಂದು ಪೊಗಳ್ದು ವಿಸ್ತರಿಪೆಂ
ಪ್ರಮಥಗಣ ರುದ್ರಗಣ ಭಕ್ತಮಹಾಗಣ ದಿವ್ಯನಾಮ ಸಂಕೀರ್ತನಮಂ

**ಅಂತ್ಯ :** ಸುರತರುವಂ ಸುರಧೇನುವಂ
ವರ ಚಿಂತಾಮಣಿಗಳೆಂದು ಪೆಸರಂ ಪೇಳ್ವರು

ಹರಗಣನಾಮ ಜಪಿಸಲು
ಭರದಿಂದಂ ಸಿದ್ಧಿಯಕ್ಕು ಶಿವಬಸವೇಶಾ||
ಸಹಸ್ರಗಣನಾಮ ಸಮಾಪ್ತ ಮಂಗಳ ಮಹಾ.

**ವಿಷಯ :** ಗಣಸ್ತುತಿ.

**ವಿಶೇಷ :** ಇದೇ ಕಟ್ಟಿನಲ್ಲಿ ಲಿಂಗಪುರಾಣದ ನಾಂದ್ಯ, ಷಟ್ಸ್ಥಲವಚನ, ಶ್ರೀರುದ್ರದ ಟೀಕು ಮೊದಲಾದ ಇತರ ೧೧ ಕೃತಿಗಳಿವೆ.

—ವೈಸಿಬಿ

## 606

ಕೆ. ೧೧೬೪/೩ | **ಗಣಸಹಸ್ರನಾಮ** | ಗದ್ಯ, ಪದ್ಯ
೧೧" × ೧.೭" | ಪಾಲ್ಕುರಿಕೆ ಸೋಮನಾಥ | ಸು. ೧೧೯೦
೧.೧೦ ಪತ್ರ | ೧೨ ಪಂಕ್ತಿ | ೩೮ ಅಕ್ಷರ

**ಆದಿ :** ಶ್ರೀಗುರುವೇ ಗತಿ। ಗಣಸಹಸ್ರನಾಮ ಬರೆವುದಕ್ಕೆ ಶುಭಮಸ್ತು|| ಓಂ ಅಸಂಖ್ಯಾತ ಪ್ರಮಥಗಣೇಭ್ಯೋನ್ನಮಃ||

ಕಂದ|| ಶ್ರೀ ಮಲ್ಲಿಕಾರ್ಜುನಯ್ಯಂ
ಧೀಮಂತ್ರಂ ಪಾಪರಹಿತಗಣಸಂಕ್ಕುಳಮಂ
ಪ್ರೇಮದಿಂ ಸ್ತುತಿಸೇಂ
ಸಾವಿರ ನಾಮದ ಜಪಮೆಂದು ಪೊಗಳ್ದು ವಿಸ್ತರಿಪೇಂ

ವಚನ|| ಓಂ ಪ್ರಮಥಗಣ ರುದ್ರಗಣ ಭಕ್ತ ಮಹಾಗಣ। ದಿವ್ಯನಾಮ ಸಂಕೀರ್ತನಮಂ।

**ಅಂತ್ಯ :** ಅವ್ಯಕ್ತಾಯ ನಮಃ|| ಸಹಸ್ರಾಕ್ಷಾಯ ನಮಃ||
ಸಹಸ್ರವಿದನೆ ನಮಃ||
ಅಪವರ್ಗ ಪ್ರದಾಯ ನಮಃ||
ಅನಂತಾಯ ನಮಃ|| ತಾರಕಾಯ ನಮಃ
ಶ್ರೀಮದ್ ಪರಮೇಶ್ವರಾಯ ನಮಃ|| ೧೮||
ಅಂತು ನೂರೆಂಟಕಂ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ಗಣಸ್ತುತಿ.

**ವಿಶೇಷ :** ಇದೇ ಕಟ್ಟಿನಲ್ಲಿ 'ಗುರುರಾಜ ಚಾರಿತ್ರ' ಮುಂತಾದ ಇತರ ೧೬ ಕೃತಿಗಳಿವೆ.

—ಎಂಪಿಎಂ

## 607

ಕೆ. ೧೨೭೨/೧೩ **ಗಣಸಹಸ್ರನಾಮ** ಗದ್ಯ,ಪದ್ಯ
೧೧"×೧.೯" ಪಾಲ್ಕುರಿಕೆ ಸೋಮನಾಥ ಸು. ೧೧೯೦
೩೭-೪೩ ಪತ್ರ ೧೦ ಪಂಕ್ತಿ ೪೮ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಗಣಸಹಸ್ರನಾಮವ ಬರವದಕ್ಕೆ ಶುಭಮಸ್ತು|| ಶ್ರೀದಮದಸಂಖ್ಯಾತ ಪ್ರಮಥಗಣಂಗಳ ಪಾದವೇ ಗತಿ||
ಶ್ರೀ ಮಲ್ಲಿಕಾರ್ಜುನಾರ್ಯಂ
ಧೀಮಂತಂ ಪಾಪರಹಿತಗಣಸಂಕುಳಮಂ
ಪ್ರೇಮದಿ ಸ್ತುತಿಯಿಸೆನಾ ವೀರ
ನಾಮವ ಜಪವೆಂದು ಪೊಗಳ್ದು ವಿಸ್ತರಿಪೆಂ

**ಅಂತ್ಯ :** ಶ್ರೀ ವಿಮಲ ಸತ್ತ್ರಮಥಗಣಂಗಳೆ ರುದ್ರಗಣಂಗಳೆ ರುದ್ರಗಣಾವಳಿಗಲಗತ ವೃಷಭ ಯೋಗಾಚಾರ್ಯ ಕುಲಕ್ಕೆ ನಿರ್ಮಲಿನರಾದರಿತ್ತು ಮುವ್ವರ್ಗೆ ಷೋಡಶ ಗಣಂಗಳೆ ತೇರಸಗ್ಗ್ೆ|ಸುಲಭರೆನಿಸುವದ ಶರಣಂಗಳು ಅಸಂಖ್ಯಾತ ಭಕ್ತರ್ಗೆ ಮನ್ಮನದ.... ಸಹಸ್ರಗಣನಾಮ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ಗಣಸ್ತುತಿ.

**ವಿಶೇಷ :** ಇದೇ ಕಟ್ಟಿನಲ್ಲಿ ಭಾವಚಿಂತಾರತ್ನ, ವೈರಾಗ್ಯ ಷಟ್ಪದಿ, ಲಿಂಗಸ್ತೋತ್ರದ ಷಟ್ಪದಿ, ಚನ್ನಬಸವೇಶ್ವರ ಪುರಾಣದ ನಾಂದ್ಯ, ದೇವೀನಾಂದ್ಯ, ಸೋಮನಾಥ ಪುರಾಣದ ನಾಂದ್ಯ ಮೊದಲಾದ ೧೭ ಕೃತಿಗಳಿವೆ.

—ವೈಸಿಬಿ

## 608

ಕೆ. ೧೩೯೪/೩ **ಗಣಸಹಸ್ರನಾಮ** ಗದ್ಯ,ಪದ್ಯ
೧೦.೩"×೧.೫" ಪಾಲ್ಕುರಿಕೆ ಸೋಮನಾಥ ಸು. ೧೧೯೦
೫-೧೩ ಪತ್ರ ೯ ಪಂಕ್ತಿ ೪೩ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಅಸಂಖ್ಯಾತ ಮಹಾಪ್ರಮಥಾಗಣ ನಮಃ|| ಗಣಸಹಸ್ರನಾಮ ಬರವುದಕ್ಕೆ ಶುಭಮಸ್ತು||
ಶ್ರೀ ಮಲ್ಲಿಕಾರ್ಜುನಾರ್ಯಂ
ಧೀಮಂತಂ ಪಾಪರಹಿತಂ ಗಣಸಂಕುಳಮಂ
ಪ್ರೇಮದೆ ಸ್ತುತಿಪೆಂ
ಸಾವಿರ ನಾಮವ ಜಪವೆಂದು ಪೊಗಳ್ದು ವಿಸ್ತರಿಪೆಂ

**ಅಂತ್ಯ :** ವಿಮಲ ಪುರಾತನ ನೂತನ ಸಮಸ್ತ ಭಕ್ತ್ಯಾಯತೆಯೆನಲೂ। ಶಿವನೊಲಿ ಮಂದಿರವಿದು ಭವವಿದಳನ ಕರ್ಮಟಿಕಾರಣ ಗಣಸಹಸ್ರನಾಮಸ್ತವಮಂ ಪಠಿಯಿಸುವಾತಂ। ಜನನಿಯ ಜಠರ ಕಠೋರ ಪೀಠಕ್ಕೆ ಮರಳಿ ಬಾರಂ ದೂರಂ। ಪ್ರಮಥಗಣ ರುದ್ರಗಣ। ಭಕ್ತಮಹಾಗಣ ದಿವ್ಯನಾಮ ಸಂಕೀರ್ತನಮಂ। ಪ್ರಮುದಿತ ರತಿಯಿಂ ಪೇಳ್ದ ಸುಮಹಾತ್ಫಲವೆಂದು ಬಣ್ಣಿಪೆನಾಂ ಬಸವೇಶಾ॥

ಸುರತರುವಂ ಸುರಧೇನುವಂ
ವರಚಿಂತಾಮಣಿಗಳೆಂದು ಪೆಸರ ಪೇಳ್ವರು
ಹರಗಣೋ ನಾಮವ ಜಪಿಸಲು
ಭರದಿಂದ ಸಿದ್ಧಿಯಕ್ಕು ಶಿವಬಸವೇಶಾ॥
ಗಣಸಹಸ್ರನಾಮಂ ಸಂಪೂರ್ಣ ಮಂಗಳ ಮಹಾಶ್ರೀ.

**ವಿಷಯ :** ಗಣಸ್ತುತಿ.

**ವಿಶೇಷ :** ಇದೇ ಕಟ್ಟನಲ್ಲಿ ನೀತಿಗ್ರಂಥ, ಕರಸ್ಥಲ ನಾಗಲಿಂಗದೇವರ ತ್ರಿವಿಧಿ, ಜಂಗಮ ತಾರಾವಳಿ, ನೀಲಾಂಬಿಕಾ ಲಲಿತಸ್ತೋತ್ರ ಎಂಬ ಗ್ರಂಥಗಳಿವೆ.

—ವೈಸಿಬಿ

## 609

| ಕೆ. ೧೩೯೭/೪ | **ಗಣಸಹಸ್ರನಾಮ** | ಗದ್ಯ,ಪದ್ಯ |
|---|---|---|
| ೮.೯" × ೨.೧" | ಪಾಲ್ಕುರಿಕೆ ಸೋಮನಾಥ | ಸು. ೧೧೯೦ |
| ೧೭೧-೧೮೦ ಪತ್ರ | ೧೦ ಪಂಕ್ತಿ | ೩೫ ಅಕ್ಷರ |

**ಆದಿ :** ಶ್ರೀಗುರುಬಸವಲಿಂಗಾಯ ನಮಃ॥ ಗಣಸಹಸ್ರನಾಮ॥ ಓಂ ಅಸಂಖ್ಯಾತ ಮಹಾ ಪ್ರಮಥಗಣಭ್ಯೋ ನಮಃ॥ ಶ್ರೀ ಮಲ್ಲಿಕಾರ್ಜುನಾರ್ಯಂ ದ್ವಿಮಂತಂ ಪಾಪರಹಿತಂ ಗಣಸಂಕುಳಮಂ। ಪ್ರೇಮದಿ ಸ್ತುತಿಪೆಂ ಸಾವಿರ ನಾಮವ ಜಪವೆಂದು ಪೊಗಳ್ದು ವಿಸ್ತರಿಪೆಂ ॥೧॥

**ಅಂತ್ಯ :** ಯಸವ ಗಣಸಹಸ್ರ ನಾಮಂಗಳನಿಂತು
ಪಸರಿಸಿದನು ಧರೆಯೊಳಗೆ ಪಾಲ್ಕುಱಿಕೆಯ ಸೋಮ। ಶರಣನೊಪ್ಪವ। ಗಣಸಹಸ್ರನಾಮಂಗಳನಂ। ಗುರುಭಕ್ತಿಯಿಂ ಜಪವಂ ಮಾಡಿದೊಡೆ ಕೊಂಡಾಡಿದೊಡೆ। ಕೇಳಿದೊಡೆ। ವೋದಿದೊಡೆ। ವಿಸ್ತರಿಸಿದೊಡೆ। ಬರದೊಡೆ ಪಠಿಸಿದೊಡೆ। ಪೂಜಿಸಿದೊಡೆ। ಧುರಿತ ವಿಜ್ರುಂಭಣ ದೂರವಾಗಿಹುದು। ಹರನ ಮಹಾಪ್ರಸಾದ ಆನಂದವಾಗಿಹುದು। ಚಿರಮನೋರಥ ಫಲಸಿದ್ಧಿ ಹೊದ್ದುವದು। ದುಃಸ್ವಪ್ನ। ದುಃಕರ್ಮ। ದುಃಸಕುನಂಗಳು। ಸರ್ವಗ್ರಹಾದಿ

ದೋಷಂಗಳು। ಜ್ವಲನಪಿ ಮೃತ್ಯು। ತಸ್ಕರ। ವೃಶ್ಚಿಕಾಹಿ। ಜ್ವರ। ಮೃಗ। ರೋಗ। ರಾಕ್ಷಸ। ಚೋರ। ವಿಷ। ಭೂತ। ಪವನ। ಮಹಾಲ್ಕ। ವಿಪಕ್ಷ। ದಾರಿದ್ರ। ಅಪಮೃತ್ಯು। ನೃಪಬಾಧೆಗಳು। ಪರಿಹಾರವಕ್ಕುಂ। ಅರ್ಥಾದಿಗಳು ತಾಂ ಭಕ್ತಿಯಿಂ ಜಪವಂ ಮಾಡಿದೊಡೆ। ಅರ್ಥ ಸಾಮರ್ಥ್ಯ ಸಮಗ್ರಹತ್ವವಹುದು। ಪುತ್ರಾರ್ಥಿಗಳು ತಾಂ ಭಕ್ತಿಯಿಂ ಜಪವಂ ಮಾಡಿದೊಡೆ। ಪುತ್ರಾಭಿಜನನ ವಿಭುಕ್ತವಹುದು।ಭುಕ್ತಿ ಮುಕ್ತ್ಯಾರ್ಥಿಗಳು ತಾಂ ಭಕ್ತಿಯಿಂ ಜಪವಂ ಮಾಡಿದೊಡೆ। ಭುಕ್ತಿ ಮುಕ್ತಿ ಸುಖಸಂ XXX

ಕಂದ॥ ಸುರತರುವಂ ಸುರಧೇನುವಂ
ವರ ಚಿಂತಾಮಣಿಗಳೆಂದು ಪೆಸರಂ ಪೇಳಲು
ಹರಗಣಮಾಲೆಯ ಜಪಿಸಲು
ಭರದಿಂದಂ ಸಿದ್ಧಿಯಕ್ಕು ಶಿವಬಸವೇಶಾ ॥೯॥
ಗಣಸಹಸ್ರನಾಮ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ**: ಗಣಸ್ತುತಿ.

**ವಿಶೇಷ**: ಇದೇ ಕಟ್ಟಿನಲ್ಲಿ ವಿವೇಕ ಚಿಂತಾಮಣಿ, ರಾಜ ಅಘೋರ ಸ್ತೋತ್ರ(ಸಂ), ಅಷ್ಟವಿಧಾರ್ಚನೆ, ಶಿವಕವಚಸ್ತೋತ್ರ ಮತ್ತು ರುದ್ರಕವಚಸ್ತೋತ್ರ ಎಂಬ ಗ್ರಂಥಗಳಿವೆ.

—ವೈಸಿಜಿ

## 610

| ಕೆ. ೧೫೫೧ | **ಗಣಸಹಸ್ರನಾಮ** | ಗದ್ಯ, ಪದ್ಯ |
|---|---|---|
| ೯ ೫″ × ೨.೧″ | ಪಾಲ್ಕುರಿಕೆ ಸೋಮನಾಥ | ಸು. ೧೧೯೦ |
| ೧-೧೦ ಪತ್ರ | ೧೨ ಪಂಕ್ತಿ | ೫೦ ಅಕ್ಷರ |

**ಆದಿ**: ಶ್ರೀಗುರುಬಸವಲಿಂಗಾಯ ನಮಃ॥ ಗಣಸಹಸ್ರನಾಮ ಬರೆಯುವುದಕ್ಕೆ ಶುಭಮಸ್ತು॥ ಆಯುರಾರೋಗ್ಯಮಸ್ತು॥ XXX ಓಂ ಅಸ್ಯಶ್ರೀ ಶಿವಗಣ ಸಹಸ್ರನಾಮ ಮಹಾಮೂಲ ಮಂತ್ರಸ್ಯ ಭೃಂಗಿ ಋಷಿಃ XXX
ಶಾರ್ದೂಲ ವೃತ್ತಂ॥
ಆದೌ ಭೃಂಗಿರಿಟಸ್ತಥಾ ಕೃತಯುಗೆ ನಂದೀಶ್ವರೊ ಭೂತತಃ।
ತ್ರೇತಾಯಾಂ ಘನಪರಶ್ಚೈವ ವಿಲಸತ್ಯಾನಂದ ನಾಮಾಂಕಿತಃ॥
ಗೌರೀವಲ್ಲಭ ಭಕ್ತಿಮಾರ್ಗನ್ನಿರತಃ ಶ್ರೀವಾಣಿನ ದ್ವಾಪರೆ।
ಯೇವಂ ಭಕ್ತಹಿತಾರ್ಥ ಮಕ್ಕಲಯುಗ್ಗೆ ಪಾಲ್ಕುರಿಕೆ ಸೋಮೇಶ್ವರಃ॥

**ಅಂತ್ಯ**: ಅಂತು ಕಲ್ಯಾಣದ ಗಣಂಗಳ ಪ್ರಶಸ್ತಿಗೆ ನಾಮಲೆಕ್ಕ ।೩೬೩। ಅಂತು ಪ್ರಶಸ್ತಿ ಲಕ್ಕೆ ಸಮೂಹಲೆಕ್ಕ ೧೦೦೦॥ ಮಂಗಳ ಮಹಾಶ್ರೀ।

ಕಂದ|| ಯಸವ ಗಣಸಹಸ್ರನಾಮವ
ಪೊಸರಿಸಿದನು ಧರೆಯೊಳಗೆ ಪಾಲ್ಕುರಿಕೆ ಸೋಮಂ
ಕುಶಲದಿ ಜಪಿಸುವ ಜನರಿಗೆ
ಅಸಮಾಕ್ಷನು ಕರುಣಿಸುವನೂ ಶ್ರೀ ಬಸವೇಶಾ| ||೧||
ಯಿತಿ ಗಣಸಹಸ್ರನಾಮ ಬರೆವಣಿಗೆ ಸಂಪೂರ್ಣ ಮಂಗಳ ಮಹಾಶ್ರೀಶ್ರೀ||

**ವಿಷಯ:** ಸಹಸ್ರ ಶಿವಗಣಸ್ತುತಿ.

**ವಿಶೇಷ:** ಕೃತಿ ಸಮಗ್ರ. ಪ್ರತಿ ಸುದೃಢ. ಬರವಣಿಗೆ ಸುಂದರ.

—ಎಂಪಿಎಂ

## 611

| ಕೆ.ಎ. ೪೨೩/೫ | **ಗಣಸಹಸ್ರನಾಮ** | ಗದ್ಯ, ಪದ್ಯ |
|---|---|---|
| ೮.೪" × ೧೨.೮" | ಪಾಲ್ಕುರಿಕೆ ಸೋಮನಾಥ | ಸು. ೧೯೬೦ |
| ೧೨-೨೮ ಪುಟ | ೨೬ ಪಂಕ್ತಿ | ೧೬ ಅಕ್ಷರ |

**ಆದಿ:** ಶ್ರೀ ಮಲ್ಲಿಕಾರ್ಜುನಾಯಾ
ಧೀಮಂತ್ರನ ಪಾಪರಹಿತ ಗಣಸಂಕುಳಮಂ
ಪ್ರೇಮದಿ ಸ್ತುತಿಯಿಪೆ ಸಾವಿರ
ನಾಮವ ಜಪವೆಂದು ವಿಸ್ತರಿಪೆಂ||

**ಅಂತ್ಯ:** ಸುರತರುಮಂ ಸುರಧೇನುವಂ
ಪರ ಚಿಂತಾಮಣಿಗಳೆಂದು ಪೆಸರಂ ಪೇಳ್ವರೂ
ಹರಗಣಮಾಲೆಯ ಜಪಿಸಲೂ
ಭರದಿಂದ ಸಿದ್ಧಿ ಯಕ್ಕು ಶಿವಬಸವೇಶಾ||
ಸಹಸ್ರಗಣನಾಮ ಸಂಪೂರ್ಣಂ.
ಮೇಲಣಗವ್ವಿಯ ಚೆನ್ನಬಸವೇಶಕರ ಪಾಡುಪದಕ್ಕೆ ನಮಸ್ತೇ ನಮಃ ಬೆಂಗಳೂರು ಚೆನ್ನಬಸವಸಾರ ದೇವರ ಪದವೇ ಗತಿ ಬೆಂಗಳೂರ ದೊಡಬಸ ವೇಶರ ದೇವತಾ ಪದವೀಕೆ ನಾನು ನಮಸ್ಕಾರವ ಮಾಡಿ ಬರೆದೆ ಶಾನಾಮ ಸಾರೂಪ ಮಂಗಳಮಹಾ.

**ವಿಷಯ:** ಗಣಸ್ತುತಿ.

**ವಿಶೇಷ:** ಇದೇ ಪುಸ್ತಕದಲ್ಲಿ ಲಿಂಗಾರ್ಚನೆ ರಗಳೆ, ಶಿವಶರಣರ ಅಷ್ಟಕ, ಗೌರಮ್ಮನ ತ್ರಿವಿಧಿ, ನೀಲಮ್ಮನ ತ್ರಿವಿಧಿ, ಕಿನ್ನರಿದೇವರು ನಿರೂಪಿಸಿದ ವಚನ ಇವೇ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 612

| ಕೆ. ೭೧೫ | ಗಣಸಹಸ್ರನಾಮ | ಗದ್ಯ, ಪದ್ಯ |
|---|---|---|
| ೮.೧" × ೧.೧" | ಪಾಲ್ಕುರಿಕೆ ಸೋಮನಾಥ | ಸು. ೧೧೯೦ |
| ೧-೩೦ ಪತ್ರ | ೬ ಪಂಕ್ತಿ | ೨೮ ಅಕ್ಷರ |

**ಆದಿ:** ....ಭ್ಯಾಂ ನಮಃ|| ಶ್ರೀ ಗಣಸಹಸ್ರನಾಮ ಬರಿಯುವಕೆ ಶುಭಮಸ್ತು||
ಶ್ರೀ|| ಓಂ ಅಸ್ಯಶ್ರೀ ಶಿವಗಣಸಹಸ್ರನಾಮ ಮೂಲಮಂತ್ರಸ್ಯ ಭೃಂಗಿರುಷಿ|
ನಾನಾ ಛಂದಾಂಸಿ| ಶ್ರೀ ಸದಾಶಿವೋ ದೇವತಾ| ಓಂ ಬೀಜಂ| ಹ್ರೀಂಶಕ್ತಿಃ|
ಕ್ರೀ ಕೀಲಕಂ| ಮಮ ಸಕಲ ಮನೋರಥ ಶಿದ್ಯರ್ಥೇ ಜಪೇ ವಿನಿಯೋಗಃ|

XXX

ಶ್ರೀ ಮಲ್ಲಿಕಾರ್ಜುನಾರ್ಯಂ
ಧೀಮಂತಂ ಪಾಪರಹಿತ ಗಣಸಂಕುಳಮಂ
ಪ್ರೇಮದಿ ಸ್ತುತಿಪೆಂ ಸಾವಿರ
ನಾಮವ ಜಪವೆಂದು ಪೊಗಳ್ದು ವಿಸ್ತರಿಸುವೆನೂ ||೧||

**ಅಂತ್ಯ:** ದಿಶವಿಡಿದು ಭವವಿದಳ ಕ
ರ್ಮಶ ಕಾರ ಗಣಸಹಸ್ರನಾಮಂಗಳುಮಂ
ಪಠಿಯಿಸುದಾತಂ ಜನನಿಯ
ಜಠರ ಕಠೋರ ಪೀಠಕ್ಕೆ ಮರಳಿ ಬಾರಂ ದೂರಂ||
ಪ್ರಮಥಗಣ ರುದ್ರಗಣ ಭ
ಕ್ತ ಮಹಾಗಣ ದಿವ್ಯನಾಮ ಸಂಕೀರ್ತನಮಂ
ಪ್ರಮುದಿತ ರತಿಯಿಂ ಪೇಳ್ದ
ಸಮಹೋತ್ಸವೆಂದು ಬಣಿಪೆಂ ಶಿವಬಸವೇಶಾ||
ಸುರತರುಮಂ ಸುರಧೇನುವ
ವರಚಿಂತಾಮಣಿಗೆಳೆಂದು ಪೆಸರಂ ಪೇಳ್ವನು
ಹರಗಣನಾಮವ ಜಪಿಸಲು
ಭರದಿಂದಂ ಶಿದ್ಧಿಯಕ್ಕು ಶಿವಬಸವೇಶಾ||
........ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ||.... ಶ್ರೀಗುರು........

**ವಿಷಯ:** ಸಹಸ್ರನಾಮ.

**ವಿಶೇಷ:** ಗರಿಗಳನ್ನು ಹುಳು ತಿಂದು ಶಿಥಿಲವಾಗಿವೆ. ಗ್ರಂಥ ಸಮಗ್ರವಾಗಿದೆ. ಸ್ಫುಟಾಕ್ಷರ.

—ಎಸ್ ಎನ್ ಕೆ

613

ಕೆ. ೯೮೮/೪ **ಗಣಾಡಂಬರದ ಚಾರಿತ್ರ** ವಾರ್ಧಕಷಟ್ಪದಿ

೮.೮" × ೨.೩" ? ?

೧೪೦-೧೬೭ ಪತ್ರ ೧೩ ಪಂಕ್ತಿ ೬೮ ಅಕ್ಷರ

**ಆದಿ :** ಶ್ರೀಗುರುಬಸವಲಿಂಗಾಯ ನಮಃ|| ಶುಭಮಸ್ತು|| ಗಣಾಡಂಬರದ ಚಾರಿತ್ರವ ಬರವುದಕ್ಕೆ ನಿರ್ವಿಘ್ನಮಸ್ತು ವಾರ್ಧಿಕ ಷಟ್ಪದಂಗಳೂ||

ಪದ|| ಶ್ರೀಮದನುಪಮ ಸರ್ವ್ವಮಾಂಗಲ್ಯ ರೂಪದಿಂ
ವಾಮಾರ್ದ್ಧತನುನಶಿತ ಕಾಂತಿಯಿಂದೊಪ್ಪ ಉ
ದ್ಧಾಮ ದಕ್ಷಿಣ ಭಗತನು ಶುಭ್ರಕಾಂತಿಯಿಂದೊಪ್ಪಲಂತೆರಡುಗೂಡಿ
ಭೂಮಿಯೊಳು ಕಾಳಿಂದಿ ದೇವಗಂಗೆಗಳೆನಿಸು
ವಾ ಮಹಾನದಿಗಳೊಪ್ಪುವ ಸಂಗಮವೊಯೆನಿ
ಪ್ಪಾಮೂರ್ತಿ ಅರ್ದ್ಧನಾರೀಶ್ವರಂ ಶಿವಕಥಿಕರಿಷ್ಟಾರ್ಥಸಿದ್ಧಿಗೊಡುಗೆ ||೧||
ಋಷಸವೆತ್ತ ಮುಕ್ತಿಮುನಿಸಿಂಹಾಸನಾಧಿಪತಿ
ಯುಸಮ ಸುಚರಿತ್ರಾಪ್ತ ಶಿಖಿಯ ಬಸವೇಶಕರ
ಬಿಸಜ ಸಂಜನಿತಂ ಪ್ರತಾಪಕೀರ್ತಿ ವಿರಾಜಿತಂ ಕುಮಾರ ವೃಷಭೇಶ್ವರಂ
ಶಶಿಮೌಲಿಯಂಘ್ರಿಯಂ ಶಾಸ್ತ್ರೋಕ್ತವಿಧಿಯೊಳಚ
ರ್ಚಿಸುತೆ ಶಿವಭಜಕಜನರಿಷ್ಟಾರ್ಥಮಿಾವುತಂ
ಬಸವೇಶ್ವರ ಪುರಾಣದೊಳು ಗುಪ್ತವೆನಿಸುವ ಪುರಾತನ ಚರಿತೆಯೊರೆದಂ ||೩||

**ಅಂತ್ಯ :** ಯಿದು ಮುಕ್ತಿಮುನಿನಾಥನಂ ಶಾಂಬರಾದಿತ್ಯ
ಸಧಿಕಕೀರ್ತ್ತಿ ಪ್ರತಾಪ ಶಂಬುನಿಂದಕ ಸಮುದಯು ಸ
ಮಿದಗ್ನಿ ಶಿವಭಕ್ತ ಕಲ್ಪದ್ರುಮ ಕುಮಾರ ಚೆಂನಬಸವೇಶ್ವರಂ
ಮುದದಿಂದೆ ಬಸವೇಶ್ವರ ಪುರಾಣದೊಳು ಸೂಚಿ
ಸಿದ ಪುರಾತನರ ಚರಿತ್ರವನುಪಗಥೆಗಳೊಂದಿ
ಪದವಿಟ್ಟುದೆಂಟನೆಯ ಸಂಧಿ ಶಿವಭಕ್ತ ಜನ ಕರ್ಣ್ನಸೌಖ್ಯಾನಬಂಧಿ ||೨೬||

ಅಂತು ಸಂಧಿ ೮ಕಂ ಪದಸು ೩೨೯ಕ್ಕಂ ಗಣಾಡಂಬರ ಚಾರಿತ್ರ ಸಂಪೂರ್ನ ಮಂಗಳ ಮಹಾಶ್ರೀ.

**ವಿಷಯ :** ಬಸವೇಶ್ವರ ಪುರಾಣದಲ್ಲಿ ಬರುವ ಕೆಲವು ಶಿವಗಣಗಳ ವಿಸ್ತೃತ ಕಥೆಗಳು.

**ವಿಶೇಷ :** ಸಮಗ್ರವಾಗಿದ್ದು ಶಕಟರೇಫವನ್ನು ಗ್ರಂಥದಲ್ಲಿ ಬಳಸಿದೆ. ಇದೇ ಕಟ್ಟಿನಲ್ಲಿ

ಪ್ರಭುಲಿಂಗಲೀಲೆ, ಭೈರವೇಶ್ವರ ಕಾವ್ಯ, ಭಾವಚಿಂತಾರತ್ನ, ಭಿಕ್ಷಾಟನ ಚರಿತ್ರೆ ಎಂಬೀ ಕೃತಿಗಳೂ ಇವೆ.

—ಕೆಆರ್‌ಎಸ್

## 614

| ಕೆ. ೧೦೧೨/೪ | **ಗಣಾಷ್ಟಕ** | ವೃತ್ತ |
|---|---|---|
| ೮.೫″×೧.೯″ | ? | ? |
| ೨ ಪತ್ರ | ೬ ಪಂಕ್ತಿ | ೩೦ ಅಕ್ಷರ |

**ಆದಿ :** ಅಲ್ಲಮಪ್ರಭು ಅಮೃತನಾಥನುನುಮಿಷನಂ ಪಂಡಿತೇಶನಂ
ಮಲ್ಲಿಕಾರ್ಜುನ ಮರುಳದೇವ ಸಿದ್ಧೇಶನಂ ಸಕಳೇಶನಂ
ಸಲ್ಲಲಿತ ಸೌರಾಷ್ಟ್ರ ಸೋಮಯ್ಯ ಸುಜ್ಞಾನಿಯಂ ತಿರುಗ್ಣೇನಿಯಂ
ಬಿಲ್ಲಮನು ಬಲದೇವ ಬಸವದಂಡೇಶನಂ ಚಂಡೇಶನಂ

**ಅಂತ್ಯ :** ಯಿಾ ಗಣಾಷ್ಟಕ ಯಿಳೆಯೊಳತಿಸಂತೋಷದಿಂ ಸುವಿಲ್ಲಾದಿಂ
ರಾಗರಚನೆಗಳಿಂದ ಪಾಡಲು ಭೋಗವುಂ ಶಿವಯೋಗವುಂ
ಬೇಗದೊಲಿದೀವ ಭಕ್ತರಭೀಷ್ಟೆಯಂ ಶಂತ್ರುಪ್ಟೆಯಂ
ಯೋಗಿಹೃದಯನಿವಾಸ ಮಳಯ ಮಲ್ಲೇಶನಂ ಆಗ್ಯಶಾನಂ ||೬||

**ವಿಷಯ :** ನೂರೆಂಟು ಗಣಗಳ ಸ್ತುತಿ.

**ವಿಶೇಷ :** ಇದರೊಡನೆ ಕರಣಹಸಿಗೆ, ಪಂಚಸ್ತೋತ್ರ ಮೊದಲಾದ ಇತರ ಐದು ಗ್ರಂಥ ಗಳಿವೆ.

—ಬಿಎಸ್‌ಎಸ್

## 615

| ಕೆ. ೧೬೫೪/೬ | **ಗಣಿಕ ಪದ್ಯ** | ಪದ್ಯ |
|---|---|---|
| ೭೬″×೧.೭″ | ? | ? |
| ೪ ಪತ್ರ | ೯ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀ ಗಣೇಶ ಶಾರದಾಗುರುಭ್ಯೋ ನಮಃ। ಗಣಿಕ ಪದ್ಯಾ ಬರೆವ ಪುಸ್ತಕಕ್ಕೆ ಶ್ರೀ ಗಣಾಧೀಶನಂ। ವಾಗೀಶ....। ಶ್ರೀ ವಿರೂಪಾಕ್ಷನಂ। ದೇವತತಿ ವಂದನಂ। ಪದಕಮಲವಂ ನೆನದು। ಮುದದಿ ಪೇಳುವೆನೊಲಿದು ಗಣಕ ಪದ್ಧತಿಗಳಂ। ಭಣಿತೆಯಿಂದಲಿ ಪೇಳ್ವೆ। ಅಣಕವನು ನೆರೆಬಿಟ್ಟು ಗಣಕರೆಲ್ಲರು ಕೇಳಿ। ಬರಹವನು ಬಲ್ಲವರು। ಪರಮ ಗುರುಗಳು ನಮಗೆ। ಚರಣದಲಿ ವಂದಿಸುತ। ಪರಿಪೆನಾ ಪದ್ಧತಿಯ

**ಅಂತ್ಯ :** ಪೆಟ್ಲಮಂದಿಯ ಬರದು ತೋಟಿಕಾರರ ಬರದು ಮತ್ತೆ ಕಾಷ್ಟಾರ ಬರದು ಮಾತಂಗರಂ ಬರದು ಯಿಾ ಪರಿಯಲಿಂತು ನಾನಾ ಪರಿಯ ವರ್ನಗಳ ಕೈದಃಗಳ ಪಿಡಿದಿಹರನಾದಿಯಲಿ ಬರಉತ್ತ

**ವಿಷಯ :** ಲೆಕ್ಕಪತ್ರಗಳಲ್ಲಿ ಬರೆಯಬೇಕಾದ ವಿವರಗಳು.

**ವಿಶೇಷ :** ಅಸಮಗ್ರ. ತ್ರುಟಿತ. ಪ್ರತಿ ಶುದ್ಧವಾಗಿದೆ. ಇದಾದ ಮೇಲೆ ಎರಡು ಜಾತಕದ ಓಲೆಗಳಿವೆ. ಇದೇ ಕಟ್ಟಿನಲ್ಲಿ ವೈದ್ಯ ಮೊದಲಾದ ೬ ಕೃತಿಗಳಿವೆ.

— ಜಿಜಿಎಂ

## 616

| ಕೆ. ೭೨೨ | **ಗಣಿತ** | ಸಂಸ್ಕೃತ ಶ್ಲೋಕ, ತೆಲಗು ಗದ್ಯ |
|---|---|---|
| ೧೩.೫″ × ೧.೨″ | ವೀರಾಚಾರ್ಯ | ? |
| ೧-೯೮ ಪತ್ರ | ೫ ಪಂಕ್ತಿ | ೫೬ ಅಕ್ಷರ |

**ಆದಿ :** ಶ್ರೀ ಖಾದ್ರಿ ನೃಸಿಂಹ್ಮಾಯ್ಯೆ ನಮಃ॥ ವೀರಾಚಾರ್ಯುಲು ಜೇಸಿನ ಯಾರಯ ಗಣಿತಮುಲು ಮುಪ್ಪದಾರುಗನವಿಯೆ। ಧಾರುಣಿ ತೆಲಿಯುಗ ಜೆಪ್ಪಿದ ಆರೂಢಿಗನಾರ್ಯುಲೆನ್ನ ಆದಿಯಟ್ಟಿಂನ್ನನೂ ಪ್ರಥಮಂಬು ಗುಣಕಾಲ ಭಾಗಹಾರಮು॥

**ಅಂತ್ಯ :** ಕಂಳದ್ವಜೆಯ.... ಖ ಕುಡಿಟೆ ಅಂತ್ಯಮು ಪುಡಮಿಾರುಡಡಿರೆ॥ ನು ಧನುತ ವಿನುಮಾ॥ ತಡೆಯಕ ನಿಧುಲನು ಜೆಂಚಿನ ವುಡುಮಿನಿ ಮರಿಲೆಖಥ.... ವೆಲಯುನೂ॥ಕಡನು ನುಂನ್ನವುಂಟ್ಟೆನು ತೀಸಿವೇ ಶೇದಿ। ....ಲೇಖವುಂಟ್ಟೆನು ಕಡನುಂಚ್ಕಿನ್ನೆ ಜೆಪ್ಪಿ ಹೆಚ್ಚ ಕೂಡಿಕೆ ಸರಿಪೋವುನೂ। ನುಂ.... ಶ್ರೀಶ್ರೀ........

**ವಿಷಯ :** ಗಣಿತ ವಿಧಾನ.

**ವಿಶೇಷ :** ಶಿಥಿಲಪ್ರತಿ. ಕೆಲವು ಗರಿಗಳು ಮುರಿದು ಅರ್ಧ ಮಾತ್ರ ಇವೆ. ತೆಲಗುಲಿಪಿ. ಕೃತಿಯೂ ತೆಲುಗಿನಲ್ಲಿದೆ.

—ಎಸ್ಎನ್‌ಕೆ

## 617

| ಕೆ. ೯೨೩/೨ | **ಗಣಿತ** | ಗದ್ಯ |
|---|---|---|
| ೧೨.೨″ × ೧″ | ? | ? |
| ೩ ಪತ್ರ | ೩ ಪಂಕ್ತಿ | ೨೫ ಅಕ್ಷರ |

**ಆದಿ :** ಶ್ರೀಗಣ ಶಾರದಾ ಗುರುಭ್ಯೋ ನಮಃ। ಶುಭಮಸ್ತು॥ ಗಣಿತಾ॥ ದತ್ತಾ ನ್ಸೃಕ್ಷೈ ಕಸ್ಮೈ ಜಿನಭವನೆಯಾಂಬುದಾಗಿತ್ತಾನ್ನಷ್ಟೌವ ಸುತಿನಾಂ ಚತು ರೋತರಂ ಚತ್ವಾರಿಂ ಸಜ್ಜನಾತಿಯೆನಾಯೆ ಬಸ್ತಿ ೧ಕ್ಕೆ ತಾವರೆ ಪುಷ್ಪ ಲ

ಕೊಡುತ್ತಿರಲು ಬಸ್ತಿ ೧೪೪ ಬಸಿಗಳಿಗೆ ಕೊಟ್ಟಂಥಾ ತಾವರೆ ಪುಷ್ಪದ ಬಲ ಪ್ರಮಾಣು ಯೆಷ್ಟಾತ್ತ್ಯಾಯೆಂದರೆ ಲಬ್ಧ ೧೧೫೨ ತ್ತಾದರೆ ಪುಷ್ಪ।

**ಅಂತ್ಯ :** ಸಾಪ್ಯಂತತನವಗುಣಿತಂ ಆಚಾರ್ಯೋಃ ಮಹಾವೀರ್ಯೋಃತಧಿತಂ ನರಪಾಲ ಕಠಿಕಾಭರಣಂ ಬ ೧ಕ್ಕೆ........ ೧^ಗೆ ೧೧ ಸೂತ್ರ ೧೦। ನಿರಿಗುಣ ದಿವಿಗಿರಿ ಗುಣದಿವಿಗಿರಿ ಗುಣನಿಕರು ತತ್ತೈವಗುಣಿ ಗುಣಿತಂ ಪು.... ವೃದ್ಧಿ। ಬ ೧ಕ್ಕೆ ತಾ ೩ ಲೂ ಬಸ್ತಿ ૭೬೦ ೩೬೦ ೩೭ ಲಬ್ಧ ೧೧೧೧೧೧೧೧೧। ಸೂತ್ರ ೧೧। ಸಪ್ತ ಸೂನ್ಯಂದ್ವ....

**ವಿಷಯ :** ಗಣಿತ.

**ವಿಶೇಷ :** ಅಸಮಗ್ರ. ಶಿಥಿಲಪ್ರತಿ. ಇದೇ ಕಟ್ಟಿನಲ್ಲಿ ಪರಮಾರ್ಥ ವಚನಗಳು ಎಂಬ ಪುಸ್ತಕವಿದೆ.

—ವೈಸಿಬಿ

## 618

| ಕೆ. ೧೩೪೩/೨ | ಗಣಿತ | ಗದ್ಯ |
|---|---|---|
| ೧೧.೧" × ೧.೮" | ? | ? |
| ೨-೨೬ ಪತ್ರ | ೮ ಪಂಕ್ತಿ | ೪೪ ಅಕ್ಷರ |

**ಆದಿ :** ಸುವರ್ನಮಾಪಾಲತ್ತರಕ್ಕೆ ಸೂತ್ರ। ಮೋದುಗೆ ನಿಕ್ರಯಾರ್ಘನು। ಮದಂ ಕ್ರಯು ಹೇಮ ವಿಭೇದದಿಂದದಂ। ಮೋದುಗೆ ಲಾಭದಿಂ। ಕ್ರಯದ ಹೇಮ ವಿಭೇದದಿ ವಿಕ್ರಮಾರ್ಘದಿಂ ಮೋದಿಪುತ್ತ ಕ್ರಯಾರ್ಘನುತ ವಿಕ್ರಯ ಹೇಮ ವಿಭೇದದಿಂದದಂ ಸೋದಿಸಿ ಸೇಷದಿಂ ತೆಗೆಯೆ ತಾಂ ಮೊದಲಕ್ಕು ಮುದಾರ ಪೌರುಷಾ॥

**ಅಂತ್ಯ :** ಲಬ್ದ ಗ ೧೮೦೦ ಕೆ ತಿಂಗಳು ನಾಸ್ತಿಂ ಬಡ್ಡಿ ಗ ೫೩॥ ಯಿಾ ಗ ೧೬೦೦ ನೇ ತಿಂಗಳು ೪ ಬಡ್ಡಿನಾ ೩೦೦ ಟೀಕೂ ಪ್ರತಿಯಿಟ್ಟು

**ವಿಷಯ :** ಗಣಿತ.

**ವಿಶೇಷ :** ಇದೇ ಕಟ್ಟಿನಲ್ಲಿ ಗಣಿತ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಗ್ರಂಥವೂ ಇದೆ.

—ಕೆಆರ್‌ಎಸ್

## 619

| ಕೆ. ೧೬೫೪/೪ | ಗಣಿತ | ಗದ್ಯ |
|---|---|---|
| ೭.೭" × ೧.೭" | ? | ? |
| ೩ ಪತ್ರ | ೮ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀಗಣೇಶ ಶಾರದಾ ಗುರುಭ್ಯೋ ನಮಃ॥ XXX ಗಣಿತವ ಬರೆವಕ್ಕೆ

ನಿರ್ವಿಘ್ನಮಸ್ತು|| ದೇವರು ೧ಕ್ಕೆ ತಾವರೆ ಪುಷ್ಪ ೩ ರು ದೇವರು ೩೭ಕ್ಕೆ ಬಂದ ಲಬ್ಧ ೧೯೧ ದೇವರು ೧ಕ್ಕೆ ತಾವರೆ ೮ ಉ ದೇವರು ೧೪೪ಕ್ಕೆ ಬಂದ ಲಬ್ಧ ೧೧೫೨

**ಅಂತ್ಯ :** ದೇವರು ೨೦೪೦೮೧೬೩೨೬೫೩೦೬೧೨೨೪೪೯ ಕ್ಕೆ ಬಂದ ಲಬ್ಧ ೧೦೦೦೦೦ ೦೦೦೦೦೦೦೦೦೦೦೦೦೦ ದೇವರು ೧ಕ್ಕೆ ತಾವರೆ ೯೧ ಉ ದೇವರು ೧೧೦ ೧೧೦೧೧೧ ಕ್ಕೆ ಬಂದ ಲಬ್ಧ ೧೦೦ ೨೦೦ ೨೦೦೦ ಆಳೂಭಾಗಾರ ಬರೆವದಕ್ಕೆ ನಿರ್ವಿಘ್ನಮಸ್ತು.

**ವಿಷಯ :** ಗಣಿತ.

**ವಿಶೇಷ :** ಅಸಮಗ್ರ, ತ್ರುಟಿತ. ಇದಾದ ಮೇಲೆ ಸಭಾಪತಿ ಲಕ್ಷಣದ ೩ ಪದ್ಯಗಳೂ, ಗೋಕಾವಿ ಗುಡದಲ್ಲಿ ಎನ್ನುವ ಒಂದು ವೈದ್ಯ ವಿಷಯವೂ ಇದೆ. ಇದೇ ಕಟ್ಟಿನಲ್ಲಿ ಗಣಿಕ ಪದ್ಯ ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 620

| ಕೆ. ೧೮೦೩/೪ | **ಗಣಿತ** | ಶ್ಲೋಕ, ಕಂದ, ಗದ್ಯ |
|---|---|---|
| ೧೦.೯″ × ೨″ | ? | ? |
| ೨೩-೨೯ ಪತ್ರ | ೬ ಪಂಕ್ತಿ | ೪೯ ಅಕ್ಷರ |

**ಆದಿ :** ಶ್ರೀಜಲಸಿಧಿ ಪಯೋಧಿ ಶಶಿಧರನ ಯದ್ರವ್ಯಾಕ್ಷಿ ನಿಕರಮಾಗ್ಣಾಪ್ಯಂ ಗುಣಿತೇತು ಚಷ್ಟಷ್ಟ್ಯಾಕಾಸಂಖ್ಯಾ ಗಣಿತವಿಳಾಸಾ|| ಬಸ್ತಿ ೧ ಕೆ ತಾವರೆ ಪುಷ್ಪ ೬೪ ಬಸ್ತಿ ೨೬೨೧೪೪ ಬಸ್ತಿಗೆ ಯಷ್ಟಾಯಿಂತು ಯಂದರೆ ೧೬೭೭೭ ೨೧೬ ಆಯಿತೂ|| ಸೂತ್ರ ೧.

ಚತ್ವಾರಿಂ ಸದ್ವ್ಯೈಕೂನಾಂ ಶತಾಧಿಕಾಂ ಪುಷ್ಪ್ಯಾಗಮಣಿಯೋಚ್ಛ್ಯಾ ಯೇಕ ಸ್ಮಿಂ ಜಿನಭವನೆ ಸನವನತಾತೆಕಿಯಾ ತಸ್ಯತೌ|| ಬಸ್ತಿ ೧ಕ್ಕೆ ತಾವರೆ ಪುಷ್ಪ ೧೦೯ ೩೯೭ ಯಿಷ್ಟಾಯಿತು ಯಂದರೆ ೧೫೧೫೧ ಆಯಿತೂ|| ಸೂತ್ರ ೨||

**ಅಂತ್ಯ :** ಗಿರಿಶಿಖಿಯೇಕ ಶತಂಗಳು<br>
ಪರಿವಿಡಿಧಂ ಯೇಕಲೌಳ ಯೆಕ್ಕಾವಿಶಂ<br>
ನಿರುತರುಧಿವಹ್ನಿ ನಯನಂ<br>
ತ್ವರಿತಂ ಹರಿನಯನವದ್ರಿ ಮುನಿರತ್ನಂಗಳೂ||

ಟೀಕು: ಪಂದ್ಯೆರಡು ಮೂರುನಾಲ್ಕಂ
ಸಂದಿಸಿದ್ಧೆದಾರುಯೇಳು ಯೆಂಬಿ ಲೆಕ್ಕವಾ
ಕುಂದದೆ ಬಾಗಿಸಿಕೊಟ್ಟರೆ
ಯಂದೆಂದಿಗೆ ಅಂಣನೆಂಬೆಯಿದು ಸಿದ್ಧಾಂತಂ ||೧||
೧೫೬೩೭೪ ಯಿದಕ್ಕೆ ಭಾಗಿಸುವಹಾರ ೨ ರಿಂದ ಯಿದಕ್ಕೆ ಭಾಗ ಶೆಂಕೆ
ವಳಗೆ ಬಂದ ಲಬ್ಧ ೭೬೩೧೮೭ ||೦ XXX
ಬಾರಾಕಾಣಿವ ೧ಕ್ಕೆ |‾೧
ಆಗಾವ ೧ ಕ್ಕೆ ರುವೆ ೧೨
ರುವೆ ವ ೧ ಕ್ಕೆ ಪಾಕಿ ೪
ಪಾಕಿ ವ ೧ ಕ್ಕೆ ವಿಶ್ವೆ ೫
ವಿಶ್ವೆ ವ ೧ ಕ್ಕೆ ತಶ್ವೆ ೩

**ವಿಷಯ:** ಗಣಿತದ ವಿಚಾರ, ಕೋಷ್ಟಕ ಇತ್ಯಾದಿ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಲೆಕ್ಕ ನಿಘಂಟು ಮುಂತಾದ ೧೨ ಕೃತಿಗಳಿವೆ.

—ಜಿಜಿಎಂ

## 621

ಕೆ. ೧೩೪೩/೧ **ಗಣಿತ, ಜ್ಯೋತಿಷ್ಯ** ಗದ್ಯ
೧೧.೧″×೧.೮″ ? ?
೩-೬೭ ಪತ್ರ ೮ ಪಂಕ್ತಿ ೪೪ ಅಕ್ಷರ

**ಆದಿ:** ಗುಣತಾತ್ಮಾ ಸುದೇಹ್ಯೈ। ದರ್ನಮಜ್ಞಃ॥ ರುಣ॥ ರುದ್ರ ರುಕ್ಷಾಧಿ ಭವ್ಯೈ। ಶ್ರೀರ್ನಃಪುತ್ರೈ॥ ಧನ॥ ಜಲೇದ್ಧ ಕಂಧರ್ವೈ। ವಿಃಶ್ವಿದ್ಯಃ॥ ರುಣ॥ ವಿದಿಶ್ಯೈ॥ XXX ಶೇನೇಃ॥ ಶೋಧ್ಯ ವಾಕ್ಯಂಗಳು॥ ಹರಿರ್ವಾಸವಧಿದ ಮಾಡ್ಯ। ಸ್ವರುಗಃ॥ ರುಣ॥ ಧರ್ಮೋ ಬಲಿಮುನಿ ಸರ್ವೈಮಾನಿನಿ॥ ಧನ॥

**ಅಂತ್ಯ:** ಮೊದಲೆ ವಿಘಳಿಗೆ ಘಳಿಗೆ। ದಿನದಲ್ಲಿ ನಾರಿ ಗುಣರತಿಯಂಬ ವಾಕ್ಯವನೂ ವಿಲಿಪ್ತಿಯಾಗಿ। ಕುಲೀಸನಾದಿ ಧಿನವಂ ಕಳೆಯಲು ಶುದ್ಧ ದಿನ ಘಳಿಗೆ ವಿಘಳಿಗೆಯಹುದೂ। ಯಿಾ ಪ್ರಕಾರದಿಂ ಮರಳಿ ಮರಳಿ ವಾಕ್ಯವಂ ಕೂಡಿ ರಾಹುವಿನ ವಿಚಾರವಂ ನಡಸುವದೂ। ಪಾದ ಪಾದವಾಗಿ ಕ್ರಮದಿಂ ನಡೆವುದೂ॥ ಶ್ರೀ

**ವಿಷಯ:** ಗಣಿತ ಮತ್ತು ಜ್ಯೋತಿಷ್ಯ.

**ವಿಶೇಷ:** ಇದೇ ಕಟ್ಟನಲ್ಲಿ ಮತ್ತೊಂದು ಗಣಿತ ಗ್ರಂಥವಿದೆ.

—ಕೆಆರ್‌ಎಸ್

## 622

ಕೆ.ಬಿ. ೭೧೪/೨ **ಗಣಿತದ ಲೆಖ್ಖ** ಕಂದ,ಗದ್ಯ
೮.೧″ × ೬.೮″ ? ?
೩೧-೫೨ ಪತ್ರ ೧೮ ಪಂಕ್ತಿ ೨೪ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆ ನಮಃ XXX ಗಣಿತದ ಲೆಖ್ಖ ಬರಿಯುೂವದಕ್ಕೆ ಶುಭಮಸ್ತು|| ಗ್ರಂಥಾ||
ಯಿಂನುಡಿಸಿ ಠವಣೆಯು ಹಾಕಲು
ನೆಂಮನೆ ತುದಿ ಮೊದಲ ಕೇಳಿ ತುದಿಯಾ ದ್ವಿಗುಣಿಸಿ
ಹೆಂಮೆಯಲಿ ಮೊದಲ ಕಡೆಯಲ್ಲು
ವುಂಮಾಯದಿಂ ಠವಣೆ ಲೆಖ್ಖ ತಪ್ಪದೆ ಬಕ್ಕೊ||
ಟೀಕೂ|| ಯಿಂನುಡಿಸಿ ಠವಣೆಯು ಹಾಕಿದ ಮೇಲೆ ಮೇಲಿನ ಲೆಖ್ಖ ಕೆಳಗಿನ ಲೆಖ್ಖ ಯರಡನ್ನು ಕೇಳಿ ಕೆಳಗಿನ ಲೆಖ್ಖ ದ್ವಿಗುಣಿಸಿ ಮೇಲಿನ ಲೆಖ್ಖ ಅದರಲ್ಲಿ ಕಳದು ನಿಂತ ಲೆಖ್ಖ ಯಿಷ್ಟುಯೆಂದು ಹೇಳುವದೂ||.

**ಅಂತ್ಯ :** ವಂದು ಕೆರೆಯಲ್ಲಿ ತಾವರೆ ಹುವ್ವು ಯಿರೂವದು ಗಿಣಿಗಳ ಹಿಂಡು ಹಾರಿ ಬಂದು ೧ ಹುವ್ವಿಗೆ ೧ ಗಿಣಿ ಯಿಾ ಪ್ರಕಾರ ಯಲ್ಲಾ ಹುವ್ವಿನ ಮೇಲೆ ಕೂತುಕೊಂಡಲು ವಂದು ಗಿಣಿಗೆ ತಾಉ ಯಿರಲಿಲ್ಲಾ ಮತ್ತೆ ಯಲ್ಲಾ ಗಿಣಿಗಳು ಮೇಲಕ್ಕೆ ಹಾರಿ ವಂದು ಹುವ್ವಿಗೆ ೨ ಗಿಣಿ ಪ್ರಕಾರ ಕೂತುಕೊಂಡಲು ವಂದು ಹುವ್ವು ಉಳಿಯಿತು ಯಿಾ ಕೆರೆಯಲ್ಲಿ ಯಿದ್ದ ಹೂವು ಯೆಷ್ಟು ಯಂದರೆ ೩ ಗಿಣಿಗಳು ಬಂದದ್ದು ಯೆಷ್ಟು ೪ ಯಂದು ಹೇಳುವದೂ

**ವಿಷಯ :** ಜಾಣ್ಮೆಯ ಲೆಕ್ಕಗಳು.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಸರ್ವಜ್ಞನ ಪದಗಳು ಮೊದಲಾದ ೫ ಕೃತಿಗಳಿವೆ.

—ಜಿಜಿಎಂ

## 623

ಕೆ. ೬೯೦ **ಗಣಿತದ ಸೂತ್ರ** ಶ್ಲೋಕ,ಗದ್ಯ
೧೧″ × ೨″ ? ?
೧-೬೦ ಪತ್ರ ೮ ಪಂಕ್ತಿ ೪೮ ಅಕ್ಷರ

**ಆದಿ :** ಶ್ರೀ ವೀತರಾಗಾಯಂ ನಮಃ|| ಗಣಿತದ ಸೂತ್ರ ಬರೆಯುುದಕ್ಕೆ ನಿರ್ವಿಘ್ನಮಸ್ತು|| ಶುಭಮಸ್ತು|| ಶೋಭನಮಸ್ತು|| ಶ್ರೀ ಚಂದ್ರಾನಾಥಸ್ವಾಮಿ ಪಾದಾವಿಂದವೆ ಗತಿ||

ಬಸ್ತಿ ೧ ಕ್ಕೆ ತಾವರೆ ಪುಷ್ಪ ೮೧ ಬಸ್ತಿ ೧೪೪ಕ್ಕೆ ಲಬ್ದ ಪುಷ್ಪ ೧೧೫೨ ಸೂತ್ರ ೧॥ ಮಣಿಯಸ್ಯ ಪದ್ಮಗಾಂರ್ನ್ನನಜ್ಜಿ೯ನ ಭವನೆ ಸಮರ್ಚ್ಚಿತಾ ಯೇಕಾ ಜಿನ....ದ್ರುಷ್ಟಾ ಸಿತಿ ಸಮಾನ್ವಿತ ಶತದ್ವಯಸ್ಯಾ ಸುಖತೆಯು ಮಣಿ ಶಂಖ್ಯಾತ್॥ ಬಸ್ತಿ ೧ಕ್ಕೆ ತಾವರೆ ಪುಷ್ಪ ಉ ಬಸ್ತಿ ೨೮೮ ಲಬ್ಧ ಪುಷ್ಪ ೬೫೯೨ ಸೂತ್ರ ೨॥

**ಅಂತ್ಯ :** ಟ್ಕೊ॥ ಮೊದಲು ಸೂ....ದಕ್ರಮ ಮೊದಲ ಹೊಂನು ೧ ನು ಹಣವ ಮಾಡಿ ಅದರ ಸಂಗಡ ಬಂಡಿಯ ಹಣವಂ ಕೂಡೆ ೧೧ ಯಿದ ನಾಲ್ಕು ಭಾರಿ ಗುಣಿಸೆ ರಾಸಿ ಮತಂ ಮೊದಲ ಹೊಂನಿಗೆ ಹಣ ೧೦ ಯೆಂದು ನಾಲ್ಕು ಭಾರಿ ಹತ್ತಱಂ ಗುಣಿಸೆ ೧೦೦೦೦ ಯಿದರಿಂದ ಮುಂನಿನ ಪ್ರತಿಯ ಭಾಗಿ ಸಲು ಲಬ್ದಮಕ್ಕುಂ॥ ಚಕ್ರವಡಿಯ ಸೂತ್ರ ಸಮಾಪ್ತ ಮಂಗಳ ಮಹಾಶ್ರೀ ಶ್ರೀ ವೀತರಾಗಾಯಂ ನಮಃ॥ ಬಂಣಾಂತರಕ್ಕೆ ಶುಭಮಸ್ತು॥ ಮೊದ ಲೊಳ್ಗೋರುವ ಬಂಣವೇಳುವರೆ ಮತಂ,

**ವಿಷಯ :** ವ್ಯಕ್ತಗಣಿತ.

**ವಿಶೇಷ :** ಅಸಮಗ್ರ. ಶಕಟರೇಫವನ್ನು ಅನೇಕ ಕಡೆಗಳಲ್ಲಿ ಬಳಸಿದೆ. ೪೫ ನೆಯ ಪತ್ರದಲ್ಲಿ ಒಂದು ಕಡೆ ಮಾತ್ರ ಬರವಣಿಗೆ ಇದೆ. ೫೧ ನೆಯ ಪತ್ರದ ಅರ್ಧಭಾಗವಿಲ್ಲ. ಕೆಲವು ಗರಿಗಳಿಗೆ ಹುಳು ಹೊಡೆದು ರಂಧ್ರವಾಗಿದೆ.

—ಕೆಆರ್ಎಸ್

## 624

| ಕೆ. ೧೮೦೩/೩ | ಗಣಿತ ಮಗ್ಗಿ ಲೆಕ್ಕ | ಗದ್ಯ |
|---|---|---|
| ೧೦.೯" × ೨" | ? | ? |
| ೧-೨೨ ಪತ್ರ | ೧೦ ಪಂಕ್ತಿ | ೫೪ ಅಕ್ಷರ |

**ಆದಿ :** ಶ್ರೀ ಅನಂತಪದ್ಮನಾಭಾಯ ನಮೋಃ॥ ಆದಿ ಶ್ರೀ ಪರಬ್ರಂಹ್ಮನೆ ನಮೋ ನಮಃ ಶ್ರೀ ಶಾರದಾ ಗುರುಭ್ಯೋ ನಮಃ॥ ನಿರ್ವಿಘ್ನನಮಸ್ತು॥ ಆಯು ರಾರೋಗ್ಯ ಐಶ್ವರ್ಯಾಭಿರುದ್ಧಿರಸ್ತು ಶ್ರೀ ಶ್ರೀ ಶ್ರೀ ಗಣಿತ ಮಗಿ ಲೆಕಾ

| | |
|---|---|
| ೧೧೧ | ೨೧೨ |
| ೧೬೨ | ೨೨೪ |
| ೧೩೩ | ೨೩೬ |
| ೧೪೪ | ೨೪೮ |
| ೧೫೫ | ೨೫೧೦ |
| ೧೬೬ | ೨೬-೧೨ |

೧೭೭ ೨೭-೧೪
೧೮೮ ೨೮೧೬
೧೯೯ ೨೯೧೮
೧೧೦೧೦ ೨೧೦೨೦

**ಅಂತ್ಯ :** ಟಿಂಕ ಅಂದರೆ ೧
ಬಾರಾಕಾಣಿ ಅಂದರೆ ೦
ಬಾರಾಕಾಣಿ ವ ೧ ಕ್ಕೆ ರುವೆ ೧೨
ರುವೆ ವ ೧ಕೆ ಪಾಕಿ ೫
ಪಾಕಿ ವ ೧ ಕ್ಕೆ ವೀಸೆ ೫ ಶ್ರೀ

**ವಿಷಯ :** ಗಣಿತ ವಿಚಾರ.

**ವಿಶೇಷ :** ಸಮಗ್ರ. ಇದರ ಜೊತೆಗೆ ಗಣಿತದ ವಿವರ ಮುಂತಾದ ೧೨ ಕೃತಿಗಳಿವೆ.

—ಜಿಜಿಎಂ

## 625

| ಕೆ. ೧೦೮೩ | **ಗಣಿತ ವಿಳಾಸ** | ಗದ್ಯ |
|---|---|---|
| ೧೧" × ೧" | ? | ? |
| ೧೦-೩೮+೮ ಪತ್ರ | ■ ಪಂಕ್ತಿ | ೪೨ ಅಕ್ಷರ |

**ಆದಿ :** ಕೇಳ್ವೊಂನು ನೆಗಳ್ದ ಮೇಲ್ವೊಂನೆನೆ ಪನ್ನೊಂದುವರೆ ಕೀಳು ಕನಕಕ್ಕಿಂದಿನ ಗೇಳುದೆನಿತುವೆ........ನಕ್ಕುಂ ಮೇಲುಗ ೧೩ ಕೆಳುಗ ೧೮೧= ಮೇಲುಗ ೨೭ ಲಬ್ದ ಕೇಳುಗ ೩೦೮-೩ ದ್ವಿತೀಯ ಹಾ........ಜತೂಪ್ಪುವುದಕ್ಕೆ ವಟ್ಟಮಪ್ಪಣವಡ್ಡರಿ

**ಅಂತ್ಯ :** ಬಣ್ಣವನು ನಿಜತೂಕದಿಂದ ಗುಣಿಸಿ ಮಟ್ಟಂ ಬಣ್ಣದಿಂ ಬಾಗಿಸಲು ತೂಕ ಮಕ್ಕುಂ ಈ ತೂಕವನು ನಿಜತೂಕದೊಳು ಕಳೆಯಲು ಅದು ಲೋಹ ತೂಕಮಕ್ಕು

**ವಿಷಯ :** ಗಣಿತ.

**ವಿಶೇಷ :** ೧ ರಿಂದ ೯ ಓಲೆಗಳು ಇಲ್ಲ. ೧೦ ನೆಯ ಓಲೆ ಮುರಿದಿದೆ. ಕೊನೆಯಲ್ಲಿ ಸಂಖ್ಯೆ ಇಲ್ಲದ ೮ ಓಲೆಗಳಿವೆ. ಅವುಗಳೂ ಗಣಿತಕ್ಕೆ ಸಂಬಂಧಿಸಿದವೆ.

—ಹಕರಾ

## 626

| ಕೆ. ೧೮೧೨ | **ಗಣಿತಶಾಸ್ತ್ರ** | ಗದ್ಯ |
|---|---|---|
| ೭" × ೧.೬" | ? | ? |
| ೧-೧೫೮ ಪತ್ರ | ೬ ಪಂಕ್ತಿ | ೨೩ ಅಕ್ಷರ |

**ಆದಿ :** ಗಣಿತಶಾಸ್ತ್ರ ಬರೆವುದಕ್ಕೆ ಶುಭಮಸ್ತು॥
ಇತಃ ಪರಂ ವ್ಯವಹಾರೇ ಜೀತಿ ಗಣಿತಮುದಾಹರಿಷ್ಯಾಮಃ॥ ಅಲ್ಲಿ ವೊಂದೊಂದು ಇಟ್ಟಿಗೆ ಪ್ರಮಾಣ। ಎಷ್ಟಾಗಬೇಕು। ಯೆಂದು ಪರಿಭಾಷೆ ಯನು। ಹೇಳಿಹರು॥

**ಅಂತ್ಯ :** ತೂಬಿನಲ್ಲಿ ಬಂದ ನೀರು ಮ ೭೨ ಯಿಾ ಪ್ರಕಾರ ನಾಲ್ಕು ತೂಬಿನಲ್ಲಿ ವೊಂದೆ ಪೆಟ್ಟು ಬಂದು ನಾಲ್ಕು ಜಾವದ ತೂಬಿನಲ್ಲಿ ಬಂದು ತುಂಬುವಂತಾಗಿರುವ ೫೪ ಅಂತು ತೂಬು ೪ ಕ್ಕೆ ವೊಂದೆ ಪೆಟ್ಟು ಬಂದು ತುಂಬಿದ ನೀರುವು ೪೫೦ ಅಂತು ವಿಗಳಿಗೆ ೨೧೬ ಕೆ ಗಳಿಗೆ ೩॥ ವಿಗಳಿಗೆ ೬ ಯಿಷ್ಟಕ್ಕೆ ತುಂಬಿತು॥ ಯೆಂಟೆಂಟು ಕಡೆಯಲೊಂದಂ। ಟೆಂಟೆಣಿಸಿ ಬಾಯಾರಿದ್ದೆಯನ ಗಂಟುಗಾಣಂ ಉಂಟುಂಟು ನಿಮುಷ ಮಾತ್ರಕೆ। ವೊಂದಂಬರಂದ್ರ ಸೂನ್ಯ ಹರನಯದಿಂದಂ

**ವಿಷಯ :** ಗಣಿತ.

**ವಿಶೇಷ :** ಅಸಮಗ್ರ. ಕೆಲವು ಗರಿಗಳ ಅಂಚು ಮುರಿದುಹೋಗಿವೆ.

—ವೈಸಿಬಿ

## 627

| ಕೆ. ೯೨೭ | **ಗಣಿತ ಸಂಗ್ರಹ** | ಗದ್ಯ |
|---|---|---|
| ೧೪" × ೧.೩" | ? | ? |
| ೧-೯೯ ಪತ್ರ | ೬ ಪಂಕ್ತಿ | ೫೦ ಅಕ್ಷರ |

**ಆದಿ :** ಶ್ರೀ XXX ೩೩ ಕಡ್ಡಿಯ ಕರಗಿದ ಲೆಕ್ಕ ಬಂ ೫। ಬಂ ೫$^{1}$। ಬಂ ೫$^{11}$। ಬಂ ೫m। ಬಂ ೬। ಬಂ ೬$^{1}$। ಬಂ ೬$^{11}$। ಬಂ ೬। ಬಂ ೭। ಬಂ ೭$^{1}$। ಬಂ ೭$^{11}$। ಬಂ ೭। XXX ದ್ವಿತೀಯ ಹಾರ ೪೫೦ ಬಾಗಿಸಲು ಬಂಣ ತಪ್ಪದು॥

**ಅಂತ್ಯ :** (೯೧ನೆಯ ಪತ್ರ) ಮೂಜು ಗೋವುನ ಭೂಮಿಯಂ ವೃದ್ದವನಳದು ೧೦। ಅಗಲವನಳೆದರೆ ೧೦ ಯಿಾ ೧೦ ನು ಅರ್ದ್ಧಿಸಿದರೆ ೫ ಯಿಾ ೫ ನು ವೃದ್ದ ೧೦ ನುಂಗುಣಿಸಲು ೫೦ ಪೂರ ೫ ವೃತ್ತವಾಗಿದ್ದ ಭೂಮಿಯನು ಅರ್ದ್ದವ ಮಾಡಿದರೆ ೪ ಯಿಾ ೪ ನು ಅರ್ದ್ಧಿಸಿದರೆ ೨ ಯಿಾ ೨ ನು ಗುಣಿಸಿದರೆ ೪ ಕಂಭವಹುದು. ಶಕವರ್ಷ ೧೫೯೦ನೆಯ ಕೀಲಕ ಸಂವತ್ಸರದ ಭಾದ್ರಪದ ಬ ೧೦ ಯು ರವಿವಾರ ಸೂರ್ಯನುದೆಯವಾದ ೧೦ ನೆ ಘಳಿಗೆಯಲ್ಲಿ ಮಲೆ ಯೂರ ಸೇನಬೋವ ಆದಪ್ಪಯ್ಯಗಳ ಮಗನು ವಿಜಯಪ್ಪನು ತನಗೆ ಬೇಕಾಗಿ ಬರೆದ ಗಣಿತದ ಪುಸ್ತಕಕ್ಕೆ ಮಂಗಲ ಮಹಾಶ್ರೀ XXX

(೯೯ನೆಯ ಪತ್ರ) ೫ಕ್ಕೆ ಅಲುತಳ ಭೋಜನ। ೬ಕ್ಕೆ ಮರಣ। ೭ಕ್ಕೆ ಕಾರ್ಯ್ಯಸಿದ್ಧಿಯೆಂಟಱಿಂದ ಮರಣಂ। ೯ ಲಾಭ। ೧೦ ನೆನೆದ ಕಾರ್ಯ್ಯ ಸಿದ್ಧಿ। ೧೧ಕ್ಕೆ ಲಕ್ಷ್ಮಿ ಕೈಸಾಱ್ಗುಂ॥

**ವಿಷಯ :** ಗಣಿತ

**ವಿಶೇಷ :** ಇದರಲ್ಲಿ ಸಂಖ್ಯಾಸ್ಥಾನ, ಕ್ಷೇತ್ರಗಣಿತಗಳಿವೆ. ಒಂದೆರಡು ಓಲೆಗಳಲ್ಲಿ ಜ್ಯೋತಿಷ ವಿಷಯವಿದೆ. ಗರಿಗಳು ಶಿಥಿಲವಾಗಿವೆ. ೯೮ ನೆಯ ಪತ್ರದಲ್ಲಿ ಬರವಣಿಗೆಯಿಲ್ಲ.

—ಬಿಎಸ್‌ಎಸ್

628

| ಕೆ.ಎ. ೪೨೪/೨ | **ಗಣಿತಸಾರ** | ಗದ್ಯ, ಪದ್ಯ |
|---|---|---|
| ೧೦.೫" × ೯.೬" | ? | ? |
| ೩-೧೯ ಪುಟ | ೨೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀ ಗುರುಭ್ಯೋ ನಮಃ।

ಸೂ॥ ದತ್ತಾನೆಯಿಕಸ್ಸಹ ಜಿನಭವನೇಯಂಬುಜಾನಿ ತಾನ್ಯಷ್ಟಾ।
ವಸತೀನಾಂ ಚತುರುತ್ತರ ಚತ್ವಾರಿಂಶಜ್ಜಿನಾಲಯನಾತ್ಕಿಮ್ ॥೧॥
ಟೀ॥ ಬಸ್ತಿ ೧॥ ತಾ ೮॥ ಬಸ್ತಿ ೧೪೬। ಲಬ್ಧ ೧೧೫೨ ॥೧॥
ಸೂ॥ ೨॥ ಮಣಿಯಸ್ಯ ಪದ್ಮರಾಗಾರ್ಸ್ನವೌ (?)
ಜಿನಭವನ ಸಮರ್ಚಿತಾ ದೃಷ್ಟಾ।
ಸಾಷ್ಟಾಶೀತಿ ಸಮನ್ವಿತ
ಸತದ್ವಯಸ್ಯಾಶು ಕಥಯ ಮಣಿಸಂಖ್ಯಾಮ್॥
ಬಸ್ತಿಗೆ ತಾ—೯॥ ಬಸ್ತಿ ೨೮೮ ಲಬ್ಧ ೨೫೯೨ ॥ಸೂ. ೨॥

**ಅಂತ್ಯ :** ಸೂತ್ರ—೬
ಅಂಕೇ ಬಂತಮ್ಮರಬರ ಶಂಕುದೂಣಾಂ ಸೋಪೋಕ್ಷುಚ
ಈಶಾನರ ಭಾಸ್ಕರಾನಿಲ ಚಂದ್ರರ್ತು ಬಾಣಾಬ್ಧಿ ಗದ್ಗಪಾನಾಮ್॥
ಆ ಚಕ್ಷ್ಯಮೂಲಂ ಗಣ್ಯಪ್ತಮ್ (?)
ಪೊಡ್ಡು ಮುತ್ತಿನ ಮಣಿ ೧೧೦೯ ೮೮೯—೮೪ ೪ ೫೬೧॥ ಲಬ್ಧ-ಮುತ್ತಿನ ಸರ—೩೩೩—॥ ಸರವೊಂದಕ್ಕೆ ಮಣಿ—೩೩೩-ಮುತ್ತಂ ಸರ[ವೊಂದಕ್ಕೆ] ೧೧೧ —॥ಸರವೊಂದಕ್ಕೆ ಮಣಿ ೧೧॥ ಮುತ್ತಂ ಸರಂಗಳು ೯೧೯—॥ಸರವೊಂದಕ್ಕೆ ಮಣಿ—೯೧೯॥ ಇತಿ ಪರಿಕರ್ಮ್ಮವಿದು ಚತುರ್ತ್ಥ॥ ವರ್ಗಮೂಲಂ ಸಮಾಪ್ತಂ ಶ್ರೀ.

**ವಿಷಯ:** ಗಣಿತ.

**ವಿಶೇಷ:** ಇದನ್ನು ಮದರಾಸು ಪ್ರಾಚ್ಯಕೋಶಾಗಾರದಲ್ಲಿ 1935–36 ರಲ್ಲಿ ಡಿ. 1456 ರಿಂದ ಪ್ರತಿ ಮಾಡಲಾಗಿದೆ. ಇದರೊಂದಿಗೆ ಸಂಖ್ಯಾಸ್ಥಾನ, ವ್ಯವಹಾರ ಗಣಿತ ಮೊದಲಾದ ಮೂರು ಗ್ರಂಥಗಳಿವೆ.

—ಬಿಎಸ್‌ಎಸ್

629

ಕೆ.ಬಿ. ೬೧೨/೧೦ **ಗಣೇಶ್ವರನ ಸ್ತುತಿ** ಸ್ತುತಿ

೭.೨" × ೪.೩" ? ?

೪೧-೪೩ ಪುಟ ೧೮ ಪಂಕ್ತಿ ೧೫ ಅಕ್ಷರ

**ಆದಿ:** ಶ್ರೀ|| ಆದಿಯೆಲ್ಲಿ ಗುರುಕಾರುಣ್ಯಾವಂ| ಪಡದ್ದು ಅಂಗದ ಮೇಲೆ ಸಿವಲಿಂಗ ಧರಣವಾದ ಶರಣನ ಸರ್ವಾಂಗವೆಲ್ಲ ಅಂಗಪದ ವಿವರ| ಹಾಗೆಯೆಂದಡೆ| ಬ್ರಂಹ್ಮಾ ರುದ್ರದಲ್ಲಿ ಅನಾದಿಗಣೇಶ್ವರಾನೂ ಯೆನಿಸಿ ಸರ್ವತೋಮುಖ ವಾಗಿ ಯಿಪ್ಪಾರೈಯಾ| ಲಾಲಾಟದಲ್ಲಿ ಅಧಿಗಣೇಶ್ವರನೆನಿಸಿಪ್ಪರ್ಙೈಯಾ| ಯಡದ ಕರ್ನದಲ್ಲಿ ಆಧ್ಯಾತ್ಮ ಗಣೇಶ್ವರನೆನಿಸಿಪ್ಪರ್ಙೈಯಾ

**ಅಂತ್ಯ:** ಹೊಳ ಹೊರಗೆ ಪರಿಪೂರ್ನವಾಗಿ ಬೆಳಗುತಿರ್ಪರ್ಙೈಯಾ| ಯಿಾದು ಕಾರಣ ಸರ್ವಂಗವೆಲ್ಲವೂ ಲಿಂಗಮಾಯಃವೆಂದ್ದೂ ಅರಿತು ಅಡಿಗಾಡಿಗೆ ಶ್ರೀವಿಭೂತಿಯಾ ಧರಿಸಿತಿಪ್ಪರ್ಙೈಯಾ| ಮಹಾಲಿಂಗ.... ಸಿದ್ಧೇಶ್ವರ ಪ್ರಭೂವೇ|| ಶ್ರೀ| ಶ್ರೀ||

**ವಿಷಯ:** ಗಣಪತಿ ಸ್ತುತಿ.

**ವಿಶೇಷ:** ಅಸ್ಪಷ್ಟಾಕ್ಷರ, ಕಾಗದ ಹಳೆಯಃದು. ಇದರೊಡನೆ ಬಾಲಗ್ರಹ, ಜ್ವರ ಇವುಗಳಿಗೆ ಯಂತ್ರ, ಕಲ್ಯಾಣಮ್ಮನವರ ಕಾಲಜ್ಞಾನ, ಗಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ವಿವೇಕ ಚಿಂತಾಮಣಿ ಪ್ರಶ್ನೆ, ಸಿದ್ಧರಾಮದೇವರ ಕಾಲಜ್ಞಾನ, ವಿಭೂತಿ ಮತ್ತು ಪಾದೋದಕ ಮಹಾತ್ಮ್ಯೆಗಳಿವೆ.

—ಎಸ್‌ಎನ್‌ಕೆ

630

ಕೆ. ೭೫೭ **ಗದಾಯುದ್ಧ** ಚಂಪು

೧.೯" × ೯.೯" ರನ್ನ ೯೯೩

೧-೭೬ ಪತ್ರ ೮ ಪಂಕ್ತಿ ೪೨ ಅಕ್ಷರ

**ಆದಿ:** ಶುಭಮಸ್ತು ನಿರ್ವಿಘ್ನಮಸ್ತು ರನ್ನ ಗದಾಯುದ್ಧ

ವೃ|| ಶ್ರೀ ಯುವತೀಪ್ರಿಯಂ ಬಲಂಯುತಂ ಬಲಿದರ್ಪಹರಾಜಿತಾರಿ ದೈ
ತ್ಯೇಯನ ಸಭೋಗನಿಲಯಂ ಪ್ರತಿಪಾಲಿತ ಧರ್ಮಚಕ್ರವ
ಟ್ಟಾಯತ ನೃತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾ
ರಾಯಣ ದೇವಸೀಗೆಮಗೆ ಮಂಗಲಕಾರಣಮುತ್ಸವಂಗಳಂ ||೧||
ಕೃತಿ ನೆಗಳ್ದ ಗದಾಯುದ್ಧಂ
ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ
ಕೃತಿಯಂ ವಿರಚಿಸಿದಲಂ
ಕೃತಿಯಂ ಕವಿರತ್ನನೆಂದೊಡೇ ವಂಣಿವುದೋ ||೩೨||

ಅಂತ್ಯ : ಕಂ|| ಸಕಸಮಗತಿ ರುತುಯುಗಶಶಿ
ನಿಕರಾಂಕಂ ಚಿತ್ರಭಾನು ಕಾರ್ತಿಕ ಶಿತಸಪ್ತಮಿ
ಸುಕರಂ ಬುಧಸೇವ್ಯಮಾಯಿತ್ತು ರನ್ನನಕಾವ್ಯಂ ||೨೩||

ಗದ್ಯ|| ಇದು ಸಮಸ್ತ ಭುವನವಲ್ಲಭ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪ ಪಾದಪ ಛಾಯಾಶ್ರಯಾಸ.... ಕವಿಚಕ್ರವರ್ತಿ ಕವಿ ರನ್ನ ವಿರಚಿತಮಪ್ಪ ಚಾಣೂಕ್ಯ ಚಕ್ರವರ್ತಿ ಶ್ರೀ ಸಾಹಸಭೀಮವಿಜಯದೊಳ್ಭೀಮಸೇನನ ಪಟ್ಟಾ....ರ್ಣ್ಣನಂ ದಶಮಾಶ್ವಾಸಂ||
ಅಂತು ಆಶ್ವಾಸ ೧೦ಕ್ಕಂ ವೃತ್ತ ೧೭೬ಕ್ಕಂ ಪದ ೪೦೧ಕ್ಕಂ ವಚನ ೧೮೫ಕ್ಕಂ ಗದ್ಯ ಸಹ ೭೭೦ಕ್ಕಂ.... ಕವಿರನ್ನ ವಿರಚಿತ ಚಾಣೂಕ್ಯ ಚಕ್ರವರ್ತ್ತಿ ಸಹಸಭೀಮಸೇನ ಕಾವ್ಯಮಿದಂ ಶಕವರುಷ ೧೨೬೪ನೇ....ನು ಸಂವತ್ಸರ ದಲ್ಲಿ ಮಾಡಿದ ಕಾವ್ಯ.

**ವಿಷಯ** : ಭೀಮ ದುರ್ಯೋಧನರ ಗದಾಯುದ್ಧ ಮಹಾಭಾರತದ ಕಥೆ.

**ವಿಶೇಷ** : ಸಮಗ್ರ ಪ್ರತಿ. ಶಕಟರೇಫದ ಬಳಕೆ ಇದೆ. ೫೧ ನೆಯ ಕ್ರಮಾಂಕದ ಪತ್ರ ಗಳಿರಡಿವೆ. ಗ್ರಂಥಾಂತ್ಯದಲ್ಲಿ ಈ ಕೃತಿಯ ಪ್ರತಿಮಾಡಿದ ಕಾಲವನ್ನು ಸೂಚಿಸಿದೆ. ಇದರಂತೆ ಇದು 1342ರ ಪ್ರತಿ ಆಗುತ್ತದೆ.

—ಕೆಆರ್‌ಎಸ್

## 631

ಕೆ.ಎ. ೩೭೭ **ಗದಾಯುದ್ಧ (ಸಾಹಸಭೀಮವಿಜಯ)** ಚಂಪು

೧೩.೩" × ೮.೨" ರನ್ನ ೯೯೩

೧-೧೧೫ ಪುಟ ೧೭ ಪಂಕ್ತಿ ೨೧ ಅಕ್ಷರ

**ಆದಿ :** ಸಾಹಸಭೀಮವಿಜಯ

........................................

ಅರಿಯೆನಿದಂ ನಿನ್ನಿಂದಿನ
ತೆರನಂ ನೀನೇನುಮಿದ(ಕೆ) ಮುಳಿದಿರ್ದಯೊ ಪೇಳ್
ಮರುಮಾತುಗೊಡದೆ ರವಿಸುತ
ಮರ[ಸಿ ಬಿ]ರ್ದಪೆಯೊ ಪೇಣು ಬಳಲಿರ್ದಪೆಯೋ||

ಅಂತ್ಯ : ಛಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ಭೀಮಸೇನಂ
ಬಲದೊಳ್ಮಾದ್ರೀಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪ(ಭಾರಿ)
ವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲೆನಿಪವರಿಂ ಭಾರತಂ ಲೋಕಪೂಜ್ಯಂ||
ಇದು ಸಕಲ ಭುವನಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜ ರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀ ಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಚ್ಛಾಯಾಶ್ರಯಾಸನ್ನ ವರ್ತಿ....ಚಾಳುಕ್ಯ ಚಕ್ರವರ್ತಿ ಶ್ರೀ ಸಾಹಸ ಭೀಮವಿಜಯದೊಳ್ ಹಸ್ತಿನಾಪುರ ಪ್ರವೇಶವರ್ಣನಂ ದಶಮಾಶ್ವಾಸಂ|| ಅಂತು ಆಶ್ವಾಸ ೧೦ಕ್ಕಂ ರನ್ನನ ಗದಾಯುದ್ಧಂ ಸಂಪೂರ್ಣಂ ಶ್ರೀ

X X X

............ ಗಾಂಧಾರಿಗಾದು............೮೦|| ಭವದನುಜಯು............ ಯುಂ ನೆಗಳ್ತರಿಯಾ|| ... ........ಯೆಂದು ನುಡಿದ ನರೇಂದ್ರಂ........ದು ಸಕಲಸನು ..........ಯ ಕುಲತಿಲಕಂ ಶ್ರೀಮ ..........ಚಕ್ರವರ್ತಿ ಶ್ರೀ ಸಾಹಸ ಭೀಮವಿಜಯದೊಳ್........

ವಿಷಯ : ಭೀಮ ದುರ್ಯೋಧನರ ಯುದ್ಧ.

ವಿಶೇಷ : ಆರನೆಯ ಆಶ್ವಾಸದ ನಂತರ ಐದನೆಯ ಆಶ್ವಾಸ ಬಂದಿದೆ. ೧೦ನೆಯ ಆಶ್ವಾಸದ ನಂತರ ಮೂರನೆಯ ಆಶ್ವಾಸ, ಎರಡನೆಯ ಆಶ್ವಾಸಗಳಿವೆ. ಅಸಮಗ್ರ. ಮೂಲಪ್ರತಿ ತ್ರುಟಿತವಾದುದರಿಂದ ಇವರಲ್ಲಿಯೂ ಜಾಗಬಿಟ್ಟು ಬಿಟ್ಟು ಪ್ರತಿಮಾಡಲಾಗಿದೆ. ೧೯೬೬ರಲ್ಲಿ ಪ್ರತಿಮಾಡಲಾಗಿದೆ.

—ಬಿಎಸ್ಎಸ್

632

ಕೆ. ೧೧೩೮/೧೪ ಗದ್ಯಸಂಗ್ರಹ ಗದ್ಯ
೭.೪" × ೨" ? ?
೬೧-೭೧ ಪತ್ರ ೧೪ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀಗುರುಬಸವಲಿಂಗಾಯ ನಮಃ॥ ಅಕ್ಷರಮಾಲಿಕಗದ್ಯ॥ ಓಂ ಜಯಜಯ ಬಸವಾಖ್ಯಸ್ವಾನುಭೂತ್ಯೈಕ್ಯ ಸೌಖ್ಯ ಪ್ರಮಥಂ ಗಣಪವಿತ್ರಃ ಪ್ರಸ್ಫುರದ್ಭಕ್ತಿ ಗೋತ್ರ ಪ್ರಣಮಿತ ಬುಧವಾರ್ಯ ಸ್ವಾದ್ವೈಶ್ವರ್ಯಮಾರ್ಯ ಪ್ರಮುದಿತ ವೃಷಭಭೂಪಃ ಭ್ರಾಜಮಾನಃ ಪ್ರತಾಪಃ

**ಅಂತ್ಯ :** ಶಿವಮಸ್ತು ಭಕ್ತಿವಿಭವೋದ್ಭವಮಸ್ತುಮಕ್ಷರಾಂಕ ಪಠಣಶ್ರವಣಾಸ್ತವನಾ ಸಕ್ತರಿಗೆ ಮಹೋತ್ಸವಸ್ತು ವಾಕ್ಸಿದ್ಧಿರಸ್ತು ಶಿವಬಸವೇಶಾ ॥೪೦॥ ಲಕ್ಷ್ಮಣ ಪಥವೇಧಿ ಸಂಧ್ವಿವಿಲಕ್ಷಣ ಪೂರ್ವಸ್ವರಾಕ್ಷರಾಷ್ಟ್ವಾಕ್ಷರಕಾಧಿಕಾಂತೀಕ್ಷಾ ಮಾಲದೇಕ್ಷರಸ್ಥಲ ರಕ್ಷಿಸೆನ್ನುಮಂ ಶಿವಬಸವೇಶಾ ॥೪೮॥ ಅಕ್ಷರಾಂಕ ಗದ್ಯ ಸಮಾಪ್ತ ಮಂಗಳ ಮಹಾಶ್ರೀ ಶ್ರೀ

**ವಿಷಯ :** ಈಶ್ವರನ ಸ್ತುತಿ.

**ವಿಶೇಷ :** ಅಕ್ಷರಮಾಲಿಕಾ ಗದ್ಯ, ನಮಸ್ಕಾರ ಗದ್ಯ, ಅಷ್ಟೋತ್ತರ ಶತನಾಮ ಗದ್ಯ, ಷಡುಸ್ಥಲದ ಗದ್ಯ, ಪಂಚಪ್ರಕಾರದ ಗದ್ಯ, ಉದಾಹರಣದ ಗದ್ಯ, ಅಕ್ಷರಾಂಕನ ಗದ್ಯಗಳು ಈ ಸಂಗ್ರಹದಲ್ಲಿವೆ. ಅಲ್ಲದೆ ಈ ಕಟ್ಟಿನಲ್ಲಿ ಗುರು ರಗಳೆ, ಷಡಕ್ಷರಿ ರಗಳೆ ಇತ್ಯಾದಿ ೨೯ ಕೃತಿಗಳಿವೆ.

—ಜಿಜಿಎಂ

## 633

| ಕೆ. ೧೭೨೭ | **ಗಯ ಚರಿತ್ರೆ** | ಭಾಮಿನೀಷಟ್ಪದಿ |
|---|---|---|
| ೧೬" × ೧೧.೧" | ಕೋನಯ್ಯ | ಸು. ೧೭೫೦ |
| ೧-೯೫ ಪತ್ರ | ೯ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀಗಣೇಶ ಶಾರದಗುರುಭ್ಯೋನಮಃ॥ ಶ್ರೀಗಯಚರಿತ್ರೆ ಬರೆಯುವುದಕ್ಕೆ ನಿರ್ವಿಘ್ನಮಸ್ತು XXX

ಶ್ರೀರಮಣ ಸುರವಂಧ್ಯ ನಿರುಪಮ
ಚಾರುನೀರದವರ್ನ ವಿಮಲಸ
ರೋರುಹಾಂಬಕ ಜಗದುದರ ರವಿಕೋಟಿಸಂಕಾಶಾ
ನಾರದಾದಿಮುನಿ ಪ್ರಿಯಾಚ್ಯುತ
ವಾರಿಜಾಸನಜನಕ ಸಲಹು ಕೃ
ಪಾರಸದಿ ಸಜ್ಜನರನನುದಿನ ತಿರುಮಲಾಧೀಶಾ ॥೧॥

X X X

ಶಿರಿಯರಸನೊಲವಿಂದ ರಚಿಸಿದ
ಮಿರುಪ ಕಾಶ್ಯಪಗೋತ್ರಸಂಭವ
ಧರೆಗಧಿಕ ಹೋತೂರ ಬೆಟ್ಟರಸನ ತನೂಭವನೂ

ಸರಸ ಭಾರತಿ ಕೋನಯಾಖ್ಯನು
ತರಣಿಚಂದ್ರಮರುಳ್ಳನಕ ಸು
ಸ್ತಿರಮೆನಿಸುವೀ ಕೃತಿಯು ಸಜ್ಜನರುಗಳು ಲಾಲಿಪುದೂ ||೧೬||

ಅಂತ್ಯ : ಅಪರಿಮಿತದಾಯುಷವನು ಸುಖನನು
ವಿಪುಳಸುತ ಪೌತ್ರಾಭಿವೃದ್ಧಿಯು
ನುಪಮಿಸಲ್ಕೊಲವಿಂದ ಸಕಲ ಧರಾಧಿಪತ್ಯವನೂ
ದ್ವಿಪರಥಾಶ್ವ ಪದಾತಿಸಂಘವ
ನಿಪುಣತೆಯು ಧನಧಾಂನ್ಯಗಳನೊದ
ವಿಪನಿದದನು ಕೇಳಿದ ಜನರಿಗಧಿಪತಿ ರಮಾನಾಥಾ ||೧೨೦||
ಶ್ರೀರಸ್ತೂ ಅಂತೂ ಸಂಧಿ ಪೀಟಿಕೆ ಸಹಾ ೨೬ಕ್ಕಾಂ ಪದನು ೧೬೧೧ಕ್ಕಂ
ಮಂಗಳ ಮಹಾಶ್ರೀ.

ವಿಷಯು : ಕೃಷ್ಣಾರ್ಜುನರ ಕಾಳಗ.
ವಿಶೇಷ : ಪ್ರತಿ ಶುದ್ಧವಾಗಿದೆ. ಚೆನ್ನಾಗಿದೆ.

—ಜಿಜಿಎಂ

## 634

ಕೆ. ೧೮೫/೧ | **ಗಯ ಚರಿತ್ರೆ** | ಭಾಮಿನೀಷಟ್ಪದಿ
೧೬.೮″ × ೧.೩″ | ಕೋನಯ್ಯ | ಸು. ೧೬೫೦
೧-೧೩೮ ಪತ್ರ | ೬ ಪಂಕ್ತಿ | ೮೬ ಅಕ್ಷರ

ಆದಿ : ಶುಭಮಸ್ತು। ಗಯಚರಿತ್ರೆ ಬರೆಯುವದಕ್ಕೆ ನಿರ್ವಿಘ್ನಮಸ್ತು।
ಶ್ರೀ ಶಿವನ ಸುಕುಮಾರ ಸಕಲ ಸು
ರಾಸುರಾರ್ಚಿತ ಪಾದಪದ್ಮ ವಿ
ಶೇಷ ಗುಣಯುತ ವಿಮಲಗಾತ್ರ ವಿಶೇಷ ಚಾರಿತ್ರ
ಮೂಷಕಪ್ರಿಯ ಮದವಿಮರ್ದನ
ಪಾಸ್ತು ಮೋದಕ ಪರಶುಧರ ವಿ
ಘ್ನೇಶ ದಯದಿಂದೊಲಿದು ಕರುಣಿಸು ಮತಿಗೆ ಮಂಗಳವಾ ||೧||

ಅಂತ್ಯ : ಅಪರಿಮಿತದಾಯುಷವನು ಸುಖವನು
ವಿಪುಳಸುತ ಪೌತ್ರಾಭಿವೃದ್ಧಿಯು
ನುಪಮಿಸಲ್ಕೊಲವಿಂದ ಸಕಲ ಧರಾಧಿಪತ್ಯವನೂ।
ದ್ವಿಪರಥಾಶ್ವ ಪದಾತಿ ಸಂಘವ
ನಿಪುಣತೆಯು ಧನಧಾನ್ಯಗಳನೊದ
ವಿಪನು ಕೇಳಿದ ಜನರಿಗಧಿಪತಿ ರಮಾನಾಥಾ। ||೧೦೬||
ಅಂತೂ ಸಂಧಿ ೧೨ ಕ್ಕಂ ಪದನೂ ೧೦೨೫ ಕ್ಕಂ ಮಂಗಳ ಮಹಾ ಶ್ರೀಶ್ರೀ.

**ವಿಷಯ :** ಕೃಷ್ಣಾರ್ಜುನರ ಕಾಳಗ.

**ವಿಶೇಷ :** ಪ್ರತಿ ಸುದೃಢವಾಗಿದೆ. ಬರವಣಿಗೆ ಚೆನ್ನಾಗಿದೆ. ಇದರೊಂದಿಗೆ ನಳಚರಿತ್ರೆ ಎಂಬ ಇನ್ನೊಂದು ಕೃತಿಯಿದೆ.

—ಎಂಪಿಎಂ

## 635

ಕೆ. ೮೭೫/೨ | **ಗಯ ಚರಿತ್ರೆ** | ಯಕ್ಷಗಾನ

೧೩.೨" × ೧.೭" | ? | ?

೧-೧೮ ಪತ್ರ | ೧೦ ಪಂಕ್ತಿ | ೭೬ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ॥ ವೀತಭದ್ರಾಯ ನಮಃ
ಶ್ರೀಮದ್ಬ್ರಹ್ಮ ಪುರಂದರಾದಿ ವಿಭುದಶ್ರೇಣಿ ಶಿರೋಭೂಷಣಾ
ಸ್ತೋಮೋದ್ವರ್ತನ ಕುಂಚಿ ಕೋಮಲನಖಂ ಸೂಕ್ಷ್ಮೈಕರ ಪ್ರಸ್ತಾರಂ
ವಾಮಾಕ್ಷಿ ಕರಣೌರೂದ ಪ್ರಘುಟಿಕಾ ಉತ್ತ ಪ್ರಗುಲ್ಫಾಂನ್ವಿತಂ
ವ್ಯೋಮಸ್ಥಾನ ಧುನಿಯುತಂ ಹರಿಪದಾಂಬೋಜಂ ಸದಾಭಾವಯೇತು॥

ವಚನ॥ ಯೀ ಪ್ರಕಾರದಲಿ ಪ್ರಬಂಧಕಲ್ಪಕನು ನಿಶ್ರೇಯಸಾದಿ ಸಕಲ ಮನೋಭೀಷ್ಟಂಗಳನು ಕೊಡುವಂಥಾ ಶ್ರೀಕೃಷ್ಣನ ಚರಣಾರವಿಂದಂಗಳನೂ ಧ್ಯಾನವ ಮಾಡಿದವನಾಗಿ ಆಮೇಲೆ ಪ್ರತ್ಯೂಹ ನಿವಾರಣಾರ್ಥವಾಗಿ ವಿನಾಯಕಾದಿ ಸಕಲದೇವತೆಗಳ ಪ್ರಾರ್ಥನೆಯಂ ಮಾಡುತ್ತಿದ್ದಾನೆ. ತದನಂತರದಲಿ ಸೂತಪುರಾಣಿಕನು ನೈಮಿಶಾರಂಣ್ಯ ಪುಂಣ್ಯ....ನಿವಾಸಿಗಳಾದ ಶೌನಕಾದಿ ಮುನಿಗಳಿಗೆ ಪೇಳಿದಂಥಾ ಕ್ರುಷ್ಣಾರ್ಜು ಸಂಗ್ರಾಮದ ಪ್ರಸಂಗವನೂ ಕಂನಡ ಗೀರ್ವಾಣ ಭಾಷೆಯಿಂದ ದ್ರಾಕ್ಷಾಪಾಕದಿಂದಾ ಯಕ್ಷಗಾನ ಪ್ರಬಂಧವನೂ ವಿರಚಿಸುವಂಥವನಾಗಿ

**ಅಂತ್ಯ :** ನಂದಗೋಪದ ಕುಮಾರ ಯಿಂದಿರೊರ್ವಿ ಮನೋಹರಾ
ನಂದಿವಾಹನಾಂಗ ವಿಹಾರ ಗೋಪಾಲಕ್ರುಷ್ಣಣಾ
ಮಂದರಾದ್ರಿ ಧರಾಮಾ....ತ್ತ ಲಿದ್ರವುಪದಿಯಾ
ಅರ್ಜುನನ ಸಮೀಪಕ್ಕೆ ಬಂದು ಯೇನೆಂದಳೂ ಯಂದರೆ॥

ಜಂಪೆ॥ ಬಂದು ಮೇರೆದಪ್ಪಿದ ಶರದಿಯಂದಲಿ॥ ನ

**ವಿಷಯ :** ಕೃಷ್ಣಾರ್ಜುನರ ಕಾಳಗ.

**ವಿಶೇಷ :** ಅಸಮಗ್ರ. ಪತ್ರಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ. ಅಂಚುಗಳು ಮುರಿದು ಲುಪ್ತವಾಗಿವೆ. ಇದೇ ಕಟ್ಟಿನಲ್ಲಿ ವಿಕ್ರಮವಿಲಾಸವೆಂಬ ಮತ್ತೊಂದು ಗ್ರಂಥವಿದೆ.

—ಕೆಆರ್‌ಎಸ್

636

ಕೆ.ಎ. ೩೭೫/೨ **ಗಯ ಚರಿತ್ರೆ** ಯಕ್ಷಗಾನ

೧೦.೪" × ೯.೪" ? ?

೧೬೪-೨೦೨ ಪುಟ ೨೦ ಪಂಕ್ತಿ ೩೦ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ। XX ಗಯಚರಿತ್ರೆ ಯಕ್ಷಗಾನ ಪ್ರಾರಂಭಃ॥

ವೃತ್ತ॥ ಶ್ರೀಮದ್ಬ್ರಹ್ಮ ಪುರಂದರಾದಿ ವಿಬುಧಶ್ರೇಣಿ ಶಿರೋಭೂಷಣಾ।
ಸ್ತೋಮೋದ್ವರ್ತನ ಕುಂಚಿಕೋಮಲನಖಂ ಸುಕ್ಷೇಕರ ಪ್ರಸ್ತಾರಂ
ವಾಮಾಕ್ಷೀಕರಣೌರೂದ ಪ್ರಘಟಿಕಾ ಉತ್ತಪ್ರಗುಲ್ಫಾಂನ್ವಿತಂ
ವ್ಯೋಮಸ್ಥಾನ ಧ್ವನಿಯುತಂ ಹರಿಪಾದಾಂಬೋಜಂ ಸದಾಭಾವಯೇತ್॥

ವಚನ॥ ಈ ಪ್ರಕಾರದಲ್ಲಿ ಪ್ರಬಂಧಕಲ್ಪಕನು ನಿಶ್ರೇಯಸಾದಿ ಸಕಲ ಮನೋಭೀಷ್ಟಂಗಳನ್ನು ಕೊಡುವಂಥಾ ಶ್ರೀಕೃಷ್ಣನ ಚರಣಾರವಿಂದಗಳನು ಧ್ಯಾನವ ಮಾಡಿದವನಾಗಿ ಆಮೇಲೆ ಪ್ರತ್ಯೂಹ ನಿವಾರಣಾರ್ಥವಾಗಿ ವಿನಾಯಕಾದಿ ಸಕಲ ದೇವತೆಗಳ ಪ್ರಾರ್ಥನೆಯಂ ಮಾಡುತ್ತಿದ್ದಾನೆ.

**ಅಂತ್ಯ :** ನಂದಗೋಪಕುಮಾರ ಇಂದಿರೊರ್ವಿ ಮನೋಹರಾ।
ನಂದಿವಾಹನಾಂಗ ವಿಕಾರ ಗೋಪಾಲಕೃಷ್ಣಾ। ಮಂದರಾದ್ರಿಧರಾಮಾಂ
ಪಾಹಿ ॥೩॥

ವಚನ॥ ಇತ್ತಲೀ ದ್ರೌಪದಿಯು ಅರ್ಜುನನ ಸಮೀಪಕ್ಕೆ ಬಂದು ಯೇನೆಂದಳೂ ಯೆಂದರೆ

ಜಂಪೆ॥ ಬಂದಿಹುದು ಮೇರೆದಪ್ಪಿದ ಶರಧಿಯಂದದಲಿ
ನಂದನಂದ ........... ...........

**ವಿಷಯ :** ಕೃಷ್ಣಾರ್ಜುನರ ಸಂಗ್ರಾಮದ ಪ್ರಸಂಗ.

**ವಿಶೇಷ :** ಮೂಕಾಂಬಿಕಾದೇವಿ, ಕುಕ್ಕೆಯ ಸುಬ್ಬರಾಯ ಎಂಬ ಇಷ್ಟದೇವತೆಗಳನ್ನು ಸ್ತುತಿಸಿದ್ದಾನೆ. ಶಂಕರಾಚಾರ್ಯ, ವಿದ್ಯಾರಣ್ಯ, ಚಿದಾನಂದಭಾರತಿ ಮೊದಲಾದ ಮತಸ್ಥಾಪನಾಚಾರ್ಯರನ್ನು, ವಾಲ್ಮೀಕಿ, ವ್ಯಾಸ, ಕಾಳಿದಾಸ ಭವಭೂತಿ, ದಂಡಿ, ಬಾಣ, ಮಯೂರ, ಬಿಲ್ಹಣ, ಕನಕ, ಪುರಂದರ ಮೊದಲಾದವರನ್ನೂ ಸ್ತುತಿಸಿದ್ದಾನೆ. ಇದನ್ನು ಮದರಾಸು ಪ್ರಾಚ್ಯ ಕೋಶಾಗಾರದಲ್ಲಿ ಪ್ರತಿಮಾಡಲಾಗಿದೆ. ಅಸಮಗ್ರ ಪ್ರತಿ. ಇದರ ಜೊತೆಯಲ್ಲಿ ವಿಕ್ರಮವಿಲಾಸ ಎಂಬ ಮತ್ತೊಂದು ಕೃತಿಯಿದೆ.

— ಬಿ.ಎಸ್.ಎಸ್.

# 637

ಕೆ. ಎ. ೩೪೭ ಗಯ ಚರಿತ್ರೆ ಟೀಕು ಗದ್ಯ
೧೨.೪" × ೭.೮" ಮುಮ್ಮಡಿ ಕೃಷ್ಣರಾಜ ೧೮೫೦
೧-೪೮೪ ಪತ್ರ ೧೬ ಪಂಕ್ತಿ ೨೩ ಅಕ್ಷರ

**ಆದಿ :** ಶ್ರೀ ಚಾಮುಂಡಿಕಾಂಬೆಯೈ ನಮಃ|| ಶುಭಮಸ್ತು|| ಗಯುಚರಿತ್ರೆ ಟೀಕು ಬರೆಯುವದಕ್ಕೆ ನಿರ್ವಿಘ್ನಮಸ್ತು|| ಶ್ರೀ ಭ್ರಮರಾಂಬಾಯೈ ನಮಃ

ಕಂದ|| ಶ್ರೀಗರಳಪುರದ ಮಧ್ಯದಿ
ರಾಗದಿ ಗಿರಿಸುತೆಯು ಸಹಿತ ರಂಜಿಪ ಕರುಣಾ
ಸಾಗರ ಶಂಭು ಪದಾಬ್ಜಪ
ರಾಗಾರುಣ ಶೀರ್ಷನಾಗಿ ರಾಜಿಸೆ ನಿತ್ಯಂ ||೧||
ಶ್ರೀಮತ್ಕೃಷ್ಣ ನರೇಂದ್ರಂ
ಸೋಮಾನ್ವಯ ಶರಧಿಗಮಲಸುಂದರಚಂದ್ರಂ
ತಾಮರಸನಯನನರಸಂ
ಗ್ರಾಮದ ಕಥೆಯನ್ನು ಪೇಳ್ವೆ ಕಂನಡ ಕೃತಿಯಿಂ ||೨||

X X X

(೨ನೆಯ ಪತ್ರ) ಅನಂತರದಲ್ಲಿ ಶೌನಕಾದಿ ಋಷಿಗಳು ನೈಮಿಶಾರಣ್ಯದಲ್ಲಿ ವೇದಾಂತ ವಿದ್ಯಾಪಾರಂಗತರಾಗಿ ಶ್ರೀ ಮಹಾವಿಷ್ಣುವಿನ ಪಾದಕಮಲ ಪರಾಗಕ್ಕೆ ತುಂಬಿಗಳೋಪಾದಿಯಲ್ಲಿ

**ಅಂತ್ಯ :** ಯಾವಾಗಲೂ ಸಮಸ್ತರೂ ಸಕಲವಾದ ಐಶ್ವರ್ಯದಿಂದ ಸಂಪೂರ್ಣರಾಗಿರು ವರೆಂದು ಸರಸಾಲಾಪನಂನುಗ್ಗೈಯುತ್ತ ರಾಜ್ಯಸೌರಕ್ಷಣೆಯಲ್ಲಿ ಜಾಗರೂಕ ನಾಗಿ ಸಂತೋಷದಲ್ಲಿ ಯಿದ್ದನೆಂಬಲ್ಲಿಗೆ||

ಗದ್ಯ|| ಚಂಡಕರಮಂಡಲೊ ಚಂಡತೇಜಃ ಪ್ರಕಾಂಡ ಕಾಂಡ ಷಂಡ ಖಂಡಿತಾ ಖಂಡ ಶೌರ್ಯಪತಿ ಮಂಡಿತ ಭಂಡನೋದ್ದಂಡಾರಿ ಮಂಡಲ ಕಂಡೂಲ ದೋರ್ದಂಡ ಪಾಂಡಿತ್ಯ ಪಾಂಡುರುಚಿ ಖಡಡಿಂಡೀರ ಸಿಂಹಾಸನಾರೂಢನಾಗಿ ರಾಜ್ಯವಂನು ಪರಿಪಾಲಿಸುತ್ತ ಸಂತೋಷದಿಂ ದೊಡಗೂಡಿ ಯಿದ್ದನೆಂಬ ಹಂನೆರಡನೆಯ ಕಲ್ಲೋಲದಲ್ಲಿ ನಾಲ್ಕನೆಯ ತರಂಗವೂ ಸಂಪೂರ್ಣವಾದುದು|| ಮಂಗಳ ಮಹಾಶ್ರೀ||

**ವಿಷಯ :** ಕೃಷ್ಣಾರ್ಜುನರ ಕಾಳಗ

**ವಿಶೇಷ :** ಬರಹವು ಸುಂದರ. ಈ ಭಾಗವು ಸಮಗ್ರವಾಗಿದೆ. ಕೃಷ್ಣರಾಜ ವಾಣೀ ವಿಲಾಸವೆಂಬ ಮಹಾಭಾರತೋಕ್ತವಾದ ಗಯಚರಿತ್ರೆಯ ಟೀಕಿನ ಗ್ರಂಥ. ಆದಿ ಅಂತ್ಯಗಳಲ್ಲಿ ಕೆಲವು ಶುದ್ಧ ಪತ್ರಗಳಿವೆ.

—ಕೆಆರ್‌ಎಸ್.

638

ಕೆ. ೮೯೩ | ಗರಳಪುರಿ ಮಹಿಮೆ | ಗದ್ಯ
೧೧.೧೦" + ೧.೨" | ಕಳಲೆ ನಂಜರಾಜ | ೧೬೪೦
೧-೬೭ ಪತ್ರ | ೫ ಪಂಕ್ತಿ | ೫೨ ಅಕ್ಷರ

**ಆದಿ :** ಶುಭಮಸ್ತು।। ಗರಳಪುರ ಮಹಾತ್ಮೆಯ ಬರೆಯುವದಕ್ಕೆ ನಿರ್ವಿಘ್ನಮಸ್ತು।।
ಶ್ರೀ ಗುರುಭ್ಯೋ ನಮಃ।। ಶ್ರೀ।।
ಶುಕ್ಲಾಂಬರಧರಂ ವಿಷ್ಣುಂ ಶಸಿವರ್ನಂ ಚತುರ್ಭುಜಂ
ಪ್ರಸಂನವದನಂ ಧ್ಯಾಯೇ ಸರ್ವವಿಘ್ನೋಪ ಶಾಂತಯೇ ।।೧।।

X X X

ಶ್ರೀ ಗರಳಪುರೀಶಾಯ ನಮಃ।। ನೈಮಿಶಾರಂಣ್ಯವಾಸಿಗಳಾದ ಶೌನಕಾದಿ ಮುನಿಗಳು ದ್ವಾದಶವರ್ಷ ಸತ್ರಯಾಗವಂ ಮಾಡಲುಪಕ್ರಮಿಶಿದರು ಅದಂ ಕೇಳಿ ಬಳಿಕ ಪೌರಾಣೀಕೋತ್ತಮನಾದ ಸೂತಮುನೀಶ್ವರನು ಅಲ್ಲಿಗೆ ಬರಲಾಗಿ। ಅಲ್ಲಿ ಯಿರುವ ಮುನೀಶ್ವರರು ಜಡೆಗಳನು ನಾರುವಸ್ತ್ರಗಳನ್ನು ಧರಿಸಿಯಿರುವ ರುದ್ರಾಕ್ಷಮಾಲಾಭರಣನಾದ ತ್ರಿಪುಂಡ್ರಾಂಕಿತ ಮಸ್ತಕನಾದ ಕಮಂಡಲಮಂ ಧರಿಸಿರ್ದ ಸದಾ ಬ್ರಂಹ್ಮಧ್ಯಾನಪರನಾದ ಸೂತ ಮುನಿಯಂ ಕಂಡು।

**ಅಂತ್ಯ :** ಅದು ಕಾರಣ ರುಷಿಗಳಿರಾ ನೀವು ಶ್ರೀ ಭೂಕೈಲಾಸ ಪುರದಲ್ಲಿ ಸುಖದಿಂದಾ ವಾಸವಂ ಮಾಡುವದೂ। ಸೂತಪೌರಾಣೀಕನು ಶೌನಕಾದಿಗಳಂ ಕುರಿತು ಗರಳಪುರ ಮಹಿಮೆಯುಂ ಪೇಳಿದನೂ। ಯಿಂತು ಸ್ಕಂದಪುರಾಣೋಕ್ತಮಾದ ಗರಳಪುರ ಮಹಿಮಾದರ್ಶನವೆಂಬೀ ಕರ್ನಾಟಕ ಭಾಷಾರಚಿತ ಟೀಕಿನಲ್ಲಿ ಹಂನ್ನೆರಡನೇ ಅಧ್ಯಾಯಾರ್ಥಃ।। ಶ್ರೀ।।

**ವಿಷಯ :** ಕಪಿಲಾ ನದಿಯ ಉತ್ಪತ್ತಿ, ಸಗರನು ಅಶ್ವಮೇಧಯಾಗ ಮಾಡಿದುದು, ಗರಳಪುರಿ ಮಹಿಮೆ.

**ವಿಶೇಷ :** ಸಮಗ್ರವಾಗಿದ್ದು ಪ್ರತಿಯು ಚೆನ್ನಾಗಿದೆ. ಅಲ್ಲಲ್ಲಿ ಒಂದೊಂದೆಡೆಯಲ್ಲಿ ಹುಳು ಹೊಡೆದಿದೆ.

—ಕೆಆರ್‌ಎಸ್

639

ಕೆ. ಎ. ೩೪೪/೧ | ಗರುಡಾಚಲ | ಹಾಡು
೧೧" + ೭.೮" | ? | ?
೧-೭ ಪತ್ರ | ೧೯ ಪಂಕ್ತಿ | ೧೬ ಅಕ್ಷರ

**ಆದಿ :** ಗರುಡಾಚಲ ಬರೆಯುವುದಕ್ಕೆ ನಿರ್ವಿಘ್ನಮಸ್ತು।

ಗಜಮುಖ ವಿಘ್ನೇಶ್ವರ ಶಾರದೆ ರಮಣೀ ಚರಣಕೆ ಅಭಿನಂದಿಸಿ ಕರಿರಾಜ ವರದಾ ರುಕುಮಿಣಿ॥ ರುಕುಮಿಣಿ ವಿವಾಹದ ಉತ್ಸಹಕೆ ಕರೆವ ಸಜ್ಜನರೂ ಯಿದಾ ಕೇಳಿ ॥೧॥
ತತ್ವದ ಸೊಬಾನೆಯ ಪೇಳುವೆ
ಭಕ್ತಿಯಿಂ ಜನರೆಲ್ಲರು ಕೇಳಿ
ಮುಕ್ತಿಸಾಧನವೂ ನರಹರಿ
ನರಹರಿ ಬಾಲಲೀಲೆಯ ಪೇಳುವೆ
ಯಿಪ್ಪದು ವೈಕುಂಠಾಪುರದಲ್ಲೀ ॥೨॥

**ಅಂತ್ಯ :** ಚಿಂತೆಯಾತಕೆ ಚಿಕ್ಕನಾಯಕ
ಶ್ರೀಹರಿಗೆ ವಧುವಾದಳು ಮಗಳೂ
ಚಿಂತೆಯ ಬಿಟ್ಟು ಸುಖಾದಲ್ಲಿ
ಸುಖದಲ್ಲಿ ರಾಜ್ಯವ ನೀನಾಳೆಂದು
ಪಂಕಜಗಂಧಿ ನುಡಿದಾಳೂ ॥೭೭॥
ಮಾತೆ ಭುವನಕೆ ವಿಖ್ಯಾತೆ। ತಾಯೆ ಶ್ರೀರಂಗನ ಪ್ರೀತೆ।
ತಾಯೆ ಯಿಾ ಶಿಶೂವಾ ಯನುತಾಲೆ
ಯನುತ ಚಿಕ್ಕನಾಯಕ ಲಕ್ಷುಮಿಯ
ಪಾದದ ಮೇಲಿಟ್ಟು ಬೆಸಾಗೊಂಡಾ ॥೭೮॥

**ವಿಷಯ :** ಚಿಕ್ಕನಾಯಕನ ಮಗಳು ಶ್ರೀಹರಿಯನ್ನು ಕೂಡಿದ ಕಥೆ.

**ವಿಶೇಷ :** ಅಸಮಗ್ರ. ಇದರೊಡನೆ ಗಿರಿಜಾಕಲ್ಯಾಣ, ಅನುಭವಾಮೃತ ಮೊದಲಾದ ಇತರ ಏಳು ಗ್ರಂಥಗಳಿವೆ.

—ಬಿಎಸ್‌ಎಸ್

## 640

ಕೆ.ಎ. ೫೧೩/೩ **ಗವುಳಿಫಲ ಇತ್ಯಾದಿ** ಗದ್ಯ, ಪದ್ಯ
೧೦.೪″ × ೬.೨″ ? ?
೧೪೬-೧೪೯ ಪುಟ ೨೦ ಪಂಕ್ತಿ ೨೫ ಅಕ್ಷರ

**ಆದಿ :** ಮಾವುಫಲ ನವಣೆ ಬೆಳೆಗುಂ........ಸೊಳೆಳಕ್ಕು। ಯೆಸೆವ ಹುಣುಸೆಗಳೊದವಿಂ ಭಾವಿಸೆನೆಲ್ಲುಂ ಬೆಳೆಗುಂ। ತೀವಿದ ಫಲದಿಂದ ವೊಳುಪಿನೆಜಿಟ್ಟಂ॥
XXX ಗವುಳಿ
ಕೆಡಡಸಿದೊಡಂ। ಮನದೊಳು ನಾಡಿಗೆ। ವೃಚ್ಚಿಗಮುಳಲು ಪುಟ್ಟುವ ಪದದೊಳು ಮೂಡಣದೆಸೆ ಆಗ್ನೆ(ಯಃದೊ)ಯೊಳಂ ನೋಡಿಕೆ ವಾಯಾವ್ಯನಿ(ೖ)ಶ(ಶಾ)ನೆಡೆಯೊಳ್ ಶುಭದಂ॥

**ಅಂತ್ಯ :** ಹಾಲುವಕ್ಕಿ ಹಸುಬ ನುಡಿದ ಸ್ವರಂ
ಪಂದು ಸ್ವರ ನುಡಿದರೆ ಹೆಣ್ಣುಸಾವಳು ೨ ಹೆಣ್ಣುಗಂಡು ಇಬ್ಬರು ಸಾವರು ೩ ನೆನೆದ ಕಾರ್ಯಸಿದ್ಧಿ ೪ ವೊಂದು ಜಾವಕ್ಕೆ ಸಾವು ೫ ಅವು (ಔ) ತಳ (ಣ) ಭೋಜನ ೬ ಕ್ಕೆ ಮರಣ ೭ ಕಾರ್ಯಸಿದ್ಧಿ ಯೆಂಟಿಱಂದ ಮರಣಂ ೯ ಲಾಭ ೧೦ ನೆನೆದ ಕಾರ್ಯಸಿದ್ಧಿ ೧೧ಕ್ಕೆ ಲಕ್ಷ್ಮಿ ಕೈಸಾಱ್ಗಂ॥

**ವಿಷಯ :** ಶಕುನ ಇತ್ಯಾದಿ ವಿಚಾರಗಳು.

**ವಿಶೇಷ :** ಸಮಗ್ರ. ಇಲ್ಲಿ ಗವುಳಿ, ಘನವರ್ಗನ ಟೀಕು, ಘನಮೂಲ ಟೀಕು, ವಿಷಮ ಗುಣಿತ, ಹಲ್ಲಿ, ಹಾಲುವಕ್ಕಿ ಹಸುಬ ನುಡಿದ ಸ್ವರ ಇತ್ಯಾದಿ ವಿಚಾರಗಳಿವೆ.

—ಜಿಜಿಎಂ

## 641

| ಕೆ.ಬಿ. ೭೪೫ | **ಗಾದೆಗಳು** | ಗದ್ಯ |
|---|---|---|
| ೬.೫″ × ೪″ | ? | ? |
| ೯-೨೬೮ ಪುಟ | ೧೫ ಪಂಕ್ತಿ | ೨೨ ಅಕ್ಷರ |

**ಆದಿ :** ಗುಯೆಂದ ಹಾಗೆ
೪೦. ಅಡವಿಗೆ ಹೋದರು ಚಿಗಟೆನ ಕಾಟ
೪೧. ಅಡ್ಡಗೋಡೆ ಮೇಲಣ ದೀಪದ ಹಾಗೆ
೪೨. ಅಡಾವುಡಿಯುವರ ಸಂಗಡ ಬಡಿದಾಡಬಾರದು
೪೪. ಅಡಿಕೆ ವುಡಿಯಲ್ಲಿ ಹಾಕಬಹುದು, ಮರವಾದ ಮೇಲೆ ಕೂಡದು

**ಅಂತ್ಯ :** ೩೨೪೨. ಹುಟ್ಟುಕುರುಡ ಹಾಳುಭಾವೀಲಿ ಬಿದ್ದಹಾಗೆ
೩೨೪೪. ಹುಟ್ಟು ಕೋಲುಕಾರನದು ಕಟ್ಟು ಸಾವಕಾರನದು
೩೨೪೫. ಹುಟ್ಟು ಬಂದ ಬುದ್ಧಿ ಸುಟ್ಟಲ್ಲದೆ ಹೋಗದು
೩೨೪೬. ಹುಡುಗ ಮಿಂಡನಲ್ಲ ಗಿಡಗ ಪಕ್ಷಿಗಲ್ಲ
೩೨.೭. ಹುಣಸೆ ಮುಪ್ಪಾದರೆ ಹುಳಿ ಮುಪ್ಪೆ

**ವಿಷಯ :** ಗಾದೆಗಳು.

**ವಿಶೇಷ :** ಆರಂಭದಿಂದ ೮ ಪುಟಗಳು ಇಲ್ಲ. ಅಂತ್ಯದಲ್ಲಿಯೂ ಕೆಲವು ಪುಟಗಳು ಲುಪ್ತವಾಗಿವೆ. ಬರಹ ಚೆನ್ನಾಗಿದೆ. ಕಲ್ಲಚ್ಚಿನ ಪ್ರತಿ. ಈ ಗ್ರಂಥವು ಕೆ. ಸಿ. ನಂಜುಂಡಾರಾಧ್ಯರ ಕೊಡುಗೆಯಾಗಿದೆ.

—ಕೆಆರ್‌ಎಸ್

642

ಕೆ.ಎ. ೪೩೮/೫ — **ಗಾರುಡಪುರಾಣ** — ಗದ್ಯ

೯" × ೧೮.೩" — ? — ?

೨೭-೫೮ ಪತ್ರ — ೨೦ ಪಂಕ್ತಿ — ೨೦ ಅಕ್ಷರ

**ಆದಿ :** ಗರುಡನಿಂದ ಯಿಾ ಧರ್ಮಶಾಸ್ತ್ರವನ್ನು ಮರೀಚಿಋಷೀಶ್ವರನು ಚೆನ್ನಾಗಿ ತಿಳಿದು ಕೈಗಳ ಮುಗಿದುಕೊಂಡು ಒಂದು ಮಾತಂ ನುಡಿದನು। ಮರೀಚಿ—ಭಾದ್ರಪದ ಮಾಸದ ಶುಕ್ಲಪಕ್ಷ ದ್ವಾದಶಿಯಲ್ಲಿ ಶ್ರಾವಣ ನಕ್ಷತ್ರ ಕೂಡಿದರೆ ಶ್ರಾವಣ ದ್ವಾದಶಿಯೆನಿಸಿಕೊಂಬುದು ಆ ದಿನ ಹೊಳೆಯಲ್ಲಿ ಯಾದರು ಕೆಱೆಕೊಳಗಳಲ್ಲಿಯಾದರು ಹೊಳೆ ನೀರ ತಂದು ಮನೆಯಲ್ಲಿ ಯಾದರು ಸ್ನಾನವಮಾಡಿ ಸ್ವಾಮಿಯ ಪೂಜೆಯ ಮಾಡಬೇಕು। ವಾಮನ ಮೂರ್ತಿಯನು ಪೂಜೆಯ ಮಾಡಿ ಮೊಸರುಅನ್ನವ ನೈವೇದ್ಯವ ಮಾಡಿ ಆ ಅನ್ನದಿಂದಲೇ ಹೋಮವ ಮಾಡಿ ದಧ್ಯನ್ನದಿಂದಲೇ ವೈಷ್ಣವರಿಗೆ ಭೋಜನವ ಮಾಡಿಸುವುದು। ಮಾಘಮಾಸದ ಶುಕ್ಲಪಕ್ಷದ ದ್ವಾದಶಿ ಯಲ್ಲೂ ವರಾಹಸ್ವಾಮಿಯವರ ಪೂಜೆಮಾಡಬೇಕು। ಆಮೇಲೆ ಅವಭೃತ ಸ್ನಾನವ ಮಾಡಿ ವೈಷ್ಣವರ ಭೋಜನವ ಮಾಡಿಸುವುದು।

**ಅಂತ್ಯ :** ಸಂಸಾರದಲ್ಲಿ ನಿತ್ಯವಾಗಿ ತಿರುಗುವ ಜನರುಗಳಿಗೆ ಮಡದಿ ಮಕ್ಕಳು ಮನೆ ಧನ ಧಾನ್ಯ ಬಂಧುಗಳು ಹೆಸರ ಹೇಳುವದು ಮಾತ್ರವೇ ಸರಿ। ಮಡದಿ ಮಕ್ಕಳುಗಳಿಂದಲೂ ಊಳಿಗದವರುಗಳಿಂದಲೂ ಸ್ನೇಹಿತರಿಂದಲೂ ಬಂಧು ಗಳಿಂದಲೂ ಮಾನ್ಯ ಸ್ವಸ್ತ್ರಾದಿಗಳಿಂದಲೂ ಮೋಕ್ಷಗಳು ಬರಲಱಿಯದು। ಈ ಪ್ರಕಾರದ ಉಪದೇಶವೇ ಮುಕ್ತಿಯನು ಸಂಪಾದಿಸಿ ಕೊಡುವದು ಅದೇ ಪರಮ ಬಂಧುವು ಜನರುಗಳು ದೇವನ ಸಂಬಂಧಮುಳ್ಳವರಾಗಿಯೂ ರಾಕ್ಷಸರ ಸಂಬಂಧಮುಳ್ಳವರಾಗಿಯೂ ಯೆರಡು ತೆರನಾಗಿ ಯಿರುವರು। ವಿಷ್ಣುಭಕ್ತಿಯುಳ್ಳವರು ದೇವತಾಸಂಬಂಧಮುಳ್ಳವರು ವಿಷ್ಣುಭಕ್ತಿಯಿಲ್ಲ ದವರು ರಾಕ್ಷಸ ಸಂಬಂಧನಾಗಿ ಇರುವರು। ದಿನದಿನದಲೂ ಶ್ರೀಕೃಷ್ಣ ಸ್ವಾಮಿಯನು ಸಕಲಫಲಸ್ವರೂಪನಾಗಿ ಧ್ಯಾನವ ಮಾಡುವ ಜನರು।

**ವಿಷಯ :** ವಿಷ್ಣು ಪಾರಮ್ಯ.

**ವಿಶೇಷ :** ಇದೇ ಪುಸ್ತಕದಲ್ಲಿ ದ್ವಾತ್ರಿಂಶದಪಚಾರ, ಪರಾಶರ ಧರ್ಮಶಾಸ್ತ್ರ, ಶೇಷ ಧರ್ಮ, ನಾರದೀಯ ಪುರಾಣ ಎಂಬ ಕೃತಿಗಳಿವೆ.

—ವೈಸಿಬಿ

## 643

| | | |
|---|---|---|
| ಕೆ.ಎ. ೫೫೩/೫ | **ಗಾರುಡಪುರಾಣ** | ಗದ್ಯ |
| ೧೦.೩" × ೯.೪" | ? | ? |
| ೨೦-೩೮ ಪುಟ | ೨೦ ಪಂಕ್ತಿ | ೨೬ ಅಕ್ಷರ |

**ಆದಿ:** ಗರುಡನಿಂದ ಈ ಧರ್ಮಶಾಸ್ತ್ರವನು ಮರೀಚಿ ಋಷೀಶ್ವರನು ಚೆನ್ನಾಗಿ ತಿಳಿದು ಕೈಗಳ ಮುಗಿದುಕೊಂಡು ಒಂದು ಮಾತು ನುಡಿದನು. ಮರೀಚಿ– ಭಾದ್ರಪದ ಮಾಸದ ಶುಕ್ಲಪಕ್ಷ ದ್ವಾದಶಿಯಲ್ಲಿ ಶ್ರವಣ ನಕ್ಷತ್ರ ಕೂಡಿದರೆ, ಶ್ರವಣದ್ವಾದಶಿ ಎನಿಸಿಕೊಂಬುದು ಆ ದಿನ ಹೊಳೆಯಲ್ಲಿ ಆದರು, ಕೆರೆ ಕೊಳಗಳಲ್ಲಿಯಾದರು, ಹೊಳೆ ನೀರ ತಂದು ಮನೆಯಲ್ಲಿಯಾದರು ಸ್ನಾನವ ಮಾಡಿ ಪೂಜೆಯ ಮಾಡಬೇಕು.

**ಅಂತ್ಯ:** ಮಡದಿ ಮಕ್ಕಳುಗಳಿಂದಲು ಊಳಿಗದವರಿಂದಲು ಸ್ನೇಹಿತರಿಂದಲೂ ಬಂಧುಗಳಿಂದಲೂ ಮಾನ್ಯಸ್ವಾಸ್ಥ್ಯಗಳಿಂದಲೂ ಮೋಕ್ಷಗಳು ಬರಲರಿಯದು. ಈ ಪ್ರಕಾರ ಉಪದೇಶವೆ ಮುಕ್ತಿಯನು ಸಂಪಾದಿಸಿಕೊಡುವುದು ಅದೆ ಪರಮ ಬಂಧುವು ಜನರುಗಳಿಗೆ ದೇವತಾ ಸಂಬಂಧವುಳ್ಳವರಾಗಿಯುಂ ರಾಕ್ಷಸ ಸಂಬಂಧವುಳ್ಳವರಾಗಿಯುಂ ಎರಡು ತೆರನಾಗಿ ಇರುವರು ವಿಷ್ಣುಭಕ್ತಿಯುಳ್ಳವರು ದೇವತಾ ಸಂಬಂಧವುಳ್ಳವರು ವಿಷ್ಣುಭಕ್ತಿ ಇಲ್ಲದವರು ರಾಕ್ಷಸ ಸಂಬಂಧವಾಗಿ ಇರುವರು. ದಿನದಿನದಲ್ಲು ಶ್ರೀಕೃಷ್ಣಸ್ವಾಮಿಯನ್ನು ಸಕಲ ಫಲಸ್ವರೂಪನಾಗಿ ಧ್ಯಾನ ಮಾಡುವ ಜನರು

**ವಿಷಯ:** ವಿಷ್ಣುವಿನಲ್ಲಿ ಭಕ್ತಿ; ಅದರ ಫಲಗಳು.

**ವಿಶೇಷ:** ಬರಹ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ದ್ವಾತ್ರಿಂಶದಪಚಾರ, ಪರಾಶರ ಧರ್ಮಶಾಸ್ತ್ರ, ಶೇಷಧರ್ಮ, ನಾರದೀಯ ಪುರಾಣಗಳೆಂಬ ಇತರ ಕೃತಿಗಳಿವೆ.

—ಕೆಆರ್‌ಎಸ್

## 644

| | | |
|---|---|---|
| ಕೆ. ೬೬೧/೧ | **ಗಿರಿಜಾಕಲ್ಯಾಣ** | ಚಂಪು |
| ೧೩.೯" × ೨" | ಹರಿಹರ | ಸು. ೧೨೦೦ |
| ೩೨-೯೫ ಪತ್ರ | ೧೨ ಪಂಕ್ತಿ | ೭೮ ಅಕ್ಷರ |

**ಆದಿ:** ಅಂತೆಚ್ಚರಿಸಿ ಕೊಡುತಿರ್ಪನ್ನೆಗವಲ್ಲಿ

ವೃ|| ಯಿದು ಭೂಮಿಸ್ಥಾನದಿಂ ಮುಕ್ತಿಗೆ ನಡೆಯಿವ ನೀಲಾಶ್ಮ ಸೋಪಾನವಾಹಾ
ಯಿದು ಸಂಸಾರಾತಪಶ್ರಾಂತದೊಳತಿಸುಖವೀವಂಬರದ ಶ್ರೇಣಿ ಮೇ

ಣಿದು ದುಃಕವರ್ೞಾಬ್ಜ....ಳನುರೆ ಕೊರಗಿಪ್ಪೊಂದು ನೀಹಾರವೆಂಬಂ
ತಿದೆ ಹೋಮಸ್ತೋಮ ಧೂಮಂ ನೆಗದಂದು ಮುನಿಗಳ್ಮಳು ಮಂತ್ರಾಗ್ನಿ
ಯಿಂದಂ ||೬೪||

**ಅಂತ್ಯ :** ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭುಶಂ
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯಿಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ||೯೨||

ಗದ್ಯ|| ಯಿಂದು ಸಮಸ್ತ ಸುರನಿಕರ ಮಣಿಮಕುಟಖಚಿತ ದಿನಕರಕರಾಧಿಕ್ಯ
ಮಾಣಿಕ್ಯ ಪ್ರಭಾ ಪುಂಜರಂಜಿತ ಸಂಪಚ್ಚರಣನೆನಿಪ ಪಂಪಾವಿರೂಪಾಕ್ಷ
ಶ್ರೀಪಾದಕಮಲ ಮಕರಂದ ಮಧುಕರಾ... ನ ಸತ್ಕವೀಶ ಹಂಪೆಯ ಹರಿ
ಹರದೇವ ವಿರಚಿತಮಪ್ಪ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಪಾರ್ವತೀಪರಮೇಶ್ವರ ವಿವಾಹವರ್ನನಂ ದಶಮಾಶ್ವಾಸಂ ಸಂಪೂರ್ಣಂ
ಶ್ರೀ ಪಂಪಾವಿರೂಪಾಕ್ಷಾರ್ಪಣಮಸ್ತು|| ಅಂತು ಆಶ್ವಾಸ ೧೦ ಕ್ಕಂ
ಕಂದ ವೃತ್ತ ವಚನಂಗಳು ಸಹ ೧೫೯೦ ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಶಿವ ಪಾರ್ವತಿಯರ ವಿವಾಹ.

**ವಿಶೇಷ :** ಅಸಮಗ್ರ. ಇದೇ ಕಟ್ಟಿನಲ್ಲಿ ಒಂದು ಸಂಸ್ಕೃತ ಗ್ರಂಥವಿದೆ.

—ವೈಸಿಬಿ

## 645

ಕೆ. ೯೯೨/೧ **ಗಿರಿಜಾಕಲ್ಯಾಣ** ಚಂಪು

೧೨.೮″ × ೧.೬″ ಹರಿಹರ ಸು. ೧೬೦೦

೧-೪೫ ಪತ್ರ ೧೨ ಪಂಕ್ತಿ ೮೪ ಅಕ್ಷರ

**ಆದಿ:** ಶ್ರೀ ಬಸವಲಿಂಗಾಯ ನಮಃ ಶ್ರೀ ಗಿರಿಜಾಕಲ್ಯಾಣ ಬರವುದಕ್ಕೆ ಸುಭಮಸ್ತು
ಪ್ರಥಮದಲ್ಲಿ ಪೀಠಿಕಾಗದ್ಯ ಸ್ವಸ್ತಿ ಸಮಸ್ತ ಸಮುದ್ರಮುದ್ರಿತ ಧರಿತ್ರೀ
ಕಾಂತೆಯ ನಾಭಿಕಮಳ ಮಧ್ಯಸ್ಥಿತ....... ರಿಯಂ ಪರಿಯಂತ ಪರ್ವ್ವದ
ಪರ್ವ್ವತಾಧೀಶಂ ಗಿರಿರಾಜನೆಂಬ ನಾಮದಿಂ ವೋಷಧಿಪ್ರಸ್ಥವೆಂಬ ಪುರ
ದೊಳಗಿರ್ದು ಪಿತೃಗಳ ಮನೆದೊಳು ಪುಟ್ಟಿದ ಮೇನಾದೇವಿಯಂ ವಿವಾಹ
ಮಾಗಿ ಮೈನಾಕನೆಂಬ ಪುತ್ರನಂ ಪಡೆದು ಪಲವು ದಿನಂ ಸುಖದೊಳಿರುತಂ

**ಅಂತ್ಯ :** ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರು ಸೌಖ್ಯೋಕರಂ ಶಂಭು ಶಂ
ಕರನಾನಂದ ಸಮಂತ್ಯನಪೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೈಗೊಲವಿಂದ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ||೧೯೬||

ಗದ್ಯ॥ ಯಿದು ಸಮಸ್ತ ಸುರಸಿಕರ ಮಕುಟ ಖಚಿತ ದಿನಕರಕರಾಧಿಕ್ಯ ಪ್ರಭಾ ಪುಂಜರಂಜಿತ ಪಂಪಾ ವಿರೂಪಾಕ್ಷ ಶ್ರೀಪಾದಕಮಲ ಮಕರಂದ ಮಧು ಕರಾಯಮಾನಂ ಸತ್ಕವೀಶ್ವರ ಹಂಪೆಯ ಹರಿಹರದೇವ ವಿರಚಿತಮಪ್ಪ ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳು ಪಾರ್ವತೀ ಪರಮೇಶ್ವರ ವಿವಾಹ ವರ್ನನಂ ದಶಮಾಶ್ವಾಸಕ್ಕೆ ಕಂದಪದ್ಯ ಸಹ ೧೧೭೯ ಕ್ಕಂ ಮಂಗಳ ಮಹಾಶ್ರೀ॥ ಗಿರಿಜಾ ಕಲ್ಯಾಣಂ ಸಮಾಪ್ತಂ ಮಂಗಳ ಮಹಾಶ್ರೀ.

**ವಿಷಯ:** ಪಾರ್ವತಿ ಪರಮೇಶ್ವರರ ವಿವಾಹ.

**ವಿಶೇಷ:** ಸಮಗ್ರವಾಗಿದ್ದರೂ ೬ ರಿಂದ ೧೩ ನೆಯ ಪತ್ರಗಳ ವರೆಗೆ ಗರಿಗಳು ತುಂಡಾಗಿವೆ. ಅವುಗಳಲ್ಲಿ ಕೆಲವು ಭಾಗದಷ್ಟು ಲುಪ್ತವಾಗಿವೆ. ಅಕ್ಷರ ಸುಂದರವಾಗಿದ್ದರೂ ಸಣ್ಣ ಬರಹ. ಇದೇ ಕಟ್ಟಿನಲ್ಲಿ ಭಿಕ್ಷಾಟನ ಚರಿತ್ರ, ಷಡುಸ್ಥಲ ತಾಮಸಗುಣದ ಅನುಭಾವದ ವಚನ, ಮಡಿವಾಳ ಮಾಚಯ್ಯಗಳ ತಾರಾವಳಿ, ಪ್ರಭುದೇವರ ತಾರಾವಳಿಗಳೆಂಬ ಇತರ ನಾಲ್ಕು ಗ್ರಂಥಗಳಿವೆ. ಗಿರಿಜಾಕಲ್ಯಾಣ ಗ್ರಂಥದ ಅಂತ್ಯದಲ್ಲಿ ಕೃತಿಯನ್ನು ಪ್ರತಿಮಾಡಿದ ಕಾಲ ವಿಚಾರ ಹೀಗಿದೆ:

ಶಾರ್ದೂಲವೃತ್ತ॥ ಧರೆಯೊಳ್ ವರಶಿವೆ ಗ್ರಾಮದೊಳ್ ನೆಲಸಿ ತಾಂ ಸತ್ಕೀರ್ತಿಯಿಂ ದೊಪ್ಪುವಾ
ಹರಭಕ್ತಂ ಪ್ರತನಾಯಕೋದ್ಭವ ಸುತಂ ಶ್ರೀವೃಷಭಾಚಾರ್ಯ್ಯನಾ
ಕರಭಾತಿಕೃತಿಕರ್ತೃ ಸಾದ್ಯ ಜಯ ಕೇಳ್ ಶೃಂಗಾರ ವಾಕ್ಯೋಕ್ತಿಯಂ
ಪರ ಹಾಸ್ಯಾ ಕುಮುದಾಬ್ಜ ಪೂಷಚಿರ ತಾರಾರಾಜನಂತೊಪ್ಪುಗುಂ ॥೧॥

ಯಿಂತು ಸರ್ವಸುಭೋದಯಮಸ್ತು ಮಂಗಳಂ ಮಹಾಶ್ರೀ. ಯಿಂತು ಸರ್ವಸುಭೋದಯಮಸ್ತು ಶ್ರೀ ಶಾಲಿವಾಹನಶಿಖಿ ೧೬೬೬ನೆಯ ವರ್ತಮಾನಕ್ಕೆ ಸಲ್ಲುವ ರುದ್ರೋದ್ಗಾರಿನಾಮ ಸಂವತ್ಸರದ ಮಾಘ ಬಹುಳ ದಶಮಿ ಶುಕ್ರವಾರ ಸೂರ್ಯೋದಯ ಘಳಿಗೆ ೨೫ಕ್ಕೆ ಶ್ರೀ ಗಿರಿಜಾಕಲ್ಯಾಣ ಕಥಾವರ್ನನೆಯಂ ಸಂಪೂರ್ನಂ ಯಿತ್ತುಯಿಂತು ಶ್ರೀ.

[ಕ.ಹ.ಪ್ರ.ವ.ಸೂ. ಪ್ರಥಮ ಸಂಪುಟ ಪುಟ ೩೯೮–೪೦೫ ಕ್ರಮಾಂಕ 400–406 ನೋಡಿ]

—ಕೆಆರ್‌ಎಸ್

## 646

| ಕೆ. ೧೦೩೯/೧ | **ಗಿರಿಜಾಕಲ್ಯಾಣ** | ಚಂಪು |
|---|---|---|
| ೧೪.೮" × ೨.೨" | ಹರಿಹರ | ಸು. ೧೨೦೦ |
| ೧-೬೦ ಪತ್ರ | ೧೨ ಪಂಕ್ತಿ | ೭೬ ಅಕ್ಷರ |

**ಆದಿ:** ಗಿರಿಜಾಕಲ್ಯಾಣದ ಕಥಾಗರ್ಭವ ಬರೆವುದಕ್ಕೆ ಶುಭಮಸ್ತು. ನಿರ್ವಿಘ್ನ

ಮಸ್ತು ಗದ್ಯಂ ಸ್ವಸ್ತಿ ಸಮಸ್ತ ಸಮುದ್ರಮುದ್ರಿತ ಧರಿತ್ರೀಕಾಂತಾನಾಭೀ ಕಮಲ ಮಧ್ಯಸ್ಥಿತ ಕರ್ಣಿಕೆಯಂತಿರ್ಪ್ಪ ಮೇರುವಿನ ದಕ್ಷಿಣದಿಕ್ಕಿನಲ್ಲಿ ಪೂರ್ವ ಜಲಧಿಯಿಂ ಪಶ್ಚಿಮವಾರ್ಧಿ ಪರ್ಯಂತ ಪರ್ವಿದ ಪರ್ವತಾಧೀಶಂ ಗಿರಿರಾಜ ನೆಂಬ ನಾಮದಿಂದೋಷಧಿಪ್ರಸ್ಥಮೆಂಬ ಪುರದೊಳಿರ್ದ್ದ ಪಿತೃಗಳ ಮನ ದೊಳ್ಪುಟ್ಟಿದ ಮೇನಾದೇವಿಯಂ ವಿವಾಹಮಾಗಿ XXX

ಸ್ರಗ್ಧರೆ॥ ಶ್ರೀಮಚ್ಛೈಲೇಂದ್ರಪುತ್ರೀ ಗುರುತರ ಸುರತಶಿಕ್ಷೀರವಾರಾಶಿಚಂದ್ರಂ
ವ್ಯೋಮಾರ್ಕೇಂದು ಕ್ಷಮಾತ್ಮಾನಲ ಜಲಪವಮಾನಾಷ್ಟಮೂರ್ತ್ತಿಪ್ರಸಿದ್ಧಂ
ಪ್ರೇಮಂ ಚಿತ್ತೀಗೆ ಸದ್ಭಕ್ತಿಯನೆಮಗಮರಾನೀಕ ಮಾಣಿಕ್ಯ ಮೌಳಿ
ಸ್ತೋಮಾಂಘ್ರಿಜ್ಯೋತಿ ಪಂಪಾಪುರದರಸ ವಿರೂಪಾಕ್ಷನಾನಂದದಿಂದಂ ೧

X X X

ವೃ॥ ಗಿರಿಜಾಕಲ್ಯಾಣಮಿಂತೀ ನುತ ಕೃತಿಯು ಪೆಸರ್ಭ್ಭಪುರೆ ಕಾವ್ಯನಾಥಂ
ಗಿರಿಜಾನಾಥಂ ಕಥಾಸಂಗತಿ ವರ ಗಿರಿಜೋದ್ವಾಹಮೀ ಕಾವ್ಯಮಂ ಬಿ
ತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರಿದೇವಂ ಮಹೋತ್ಸಾಹದಿಂದಂ
ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸುಪುತ್ರಂ ೩೩

**ಅಂತ್ಯ :** ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲ ಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೧೧೬

ಗದ್ಯ॥ ಇದು ಸಮಸ್ತ ಸುರನಿಕರ ಮಕುಟ ಖಚಿತ ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪೂಜರಂಜಿತ ಸಂಪಚ್ಚರಣನೆನಿಪ ಪಂಪಾವಿರೂಪಾಕ್ಷ ಶ್ರೀಪಾದ ಕಮಲ ಮಕರಂದ ಮಧುಕರಾಯಮಾನ ಸತ್ಕವೀಶ್ವರ ಹಂಪೆಯ ಹರಿಹರ ದೇವ ವಿರಚಿತಮಪ್ಪ ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್ಪಾರ್ವತೀ ಪರಮೇಶ್ವರ ವಿವಾಹವರ್ಣನಂ ದಶಮಾಶ್ವಾಸಂ ಸಂಪೂರ್ಣಂ. ಅಂತು ಆಶ್ವಾಸ ೧೦ಕ್ಕಂ ಕಂದ ವೃತ್ತ ಸಹ ಪದಗಣನೆ ೧೯೯೪ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಪಾರ್ವತೀ ಪರಮೇಶ್ವರರ ವಿವಾಹ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಅಂತ್ಯದಲ್ಲಿ ಪ್ರತಿಮಾಡಿದವನ ಹಾಗೂ ಅವನ ಕಾಲವಿಚಾರವಿದೆ—'ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕಾಬ್ದ: ೧೭೫೬ನೆ ಜಯಸಂವತ್ಸರದ ಚೈತ್ರ ಬ. ೫ ಸೋಮವಾರದಲ್ಲಿ ಬಾಗಲೂರು ಕೆಂಪುಶಿದ್ಧದೇವರು ಮಠಿಶಿದ್ಧಪ್ಪನವರಿಗೆ ಧನ ಕನಕ ವಸ್ತು ವಾಹನ ಪುತ್ರ ಪೌತ್ರ ಕರಿ ತುರಗಾಂದೋಳಿಕಾ ಪ್ರಮುಖ ನಿಖಿಲೈಶ್ವರಾಭಿ

ವೃದ್ಧಿಯಾಗಲೆಂದುಹರಶಿ ಬರದುಕೊಟ್ಟಂಥಾ ಗಿರಿಜಾಕಲ್ಯಾಣ ಪ್ರಬಂಧವೂ ಶ್ರೀ' ಇದೇ ಕಟ್ಟಿನಲ್ಲಿ 'ದಶವಿಧ ಪಾದೋದಕ'ವೆಂಬ ಇನ್ನೊಂದು ಕೃತಿ ಇದೆ. [ಕ.ಹ.ಪ್ರ.ವ.ಸೂ. ಪ್ರಥಮಸಂಪುಟ ಪುಟ ೩೯೮-೪೦೫ ಕ್ರಮಾಂಕ 400-406].

—ಕೆಆರ್‌ಎಸ್

## 647

| ಕೆ. ೧೫೪೭ | **ಗಿರಿಜಾಕಲ್ಯಾಣ** | ಚಂಪು |
|---|---|---|
| ೧೭" × ೧.೫" | ಹರಿಹರ | ಸ. ೧೨೦೦ |
| ೧-೧೨೬ ಪತ್ರ | ೫ ಪಂಕ್ತಿ | ೫೩ ಅಕ್ಷರ |

**ಆದಿ :** ಶ್ರೀ ರಾಮೇಶ್ವರಾಯ ನಮಃ ಶ್ರೀಮತ್ಕೈದೇಶ್ವರಿ ದೇವರೌಯ್ಯೆ ನಮಃ ಅವಿಘ್ನಮಸ್ತು. ಶ್ರೀ ಗಣಾದಿಪತಯೆನಮಃ ಶ್ರೀ ಗಿರಿಜಾಕಲ್ಯಾಣಂ ಕಥಾ ಗರ್ಭದ ಗದ್ಯ|| ಸ್ವಸ್ತಿಸಮಸ್ತ ಸಮುದ್ರ ಮುದ್ರಿತ ಧರಿತ್ರೀಕಾಂತಾ ನಾಭಿ ಕಮಲ ಮಧ್ಯಸ್ಥಿತ ಕರ್ನಿಕೆಯಂತಿರ್ಪ ಮೇರುವಿನ ಪೂರ್ವಜಲಧಿಯಿಂ ಪಶ್ಚಿಮವಾರ್ಧಿ ಪರ್ಯ್ಯಂತಂ ಪರ್ಬಿದ ಪರ್ವತಾದೀಶಂಗಾ ಗಿರಿರಾಜನೆಂಬ ನಾಮಕರಣದಿಂದೋಪದಿಪ್ರಸ್ಥವೆಂಬ ಪುರದೊಳಿರ್ದು

**ಅಂತ್ಯ :** ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ
ಕರನಾನಂದಕರಂ ಸಮಂತೆಮಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ||
ಇದು ಸಮಸ್ತ ಸುರನಿಕರ ಮಣಿಮಕುಟಖಚಿತಂ ದಿನಕರಕರಾಧಿಕ್ಯ ಪ್ರಭಾಪುಂಜರಂಜಿತ ಸಂಪಚ್ಚರಣನೆನಿಪ ಪಂಪಾವಿರೂಪಾಕ್ಷ ಶ್ರೀಪಾದ ಕಮಲಮಕರಂದ ಮಧುಕರಾಯಮಾನಂ ಸತ್ಕವೀಶ್ವರಂ ಹಂಪೆಯ ಹರಿ ಹರದೇವ ವಿರಚಿತಮಪ್ಪ ಗಿರಿಜಾಕಲ್ಯಾಣ ಮಹಾಪ್ರಬಂಧದೊಳು ಪಾರ್ವತೀಪರಮೇಶ್ವರ ವಿವಾಹವರ್ನನಂ ಸಮಾಪ್ತಂ

**ವಿಷಯ :** ಪಾರ್ವತಿ ಪರಮೇಶ್ವರರ ಮದುವೆ.

**ವಿಶೇಷ :** ಓಲೆಯ ಅಂಚು ಮುರಿದಿದೆ. ಕೆಲವು ಓಲೆಗಳನ್ನು ಹುಳು ತಿಂದಿದೆ.

—ಪಕರಾ

## 648

| ಕೆ.ಎ. ೩೪೨/೨ | **ಗಿರಿಜಾಕಲ್ಯಾಣ** | ತ್ರಿಪದಿ |
|---|---|---|
| ೧೩.೮" × ೯.೩" | ? | ? |
| ೯೭-೧೦೬ ಪತ್ರ | ೧೭ ಪಂಕ್ತಿ | ೧೭ ಅಕ್ಷರ |

**ಆದಿ :** ಗಿರಿಜಾಕಲ್ಯಾಣ ಬರೆಯುವುದಕ್ಕೆ ಶುಭಮಸ್ತು.
ಕಲ್ಯಾಣಂ ಗಿರಿಜಾಕಲ್ಯಾಣಂ ಕಲ್ಯಾಣಂ ನಂಮ್ಮ ಗೌರಿಶಂಕರರಿಗೆ
ಕಲ್ಯಾಣಂ ಗಿರಿಜಾಕಲ್ಯಾಣಂ ||ಪಲ್ಲ||
ಚಂದ್ರಶೇಖರ ಬಂದ ಚಲುವ ಮೂರುತಿ ಬಂದ
ರಂಭೆ ಪಾರ್ವತಿಯ ಮನ ಸೂರೆ
ರಂಭೆ ಪಾರ್ವತಿಯ ಮನಸೂರೆಗೊಂಬೆ ಹರ
ಬಂದನೆಂದು ಕಹಳೆಗಳಿಡಿದವಾಗಾ ||೧||
ಯೋಜನದಗಲಕ್ಕೆ ರಾಜಿಸುವ ಪಾಯ್ದಳಾ
ತೇಜಾದಿ ತೇಜ ಹರಿಯುಲಜಾ
ತೇಜಾದಿ ತೇಜ ಹರಿಯಜ ಸಹಿತಗಿರಿ
ರಾಜನರಮನೆಗೆ ನಡೆದರಾಗಾ ||೨||

**ಅಂತ್ಯ :** ಹರಗಿರಜೆ ಕಲ್ಯಾಣ ಹರುಷದಲಿ ಪೇಳಿದರೆ
ಹರನು ಸಂತೋಷದೊಳು ವರಗೊಡುವಾ
ಹರನು ಸಂತೋಷದಲಿ ಸುಖವಿತ್ತು ಸಲಹುವ
ನರಲೋಕದವರಿಗಿಷ್ಟಾರ್ಥನೀವಾ ||೧೯||
ಕಲ್ಯಾಣಂ ಗಿರಿಜೆ ಕಲ್ಯಾಣಂ ಗಿರಿಜಾಕಲ್ಯಾಣ ಸಂಪೂರ್ಣ ಪದನೂ ೧೯ಕಂ ಮಂಗಳ ಮಹಾಶ್ರೀ.

**ವಿಷಯ :** ಪರಶಿವನು ಪಾರ್ವತಿಯನ್ನು ವಿವಾಹವಾದದ್ದು.

**ವಿಶೇಷ :** ಬರಹವು ಚೆನ್ನಾಗಿದೆ. ನಾಲ್ಕು ಪಾದಗಳಿದ್ದರೂ ತ್ರಿಪದಿಯ ಛಂದಸ್ಸಾಗಿದೆ. ಎರಡನೆಯ ಪಾದವು ಪುನರಾವರ್ತನೆಯಾಗಿದೆ. ವರನಂದೀ ಕಲ್ಯಾಣ, ಸೀತಾಕಲ್ಯಾಣ, ಲಕ್ಷ್ಮೀಕಲ್ಯಾಣ, ಗೌರೀಕಲ್ಯಾಣಗಳೆಂಬ ಇತರ ಗ್ರಂಥಗಳು ಇದೇ ಪುಸ್ತಕದಲ್ಲಿವೆ. ಸಮಗ್ರ ಪ್ರತಿ.

—ಕೆಆರ್ಎಸ್

## 649

| ಕೆ.ಎ. ೩೪೪/೨ | **ಗಿರಿಜಾಕಲ್ಯಾಣ** | ಹಾಡು |
|---|---|---|
| ೧೧″ × ೭.೮″ | ? | ? |
| ೧-೬ ಪತ್ರ | ೧೭ ಪಂಕ್ತಿ | ೧೭ ಅಕ್ಷರ |

**ಆದಿ :** ಗಿರಿಜಾಕಲ್ಯಾಣವಂನು ಬರೆಯುವದಕೆ ನಿರ್ವಿಘ್ನಮಸ್ತು
ನಿರ್ಗುಣಾತ್ಮಕ ಶಿವನ ಶೀಘ್ರದಲಿ ಶೃಂಗರಿಶಿ
ಲಗ್ನಕ್ಕೆ ಬಂದ ಪದಗಳನು ಪೇಳುವೆ
ವಿಘ್ನೇಶ ಮತಿಯ ಕರುಣಿಸು ||೧||

ಮೂರು ಕಂಣೊಡೆಯನೂ ಪಾರ್ವತಿಗೆ ವರನಾಗಿ
ಧಾರೆಗೆ ಬಂದ ಪದಗಳನು ಪೇಳುವೆ
ಹೇರಂಬಮತಿಯ ಕರುಣಿಸು ||೨||

**ಅಂತ್ಯ :** ತೇಜೋನ್ಮಯನು ತಾನೂ ಲಾಜೆಹವನವ ಮಾಡಿ
ಮೂರ್ಜಗಲೂ ಉಂಡು ಸುರಸಭೆ| ಸುರಸಭೆಯನೊಡಗೂಡಿ
ಭೋಜನಾಂತ್ರದೊಳು ಯಸದಾಲೂ ||೭೧||
ಶ್ರೀ ರಾಮಚಂದ್ರಾಯ ನಮಃ

**ವಿಷಯ :** ಪಾರ್ವತೀ ಪರಮೇಶ್ವರರ ವಿವಾಹ.

**ವಿಶೇಷ :** ಇದರೊಂದಿಗೆ ಗರುಡಾಚಲ, ಅನುಭವಾಮೃತ ಮೊದಲಾದ ಇತರ ಏಳು ಗ್ರಂಥಗಳಿವೆ.

—ಬಿಎಸ್ಎಸ್

## 650

| ಕೆ.ಬಿ. ೬೪೭/೭ | **ಗಿರಿಜಾಕಲ್ಯಾಣ** | ಸಾಂಗತ್ಯ |
|---|---|---|
| ೮.೨" × ೫.೯" | ಲಿಂಗರಾಜ | ಸು. ೧೮೫೦ |
| ೨೯-೬೮ ಪತ್ರ | ೧೬ ಪಂಕ್ತಿ | ೨೨ ಅಕ್ಷರ |

**ಆದಿ :** ಗಿರಿಜಾಕಲ್ಯಾಣ ಸಾಂಗಿತ್ಯನುಂ ಬರೆಯುವದಕ್ಕೆ ನಿರ್ವಿಘ್ನಮಸ್ತು|| ಶ್ರೀರಸ್ತು||
ಶ್ರೀ ಗಿರಿಜೆಯನರ್ಧಾಂಗದಿ ತಾಳಿದ
ಭೋಗಿಭೂಷಣನಾದ ಶಿವನು
ನಾಗಾ ಜಿನವಸ್ತ್ರನೀಯಲಿ ಸುಖವಂನು
ಬೇಗದಿಂ ಶ್ರೀವೀರಭದ್ರ ||೧||

X X X

ಸೊಂಪಿನ ಕೃಷ್ಣರಾಜೇಂದ್ರನ ಚರಣವ
ಲಂಪಿನಿಂ ಪೂಜಿಸುತಿರುವಾ
ಕೆಂಪಿನ ಬಸವಾಂಬಿಕೆಯ ಪಾದಂಗಳ
ಯಿಂಪಿನಿಂ ಮನದಿ ವಂದಿಸುತಾ ||೫||

ಪೇಳುವೆ ಗಿರಿಜಾಕಲ್ಯಾಣದ ಬಹುವಿಧ
ಲೀಲೆಯ ಕಥೆಯ ವಿಸ್ತರಿಸಿ
ಮೇಲಾದ ಲಿಂಗರಾಜನು ಲಿಂಗರಾಜನ
ಬಾಲನು ಬಹಳ ಭಕ್ತಿಯೊಳು ||೬||

ಅಂತ್ಯ : ಸುರನರ ಭುಜಗವಂದಿತ ಪಾದ ಪಂಕಜೆ
ಕರುಣಾರಸ ಪರಿಪೂರ್ಣೇ
ವರವನು ಕರುಣಿಸಿ ತರಳನ ಪೊರೆ ತಾಯೆ
ಗಿರಿರಾಜ ತನಯೆ ಸಂತಸದಿ ||೮೩||
ವರ ಲಿಂಗರಾಜನು ಪೇಳಿದ ಗಿರಿಜೆಯ
ಸುರುಚಿರ ಕಲ್ಯಾಣಕಥೆಯೊ
ಳ್ಕಿರೆಯುಂತಿರ್ಪ್ಪರನೆ ಸಂಧಿಗೆ ವೀರೇ
ಶ್ವರನಿಗೆ ಶುಭ ಸಂತತಿಯಾ ||೮೪|| ಮಂಗಳ||
ರಾಗ|| ಕೇತಾರ ಗೌಳ||
ಮಂಗಳ ಶ್ರೀ ಮಹಲಿಂಗನಿಗೆ| ಜಯ
ಮಂಗಳ ಕರುಣಾಪಾಂಗನಿಗೆ|| ಮಂಗಳಂ
ಶೈಲತನೂಜೆಯ ಕರವನು ಪಿಡಿದಗೆ
ಬಾಲಚಂದ್ರನ ತಲೆಯೊಳು ತಾಳ್ದಗೆ
ಶೂಲನ ಹಸ್ತದೆ ಪಿಡಿದಗೆ ಲೋಕವ
ಪಾಲಿಪ ಚಿನುಮಯ ರೂಪನಿಗೆ|| ಮಂಗಳ||XXX ||೧||

ಗದ್ಯ|| ಇದು ನತಾಚ್ಯುತ ಶತಕ್ರತು ಹುತಾಶನ ಚತುರ್ಮುಖ ಮುಖಾದಿತಿ ಸುತಾಮಿತ ವಿತಾನಾಪಾತಜ ವಜಾತ ಪೋತ ನೂತ X X X ಮಹೀಶೂರಾಂತರ್ವಿತ್ಯೋತಮಾನ ಹೃದ್ಯಾನವದ್ಯ ನೂತ್ನರತ್ನ ಚಿತಪ್ರತ್ನ ಸಿಂಹಾಸನಾಸೀನ ರಾಜಾಧಿರಾಜ ಶ್ರೀಮತ್ಕೃಷ್ಣರಾಜ ಕಂಠೀರವಜಾಜಾ ವೃತತಾ ಭಾಗ್ಯೈಕತಾನನಿಂ| ಗಂಗಾಧರ ಕರುಣಾ ಪಾಂಗಾಲಿಂಗಿತ ಲಿಂಗ ರಾಜ ಧರ್ಮದಾರ ಕೆಂಪದೇವಮಾಂಬಾ ಗರ್ಭಕ್ಷೀರ ಪಾರಾವಾರ ರಾಕಾ ಸುಧಾಕರಾಯ ಮಹಾ ಗರ್ಭಾಗತರಮಾವಾಸ ತೋಷಿತಾಂತರಂಗ ಲಿಂಗರಾಜನಿಂ ವಿರಚಿತಮಪ್ಪ ಸಾಂಗತ್ಯ ಗಿರಿಜಾ ಕಲ್ಯಾಣ ಅಧ್ಯಾಯ ಆರಕ್ಕಂ ಪದ ೪೯೩ ಕ್ಕಂ ಸಂಪೂರ್ಣಂ ಮಂಗಳ ಮಹಾ ಶ್ರೀ.

ವಿಷಯ : ಶಿವನು ಗಿರಿಜೆಯನ್ನು ವಿವಾಹವಾದ ಕಥೆ.

ವಿಶೇಷ : ಸಮಗ್ರವಾಗಿದ್ದು ಅಕ್ಷರವು ಚೆನ್ನಾಗಿದೆ. ಪತ್ರದ ಎರಡು ಕಡೆಗಳಲ್ಲಿಯೂ ಬರಹವಿದೆ. ಇದೇ ಪುಸ್ತಕದಲ್ಲಿ ವೀರಭದ್ರ ಶತಕ, ಮಹಲಿಂಗ ಶತಕ, ವೀರೇಶ ತಾರಾವಳಿ, ನವರತ್ನ ಮಾಲಿಕಾ, ಅಂಬಾ ನವರತ್ನ ಮಾಲಿಕಾ(ಸಂ) ಆರ್ಯಾ ಪಂಚಕ(ಸಂ), ಗೋಪಿಕಾ ಗೀತೆಯ ಟೀಕು ಮತ್ತು ಮೂರು ಶುದ್ಧ ಪತ್ರಗಳಾದ ಅನಂತರ ವೀರಭದ್ರಾಷ್ಟಕ, ವೀರೇಶಾಷ್ಟಕವೆಂಬ ಕೃತಿಗಳೂ ಇವೆ.

—ಕೆಆರ್ ಎಸ್

651

ಕೆ. ೯೩೭/೨ **ಗಿರಿಜಾಕಲ್ಯಾಣದೊಳಗಣ ಪದ** ಪದ್ಯ,ಟೀಕು

೮.೫" × ೧.೮" ? ?

೫೨-೬೪ ಪತ್ರ ೯ ಪಂಕ್ತಿ ೩೮ ಅಕ್ಷರ

**ಆದಿ :** ಶ್ರೀ ವಿರೂಪಾಕ್ಷಯೆ ನಮಃ॥ ಗಿರಿಜಾಕಲ್ಯಾಣದೊಳಗಣ ಪದ॥
ವಿಲಸತ್ಕಲ್ಲೋಲ ಮಾಲಾ ಪ್ರತಿಹತ ವಿತತ ಪ್ರೋಚ್ಛಲ ... ಕೋಲಾ
ಹಲಿಶೋದ್ಯೋತ್ಸೈನ ನಾನಾ ಕರಿ ಮುಖರವಿ ಪುಚ್ಛ ಪ್ರೋ
ದ್ಗಳಿತಾನಂತ ಪ್ರರತ್ನ ಪ್ರಬಲ ಚರಾಸೀಕ ಗಂಭೀರ ಭೀಮೋ
ಜ್ವಲದಾವ ಪ್ರೋದ್ಭುತ ಪ್ರೋನ್ಮೀಳಿತ ಘುಳುಘುಳು ದ್ವಾನಮಂ ಭೂ
ನಿಧಾನಂ॥

ಟೀಕು॥ ವಿ। ವಿಶೇಷವಾಗಿ। ಲಸ್ತ್। ಮಪ್ಪಲ್ಪಟ್ಟ। ಕಲ್ಲೋಲಪೆಂಬ ತೆರೆಗಳ ಮಾಲಾ। ಸಮೂಹದಿಂದ ಪ್ರತಿಹತ। ಬಡಿಯಲ್ಪಟ್ಟ। ವಿತತ ಪ್ರಸಿದ್ಧವಾಗಿ ಇರುವಂಥಾ। ಪ್ರೋಚ್ಛಲತ್। ಅಧಿಕವಾಗಿದ್ದಂಥಾ। ಪೇನ। ನೊರೆಗಳುಳ್ಳ ನಾನಾ। ಹಲವು ತೆರನಾದ। XXXಘುಳು ಘುಳು ದ್ವಾನಂ। ಘುಳು ಘುಳು ಧ್ವನಿಯುಳ್ಳ। ಅಂಭೋ ನಿಧಾನಂ। ಸಮುದ್ರನು ಮಪ್ಪಿತು। ವಿರಾಜಿಸಿತು।

**ಅಂತ್ಯ :** ಕರುಣಿಸನಾಥ ನಾಥ ಕುಲಸೇವಿತ ಸೇವಿತಕಾಲ ಕಾಲ ಸಂ
ಹರಣ ರಣಾಗ್ರರಂಜಿತ ಜಿತಾಮರ ತಾಮರಸಾಕ್ಷ ಸಾಕ್ಷ ಸಂ
ಸ್ಮರ ನಿಜ ದರ್ಪದರ್ಪ ಕವಿನಾಶ ವಿನಾಶ ನಿಕಾಯ ಕಾಯ ವಿ
ಸ್ತರಿತ ಭುಜಂಗ ಜಂಗಮ ಕೃಪಾಮವನ ಪಾವನ ಹಂಪೆಯಾಳ್ದನೇ

ಟೀಕು॥ ಅನಾಥನಾಥ ಕುಲಸೇವಿತ। ಅನಾಥ। ತನಗೊಂಡೊಡೆತನವಿಲ್ಲದೆ ಯಿದಂಥಾ ನಾಥ। ಮಡೆತನ ಉಳ್ಳಂಥವರುಗಳ। ಕುಲ। ಸಮೂಹದಿಂದೆ। ಸೇವಿತ। ಮೋಲೈಸಲ್ಪಟಂಥಾ।XXXಕಾಯ ವಿಸ್ತರಿತ ಭುಜಂಗ।ಕಾಯ। ಶರೀರದಲ್ಲಿ। ವಿಸ್ತರಿತ। ವಿಸ್ತರಿಸಲ್ಪಟ್ಟ। ಭುಜಂಗ। ಸಪದಗಳನುಳಂಥಾ। ಜಂಗಮ ಕೃಪಾಮವನ। ಜಂಗಮ। ಚರಪ್ರಾಣಿಗಳನು। ಕೃಪಾ। ಕರುಣದಿಂದೆ। ಅವನ ರಕ್ಷಿಸುತಿರ್ದಂಥಾ। ಪಾವನ। ಪವಿತ್ರ ಸ್ವರೂಪವಾದ। ಹಂಪೆಯಾಳ್ದನೆ। ಪಂಪಾ ಕ್ಷೇತ್ರಕ್ಕೆ। ಮಡೆಯನಾದಂಥಾ। ಯಲೆ ದೇವನೆ। ಕರುಣಿಸು। ಕೃಪೆ ಮಾಡೂ ಶ್ರೀ॥ ॥೧೫॥

**ವಿಷಯ :** ಗಿರಿಜಾಕಲ್ಯಾಣದಲ್ಲಿ ಬರುವ ಪದ್ಯಗಳಲ್ಲಿ ಶಿವಸ್ತುತಿ.

**ವಿಶೇಷ :** ಹರಿಹರನ ಗಿರಿಜಾ ಕಲ್ಯಾಣದ ಕಾವ್ಯದಲ್ಲಿ ಆರಿಸಿದ ೧೫ ಪದ್ಯಗಳಿಗೆ ಟೀಕನ್ನು ಬರೆದಿದೆ. ಬರೆದವರಾರೆಂಬುದು ತಿಳಿಯುವುದಿಲ್ಲ. ಇದೇ ಕಟ್ಟಿನಲ್ಲಿ ಮಟಪುರ

ಸಿದ್ಧಾಂತ ಸೋತ್ರ, ಮಣ್ಣೇಶ್ವರ ಪುರಾಣದ ನಾಂದ್ಯ, ವೈದ್ಯಶಾಸ್ತ್ರ ಇತ್ಯಾದಿ ೯ ಗ್ರಂಥಗಳಿವೆ.

—ಕೆಆರ್ಎಸ್

## 652

ಕೆ. ೧೬೬೮ | **ಗಿರಿಜಾರಮಣ ವಿಲಾಸ** | ಚಂಪು

೯.೮" × ೧" | ಮುಡಿಗೊಂಡದ ಅಪ್ಪಾಜಿಕವಿ | ?

೧-೨೩೨ ಪತ್ರ | ೬ ಪಂಕ್ತಿ | ೩೭ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ।....
ಶ್ರೀ ಗಿರಿರಾಜ ಪುತ್ರಿಯ ಲಲಿತಾಂಗಮನೆಂಮೀ ಲೀಲೆಯಿಂ
ದಾಗಳಿಭಾನನಂಗೆ ಮೊಗವಾಜಿ ...
ರಾಗದಿನೀಕ್ಷಿಸುತ್ತೆ ಮಗುಳಾ ಸತಿಯಂ ನಗಿಸುತ್ತೆ ಪುತ್ರರಿಂ
ಬೀಗುವ ಚಿತ್ತದಿಂ ಜಗಮನೋವುವೀಶ....

**ಅಂತ್ಯ :** ....ಮಾಣು ರಾಜಮಂದಿರ ಕ್ರೀಡಾಪರಿಪೂರ್ಣ ಕೋಟಿಬ್ರಹ್ಮಾಂಡ ಪ್ರದೇಶವಾಸ ರೋಮಕೂಪ ಸೀಮಾವಲಯ ಅಗಣಿತ ಮಾರ್ತಾಂಡಬಿಂಬ ಮಹಾತೇಜಾಕ್ಷೇಪ ಶೋಭಾಯಮಾನ ನಿರವಯ ನಿರ್ಮಲ ನಿತ್ಯಾನಂದ ಮೂರ್ತಿ ಕನಕಪುರೀಶ ಶ್ರೀ ಭುಜಂಗಲಿಂಗ ಶ್ರೀಪಾದಪಂಕಜ ಷಟ್ಪ ದಾಯಮಾನ ಮುಡಿಗೊಂಡದ ಅಪ್ಪಾಜಿಕವಿ ನಿರ್ಮಿತ ಗಿರಿಜಾರಮಣ ವಿಲಾಸ ಮಹಾಪ್ರಬಂಧದೊಳು ಸ್ತ್ರೀಯರ ಶಿಶಿರೋಪಚಾರ, ಯಜ್ಞ ಲಿಂಗೋದ್ಭವ ಲಿಂಗಧಾರಣ ವರ್ಣನಂ ಸಮಾಪ್ತಂ ಮಂಗಳ ಮಹಾ ಶ್ರೀ
ವರ ಕವಿಯಪ್ಪಾಜಿಯ ಸೋ
ದರದಳಿಯ ಮಲ್ಲೇದೇವಸುತ ಮಲ್ಲೇಲಿಂಗಂ
ಗಿರಿಜಾರಮಣವಿಲಾಸಮ
ಬರದಂ ಸಂತಸವಿತ್ತು.... ಸುಶಿವನೇ

**ವಿಷಯ :** ಶಿವ ಪಾರ್ವತಿಯರ ವಿವಾಹ.

**ವಿಶೇಷ :** ಕೆಲವು ಪತ್ರಗಳ ಅಂಚು ಮುರಿದು ಗ್ರಂಥ ಲುಪ್ತ. ಅಸಮಗ್ರ. ಪತ್ರಗಳು ಅಸ್ತವ್ಯಸ್ತವಾಗಿವೆ.

—ವೈಸಿಬಿ

## 653

ಕೆ. ಬಿ. ೬೬೬/೧ | **ಗಿರಿಜಾಸ್ತೋತ್ರ** | ಪದ್ಯ

೬" × ೪" | ? | ?

೧-೨ ಪತ್ರ | ೮ ಪಂಕ್ತಿ | ೧೬ ಅಕ್ಷರ

ಆದಿ : ಗಿರಿಜಾಸ್ತೋತ್ರ ಬರೆಯುವದಕ್ಕೆ ಶುಭಮಸ್ತು
ಸತತಾಮರ ಪೂಜಿತ ಪಾ
ದ ತಳಂಜಿತತಾರಕ ತಾತ ಮಣಿಂಕಭಳಂ
ಪಣಿರಾಜ ಧರಾಂಗಣ
ರಾಜಿಯುತುಂ ಪ್ರಣತೋತ್ಕಿ ಗುಣಾಕರಮಿಂಧುಧರಂ ||೧||

ಅಂತ್ಯ : ಮಧು ಬಿನ್ನಗವದ್ವಿದಿ ಪೂಜಪದಂ
ಮಧು ಮಿತ್ರಮಿಳಾಂನ್ನದದಾವದಮಂ
ಮದಧಾರುಣ ಪಾರುಣ ದೈತ್ಯವಹಂ ಶ್ರೀ ||೪||

ವಿಷಯ : ಗಿರಿಜೆಯ ಸ್ತುತಿ.

**ವಿಶೇಷ :** ಬರೀ ನಾಲ್ಕು ಪದ್ಯಗಳು ಮಾತ್ರವಿವೆ. ತೆಳು ಕಾಗದ. ಇದೇ ಪುಸ್ತಕದಲ್ಲಿ ಸದ್ಗುರು ಚಿಲಾಳ ಸ್ತೋತ್ರ, ಗುರುಕರುಣಾಮೃತ, ಹಾಡು, ಲಾವಣಿ ಎಂಬ ಇತರ ಮೂರು ಕೃತಿಗಳಿವೆ.

—ಕೆಆರ್ ಎಸ್

## 654

ಕೆ. ೬೭೭/೧ **ಗಿರಿಮಲ್ಲಿಕಾರ್ಜುನನ ಚರಿತ್ರೆ** ಯಕ್ಷಗಾನ
೧೫.೬″ × ೧.೩″ ಘೋಗಣ್ಣ ೧೮೫೩
೧-೩೫ ಪತ್ರ ೬ ಪಂಕ್ತಿ ೭೪ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ|| ಶ್ರೀ ಗಿರಿಮಲ್ಲಿಕಾರ್ಜುನನ ಚರಿತ್ರೆಯ ಯಕ್ಷಗಾನ ಬರಿಯುವದಕ್ಕೆ ಶುಭಮಸ್ತು|| ವಿರೋಧಿಕೃತ್ತು ಸಂ|| ಮಾಗ ೨ ಲ್ಲು ಪ್ರಾರಂಭವಾಗಿ ಬರಿಯುಪಂತ್ತಾದ್ದಕ್ಕೆ ಶುಭಮಸ್ತು|| ಶೋಭನ ಮಸ್ತು||

ದ್ವಿಪದ|| ಶ್ರೀ ಗಿರಿಜಾಧೀಶಾ| ಶ್ರೀ ಗಿರಿವಾಸಾ| ನಾಗಚರ್ಮಾಂಬರನೆ
ಯೋಗಿ ಹೃತ್ಪದ್ಮನಿಲಯ ಪ್ರಕಾಶಾ ಕರಿಚರ್ಮ ಧರಿಸಿದಾ
ಕಾರುಣ ವಿಸ್ತಾರಾ ನಿರುತಂ ಭಕ್ತೋದ್ಧಾರ ನಿರ್ಮಳ ಶರೀರಾ
ಬಾಲಿಂದ್ದು ಸೇಖರಾ ಭವರೋಗ ಹಾರಾ ಮೂಲಕಾರಣ ಮಹಾ XXX
ಇಂತು ಶಿವಕವಿಗಳೆಲ್ಲರಂ ಪೊಗಳಿ ಸಂತೋಷದಿಂದ್ದವರ ಪಾದಕ್ಕೆ ಯರಗಿ ಮುಂದೆ ಪೇಳುವೆ ಮುಕ್ತಿ ಸಾಧನದ ಕಥೆ ಶೆಂಖರ ಮಲ್ಲಿಕಾರ್ಜುನನ ಚರಿತ್ರೆ|
ಹರನ ಭಕ್ತರ ಕೇಳಿ| ಹರುಷಮಂ ತಾಳಿ||
ಕರುಣನಿಧಿ ಪರಮೇಶ| ಘನ ಸುಖವನೀವಾ|| (೨ನೇ ಪತ್ರದಿಂದ)

ಅಂತ್ಯ : ವರಗಿರೀಶ ಮಲ್ಲೀಶ ಪಾಲಿಪನೂ
ಧರಣಿ ಆಕಾಶಾ ದಿವಿಜರು ತಾವಾಗಾ
ಶರಧಿಯು ಸೂರ್ಯ ಚಂದ್ರನೂ ಕಾಮದೇನೂ
ಇರುವನ ಕಯಿಾ ಕೃತಿ ಯುಂಪು ಸೊಂಪಾಗಿ
ಧರೆಯೊಳಗೆ ಯಿಾ ಕೃತಿ ದೈವವಾಗಿಹುದೂ
ಸಸರೇಣುಕ ಪುರಿಶಿವನ ಕೃಪೆಯಾಗಿ
ಸ್ಥಿರವಾ ನಟಿಸುವದು ಶ್ರೀಕರವಾಗಿ||
ಶ್ರೀ ಗಿರಿಮಲ್ಲಿಕಾರ್ಜುನನ ಚರಿತ್ರೆ ಸಂಪೂರ್ನ ಮಂಗಳ ಮಹಾ ಶ್ರೀ
ಸನ್ ೧೮೫೨ ನೇ ವಿರೋಧಿಕೃತು ನಾಮ ಸಂ|| ಮಾನರುದ್ದ ೧೨
ಮಂಗಳವಾರ ದಿನಕ್ಕೆ ಅತ್ತಿಬಲಿದೊ ಚಂದೊ ಭೋಗಂಣ ಭರದಂತಾ
ಶ್ರೀ ಗಿರಿಮಲ್ಲಿಕಾರ್ಜುನ ಚರಿತ್ರೆ ಯಕ್ಷಗಾನದ ಪುಸ್ತಕ ಸಮಾಪ್ತ ಮಂಗಳ
ಮಹಾಶ್ರೀ.

ವಿಷಯ : ಶಿವಶರಣ ಮಲ್ಲಿಕಾರ್ಜುನನ ಕಥೆ.

ವಿಶೇಷ : ಸಮಗ್ರವಾಗಿದೆ. ಅಕ್ಷರವು ಸ್ಫುಟವಾಗಿದ್ದು ಸುಂದರವಾಗಿದೆ. ಇದೇ ಕಟ್ಟಿನಲ್ಲಿ ಹರಿ ಪಾರ್ಥ ಸಂವಾದ ಎಂಬ ಮತ್ತೊಂದು ಗ್ರಂಥವಿದೆ.

—ಕೆಆರ್‌ಎಸ್

## 655

| ಕೆ. ೧೨೯೩ | ಗಿಳಿಹಾಡು | ಹಾಡು |
|---|---|---|
| ೧೦.೭″ × ೧.೩″ | ? | ? |
| ೧-೪೩ ಪತ್ರ | ೭ ಪಂಕ್ತಿ | ೪೦ ಅಕ್ಷರ |

ಆದಿ : ಶ್ರೀ ಗಣಾಧಿಪತಾಯ ನಮಃ|| ಗಿಳಿಹಾಡು ಬರೆಯುುವುದಕ್ಕೆ ಶುಭಮಸ್ತು||
ಆಯುುರಾರೋಗ್ಯ ಐಶ್ವರ್ಯಮಸ್ತು||
ಹರ ಹರ ಹರನೆ ಜಯತು ಹರ ಮೂರು
ಪುರವ ಗೆಲಿದವನೆ ಜಯತು
ಕರುಣಿಸುವ ಕಾಲ ಕಂದರನೆ ಹರ ಮಹಾದೇವ
ಸುರಿವುದು ಸನ್ಮತಿಗಳಾ ||೧||

ಅಂತ್ಯ : ಕಣ್ಣಿಂದ ಕತ್ತಿಂದಲಿ ಜೋಗಿಯ
ತನ್ನ ಭೂಷಣದಿಂದಾ
ಮುನ್ನೆಯಾತನ ನೋಡಿ ದೊರತನದಲಾ ಜೋಗಿ
ಸನ್ನೆಮಾಡಿ ಕರದನಕ್ಕಾ ||೩೭೩||

**ವಿಷಯ :** ಅರ್ಜುನ ಜೋಗಿಯ ಹಾಡು.

**ವಿಶೇಷ :** ಅಸಮಗ್ರ. ೧೨, ೨೮, ೪೦, ೪೩ ಈ ಪತ್ರಗಳ ಬಲಭಾಗ ಮುರಿದಿವೆ.

—ವೈಸಿಬಿ

656

ಕೆ. ೧೭೬೦/೧ **ಗಿಳಿಹಾಡು** ಹಾಡು

೬.೨″ × ೧.೪″ ? ?

೧-೩೦ ಪತ್ರ ೫ ಪಂಕ್ತಿ ೨೨ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇನ್ನಮಃ XXX ಶ್ರೀ ಸಾಂಬ್ಬಶಂಕ್ಕರ ಗೌರೀ ಪತಯೇನ್ನಮಃ॥ ಗಿಳಿಹಾಡು ಜೋಗಿಹಾಡು ಬರೆಯುವದಕ್ಕೆ ಆಯು ರಾರೋಗ್ಯಾದಿ ವೃದ್ಧಿರಸ್ತು। ಜಯನೂ ಜಯನೂ

ಹರಹರಾ ಹರನೆ ಜಯತೂ
ಹರಮೂರು ಪುರವ ಗೆದ್ದವನೆ ಜಯತೂ
ಕರುಣಿಸೂ ಕಾಲಕಂಧರ ಹರಮಹಾದೇವ
ಸುರಿವುದೂ ಸನ್ಮತಿಗಳಾ XXX ॥೧॥
ಕೂಡಿ ಪಾಡುವರು ಪದನಾ
ಸಾಗರದಲ್ಲಿ ಸ್ವರಗೈಯ್ವ ಕೋಗಿಲೆಗಳಂತೆ
ಪಾರ್ಥಯೋಗಿಗಳಿಗೆ ಅರ್ಥಹೇಳುವ ಸರಸ್ವತಿ
ಕರ್ತಳಾ ಗಿಳಿಗೆ ನಿಂದಾ ॥೭॥

**ಅಂತ್ಯ :** ಹಾಲುಸಕ್ಕರೆಯ ತಂದು ದ್ರೌಪದೀ
ತೂಗುಮಂಚವ ಸಾರಿದಾ
ದೇವೇಂದ್ರನಾ ಮಗನೆ ಯೇಳೆಂದು ದ್ರೌಪಧೀ
ಪಾದಕಮಲವನೊತ್ತುತಾ ॥೧೬೨॥
ಗಿಳಿಹಾಡು ಸಂಧಿ ೧ ಕ್ಕಂ ಪದನೂ ೧೬೨ ಕ್ಕಂ ಜಯ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಅರ್ಜುನನ ಕಥೆ.

**ವಿಶೇಷ :** ಪ್ರತಿ ಶುದ್ಧವಾಗಿ ಚೆನ್ನಾಗಿದೆ. ಇದರ ಜೊತೆಗೆ ಜೋಗಿಹಾಡು, ಮಂಗ ಳಾರತಿ ಪದ ಎನ್ನುವ ಎರಡು ಕೃತಿಗಳಿವೆ.

—ಜಿಜಿಎಂ

657

ಕೆ. ೯೪೧/೧೯ **ಗೀತಗೋಪಾಲ** ಹಾಡು

೧೮.೬" × ೧.೬" ಚಿಕ್ಕದೇವರಾಜ ೧೬೭೨-೧೭೦೪

೧-೪೩ ಪತ್ರ ೭ ಪಂಕ್ತಿ ೭೫ ಅಕ್ಷರ

**ಆದಿ :** ಶ್ರೀಮತೆ ರಾಮಾನುಜಾಯ ನಮಃ॥ ಶ್ರೀಶೈಲಗುರವೆ ನಮಃ॥ ಶ್ರೀ ಗೀತ ಗೋಪಾಲ॥ ರಾಗ ಭೈರವಿ॥

ಕಂ॥ ಶ್ರೀಯಂ ತನ್ನೆರ್ದೆವನೆಯೊಳ್
ಭೂಯುವತಿಯನಡಿಯೊಳಂಬುಗೊಳಿಸಿದ ಸರಸಾ
ಪಾಯಂ ಮಂಗಳ ಕಾಯಂ
ಶ್ರೇಯಂ ಮಿಗೆ ನೆಗಳ್ಗೆ ಚದುರ ಗೋವಳರಾಯಂ
ಆಯುಮವನಭಿಮತ ಸಕಲ
ಶ್ರೀಯುಮನೊಡನಖಿಳ ಧರಣೀಮಂಡಲ ವಿಜಯ
ಶ್ರೀಯಂ ಚಿಕದೇವ ಮಹಾ
ರಾಯಂಗೊಲ್ದೀಗೆ ಚದುರ ಗೋವಳರಾಯಂ

**ಅಂತ್ಯ :** ಶ್ರೀ ನಾರಸಿಂಹ ನಿನ್ನಡಿಗೊಲಿದು
ತಿರುಮಲೆಯಾರ್ಯರುಸಿರ್ದ
ಸರಸಗಾನವನಾಲಿಸಿ ಮಿಕ್ಕ ದೈವಂಗಳಗನ್ನವ ಕೇಳ್ವೆನೆಂತು
ಜೇನಿಗೆ ಸಾಸಿರವಡಿ ಸೊಗಸೆನಿಸುವ
ತೇಜದೊಳೆಸೆವ ಸೊದೆಯುಂಡು ಸೊಕ್ಕಿನಿಂ
ದಾನಂದದೊಳು ಬಾಳುವಮರರಿಳೆಯು
ಪುಲುಮಾನಿಸರೂಟಕ್ಕೆ ಮನಗೊಳಿಸುವರೆ
ಪಲಸಪ್ತಪದಿ ಸಂಪೂರ್ಣಂ

**ವಿಷಯ :** ಶ್ರೀ ಕೃಷ್ಣನನ್ನು ಕುರಿತ ಭಕ್ತಿಗೀತೆಗಳು.

**ವಿಶೇಷ :** ಪ್ರತಿ ಜೀರ್ಣ್ವಾಗಿದೆ. ಅಲ್ಲಲ್ಲಿ ಹುಳು ಹೊಡೆದಿದೆ. ಕೆಲವು ಪತ್ರಗಳ ಅಂಚು ಗಳು ಮುರಿದಿವೆ. ಇದೇ ಕಟ್ಟನಲ್ಲಿ ಕೊರವಂಜಿ ಕಟ್ಟೆ ತೆಲುಗು, ತಮಿಳು, ಕನ್ನಡ, ಪ್ರಾಕೃತ ಭಾಷೆಗಳಲ್ಲಿದೆ. ಚಿಕದೇವರಾಜ ವಿಜಯದ ಆರನೆಯ ಆಶ್ವಾಸ ಅಸಮಗ್ರವಾಗಿದೆ. ೪೩ ನೆಯ ಪತ್ರದಿಂದ ೬೩ ನೆಯ ಪತ್ರದ ವರೆಗೆ ಇಲ್ಲ.

—ಎನ್ ಬಿಎ

## 658

ಕೆ.ಬಿ. ೫೨೩/೩ **ಗೀತಗೋವಿಂದ** ಗೀತ

೮" × ೬.೫" ಕೃಷ್ಣದಾಸ ಜಯದೇವ ?

೩೭-೬೪ ಪತ್ರ ೧೬ ಪಂಕ್ತಿ ೧೮ ಅಕ್ಷರ

**ಆದಿ :** ಶುಭಮಸ್ತು ಶ್ರೀ ಚಾಮುಂಡಾಂಬಿಕಯಂ ನ್ನಮಃ|| ಶುಭಮಸ್ತು|| ಮಭಲೇಶ್ವರ ಸ್ವಾಮಿ ಪಾದರಿಂದವೆ ಗತಿ| ರಾಗ ಸೌರಾಷ್ಟ್ರ| ಪ್ರಳಯ ಪಯೋಧಿ ಜಲೆ| ದೃತವಾನಸಿವೇದಂ ವಿಹಿತ ವಿಚಿತ್ರ ಚರಿತ್ರ ಮಖೆದಂ ಕೇಶವಾದೃತ ಮಿೂನಶರೀರ ಜಯ ಜಗಧೀಶಹರ ||೧|| ಕ್ಷಿತಿ ರತಿ ವಿಪುಳತತಿ| ತವತಿಷ್ಠಿ ತಿಷ್ಟಸ್ತೆ| ಧರಣಿಧರಣ ಕಿಣಚಕ್ರಗರಿಷ್ಟೆ ಕೇಶವಾದೃತ ಕಚ್ಛಪರೂಪ ಜಯ ||೨|

**ಅಂತ್ಯ :** ಶ್ರೀ ಜಯದೇವ ವಚನಮತಿ ಸದಯಂ ಹೃದಯಾ ಕುರುಮಂಡಲೇ| ಹರಿ ಚರಸ್ಮರಣಮ್ರಿತ ಕೃತಕ ಉಪ| ಜ್ವರ ಸಂಜ್ವರ ಖಂಡನೆ ನಿಜಗಾದ ಸಾಯದು ನಂದನೆ ಕೃಡತಿ ಹೃದಯಾನಂದನೆ ||೮|| ಯಿಂತಿ ಶ್ರೀ ಕೃಷ್ಣ ದಾಸ ಜಯದೇವಕೃತೌ ಗೀತಗೋವಿಂದೇ ಶೃಂಗಾರ ಮಹಾ ಕವ್ಯ ಮೋಕ್ಷ ಧರ್ಮೇ ಸುಪ್ರೀತ ಪೀತಾಂಬರೋ ನಾಮ ದಾದಶ ಸರ್ಗಃ|| ಅಷ್ಟಪದಿ ೨೪ಂ ಶ್ರೀ ಚಾಮುಂಡಿಕಾಂಬಾಯೈ ನಮಃ|| ಶ್ರೀ ನಂಜುಂಡಲಿಂಗಾಯೈ ನಮಃ| ಶ್ರೀ ಚಾಮುಂಡೇಶ್ವರೀ ಸಂನಿಧಿಯೊಳಗೆ ವೀರಶೈವ ಬ್ರಾಂಹ್ಮಣ ಲಿಂಗಪ್ಪನ ಬರಹಾ ಶ್ರೀ ಶ್ರೀ.

**ವಿಷಯ :** ಗೀತೆ.

**ವಿಶೇಷ :** ಇದು ಸಂಸ್ಕೃತ ಗೀತೆ. ಇದರೊಡನೆ ಕೃಷ್ಣದಾಸ, ಕೀರ್ತನೆಗಳು, ಸೌಗಂಧಿಕಾ ಪರಿಣಯ(ಸಾಂಗತ್ಯ), ಶೋಭಾನೆ ಪದಗಳು, ವೆಂಕಟೇಶ ಸ್ತವ, ರುಕ್ಮಿಣೀ ಕಲ್ಯಾಣ, ಹಾಡುಗಳು, ಸೀತಾಕಲ್ಯಾಣ, ಹಾಡುಗಳು ಈ ಕೃತಿಗಳಿವೆ.

—ಎಸ್ ಎನ್ ಕೆ

## 659

ಕೆ. ೧೬೪೬ **ಗೀತವೀತರಾಗ ವ್ಯಾಖ್ಯಾನ** ಗದ್ಯ

೭" × ೧.೫" ಚಾರುಕೀರ್ತಿ ಪಂಡಿತ ೧೮೬೦

೧-೧೯೫ ಪತ್ರ ೪ ಪಂಕ್ತಿ ೩೪ ಅಕ್ಷರ

**ಆದಿ :** ಶ್ರೀ ವಿಮಲನಾಥ ಸ್ವಾಮಿಯವರ ಪಾದಪದ್ಮಗಳೇ ಗತಿ ಶ್ರೀ ಶಾಂತಿ ನಾಥಾಯ ನಮಃ| ಶ್ರೀಮದಾದಿ ಬ್ರಹ್ಮಣೇ ನಮಃ ವಂದಿತ್ವಾ ಶ್ರೀ ವೃಷಾ

ಧೀಶ ವೃಷಭಂ ವೃಷಭಧ್ವಜಂ ಸದ್ಗೀತ ವೀತರಾಗಾಖ್ಯ ಗ್ರಂಥವ್ಯಾಖ್ಯ ಪ್ರಚಕ್ಷ್ಮಹೇ ಯಃ ಅವನೊರ್ವನು ಸಂಸಾರ ವಿಷಾಬ್ಧಿ ಪಾರಸುಕರ ಸಂಸಾರ–ಶಂಸಾರವೆಂಬ, ವಿಷ-ವಿಷರೂಪವಾದ, ಅಬ್ಧಿ-ಸಮುದ್ರದ ಪಾರ-ತೀರವನ್ನು ಸುಖರ–ಲೀಸಾಗಿ ದಾಂಟುವನೋ ಅವನು ವಿದ್ಯಾ-ಕೇವಲ ಜ್ಞಾನದಿಂದ ವ್ಯಾಪ್ತ-ವ್ಯಾಪಿಸಲ್ಪಟ್ಟ ಸಮಸ್ತ-ಎಲ್ಲಾ ವಸ್ತು ಪದಾರ್ಥಂಗಳು ವಿಸರ-ಸಮೂಹವನು

**ಅಂತ್ಯ :** ಸ್ವಸ್ತಿಶ್ರೀ ಬೆಳ್ಗುಳ–ಐಶ್ವರ್ಯದಿಂದೊಡಗೂಡಿದ ಬೆಳ್ಗೊಳ ಗ್ರಾಮದಲ್ಲಿ ದೋರ್ಜಲಿರ್ಬಲಿ ಜಿನನಿಕಟನೋರ್ಬಲಿಜಿನ–ಶ್ರೀ ಭುಜಬಲಿ ಸ್ವಾಮಿಯ ನಿಕಟ–ಸಮೂಹದಲ್ಲಿ ಕುಂಡಕುಂದಾನ್ವಯಃ–ಕುಂಡಕುಂದಾನ್ವಯಕೆ ಇನಃ-ಶ್ರೇಷ್ಠವಾದ ಭೂಸ್ತುತ್ಯ–ಲೋಕದಲ್ಲಿ ಸ್ತುತಿಸಲು ಯೋಗ್ಯವಾದ ಪುಸ್ತುಕಾಂತ– ಪುಸ್ತುಕವನೆ ಜಿಕ್ಷ್ವೆಯಾಗುಳ್ಳ ಸಗುಣಾಭರಣ–ಶೃತಗುಣ ಶಾಸ್ತ್ರಗುಣಂಗಳಿಗೆ ಆಭರಣವಾಗುಳ್ಳ ಖ್ಯಾತದೇಶಿಕಾಚಾರ್ಯ ಖ್ಯಾತ–ಪ್ರಸಿದ್ಧವಾದ ದೇಶಿಗಣ–ದೇಶೀಗಣಕ್ಕೆ ಆರ್ಯಾಃ ಪೂಜ್ಯನಾದ ಪಂಡಿತಾಚಾರ್ಯವರ್ಯ–ಚಾರುಕೀರ್ತಿ ಪಂಡಿತಾರಾಧ್ಯ ಸ್ವಾಮಿಯು XXX ಆದಿಪರಮೇಶ್ವರನ ಪ್ರಬಂಧವನ್ನು ವಿಸ್ತರಿಸಿದನು ||೧೫|| ಇತಿ ಶ್ರೀಮದಭಿನವ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಪ್ರನೀತ ವೀತರಾಗಾಭಿದಾನ ಷ್ಟಪ್ಟದಿ ವ್ಯಾಖ್ಯಾನಂ ಸಮಾಪ್ತಂ ಮಂಗಲ ಮಂಗಲ ಮಹಾ ಶ್ರೀ ಸ್ವಸ್ತಿಶ್ರೀ ವಿಜಯಾಭ್ಯುದಯ XX ಶಾಲಿವಾಹನ ಶಕಾಬ್ದಃ ೧೭೬೮ ಪಶಂಖ್ಯಾತ ಪರಿಮಿತ ಪರಾಭಾವನಾಮ ಸಂತ್ಸರೆ ಜೇಷ್ಟ ಶುದ್ಧ ಪೌರ್ನಮ ಶ್ಯಾಂತಿ ತ್ಥಾರಮಿಾಕೆ ಜೇಷ್ಟನಕ್ಷತ್ರೆ XX ಪಂಡಿತಾಚಾರ್ಯ ಪ್ರನೀತ ಗೀತ ವೀತರಾಘಾಭಿಧಾನ ಪ್ರಬಂಧಂ ಸಂತೋಷೇಣ ಮಂಗಲ ಮಹಾ ಶ್ರೀ

**ವಿಷಯ :** ವೃಷಭ ತೀರ್ಥಂಕರನ ಭವಾವಳಿಗಳ ವರ್ಣನೆ.

**ವಿಶೇಷ :** ಕೆಲವು ಓಲೆಗಳ ಅಕ್ಷರಗಳು ಸರಿಯಾಗಿ ಕೊರೆಯದಿರುವುದರಿಂದ ಕಾಣುವುದಿಲ್ಲ. ಉಳಿದಂತೆ ಪ್ರತಿ ಚೆನ್ನಾಗಿದೆ.

—ಹಕರಾ

## 660

## ಗೀತಾ ಭಾರತ

ಆನಂದ ಯೋಗೀಶ್ವರ

| ಕೆ. ೮೯೪/೧ | | ಭಾಮಿನೀಷಟ್ಪದಿ |
|---|---|---|
| ೧೫.೯" × ೧.೪" | | ? |
| ೭ ಪತ್ರ | ೫ ಪಂಕ್ತಿ | ೭೦ ಅಕ್ಷರ |

**ಆದಿ :** ಶ್ರೀ ಗಣಾಧಿಪತಯೇ ನಮಃ|| ಗೀತಾ ಭಾರತ ಕಂನ್ನಡ ಷಟ್ಪದಿ ಪುಸ್ತಕಕೆ ನಿರ್ವಿಘ್ನಮಸ್ತು||

ಶ್ರೀಮದಖಿಳ ಮುನೀಶ್ವರ ಹೃ
ತ್ಸಾ.... ಮಧ್ಯದಲಿ ವಿಶ್ರುತಿಗಳ
ರಾಮಣೀಯ್ಯಕ ಮಸ್ತಕಗಳಿರ್ಪಬಿನಲಿ ಸಲೆ ನೆಲಸೀ
ಭೂಮಿಯನು ಪಾವನ ಮಾಡುವೊ
ಲಾ ಮಹರಥವನೆಸಗಿದ
ರಾಮ ಕೃಷ್ಣಕೃಪಾಳು ಹರಿ ರಕ್ಷಿಸುಗೆ ಮೂಜಗವಾ ||೧||

X X X

ಪರಶಿವಗೆ ವಂದಿಸಿ ಗಾಧಿಪಗೆ
ಯೆರಗಿ ಶಾರದಾದೇವಿಯನು ಹೃ
ತ್ಸರಸಿಜದಿ ನೆಲೆಗೊಳಿಶಿ ಸಕಲ ಕವೀಶ್ವರರ ನೆರೆ ಪೊಗಳಿ
ನಿರುತವಾನಂದಾತ್ಮ ಯೋಗೀ
ಶ್ವರರನು ಭಗವದ್ಗೀತೆಯನು ವಿ
ಸ್ತರಿಸಿದನು ಕಂನ್ನಡದಿ ಸಕಲ ಮುಮುಕ್ಷು ಜನನಲಿಯೇ ||೧೯||

**ಅಂತ್ಯ :** ಕಕ್ಕುಲಿತೆಯಿಂ ಕೆಟ್ಟು ಚಿತ್ತದಿ
ಸೊಕ್ಕಿ ಧರ್ಮದ ನೆಲೆಯ ಕಾಣದೆ
ಚಿಕ್ಕವನು ನಾನಿಂನ್ನ ಕೇಳುವ ಲೇಸದಾವುದನೂ
ಸಿಕ್ಕಲೀಯ್ಯದೆ ಹೇಳೆನಗೆ
ದಿಕ್ಕಿ ಕೋಮರ ಹೊಕ್ಕೆನೆಂನ್ನ....

**ವಿಷಯ :** ಶ್ರೀ ಕೃಷ್ಣನು ಅರ್ಜುನನಿಗೆ ಉಪದೇಶಿಸಿದ ತತ್ತ್ವಗಳು.

**ವಿಶೇಷ :** ಅಸಮಗ್ರ. ಎರಡನೆಯ ಸಂಧಿ ೭ ನೆಯ ಪದ್ಯದವರೆಗೆ ಮಾತ್ರವಿದೆ. ಗರಿಗಳ ಅಂಚುಗಳು ಮುರಿದು ಲುಪ್ತವಾಗಿವೆ. ಇದೇ ಕಟ್ಟಿನಲ್ಲಿ ಮೋಹನತರಂಗಿಣಿ ಯೆಂಬ ಇನ್ನೊಂದು ಗ್ರಂಥವಿದೆ. ಅಂಚುಗಳು ಮುರಿದುಹೋಗಿವೆ.

—ಕೆಆರ್ಎಸ್

## 661

ಕೆ. ೭೮೪/೨ **ಗುಂಡುಬ್ರಹ್ಮಯ್ಯಗಳ ಸುವ್ವಿ** ತ್ರಿಪದಿ

೧೪" × ೧.೩" ? ?

೧-೩೭ ಪತ್ರ ■ ಪಂಕ್ತಿ ೭೨ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆಂ ನಮಃ। ಗುಂಡು ಬ್ರಂಹ್ಮಯನ ಪುಸ್ತಕಕೆ ಶುಭಮಸ್ತು। ಶೋಭಾನಮಸ್ತು।

ಶ್ರೀ ಮಹಾದೇವನೆ ಸೋಮನ ನುಡಿದಭವ
ಕಾಮಿತಫಲವೀವಾ। ಕಾಮಿತಫಲವೀವಾಸಂಗ್ರಿ
........ ಪ್ರೇಮದಿಂದೆದ್ದು ಶರಣೆಂಬೆ ||೧||
ಮಲುಹಣ ಮ್ಯೆಯೂರ್ಯೆಯನು ಕಾಳಿದಾಸನ
ಛಲದಂಕ ಹಂಪೆಯ ಹರಿಯೂ। ಛಲದಂಕ ಹಂಪ್ಪೆಯ ಹರಿರಾಗವಂಕಗೆ
ಪಲವಿಂದ ನಮಿಸುವೆ ಮುದದಿಂದಾ XXX ||೨||
ನಾರಿಯ ನುಡಿಗೇಳಿ ಭಾರದ ಭವಗಳೂ ಬಂದು
ಸಾರದೊಳಗೆ ಮುಳಿಗಾಡಿ। ಸಾರದೋೞಗೆ ಮುಳಿಗಾಡಿ ಕರ್ಮದಲಿ
ನೇರಿ ಹೋದವರ ಕೋಟಿಯಲ್ಲಿ ||೬||

**ಅಂತ್ಯ :** ಗುಂಡು ಬ್ರಂಹ್ಮಯ್ಯನ ಕತೆಂಯು ಗಂಡು ಕಲಿಗಳು ಕೇಳು
ಗಂಡರಿಗೆ ಗಂಡ ಕಲಿವೀರ ಗಂಡರಿಗೆ ಗಂಡ ಕಲಿವೀರ ಭದ್ರನ
ಕಂಡದೊಳೊಯಿ....ದು ನಿಲಿಸಿದಾ ||೧೨||
ಯಿಾ ಕತೆ ಕಿವಿಗೊಟ್ಟು ಯೇಕಚಿತ್ತದಿ ಕೇಳಿ। ಬೇಕಾದ ಪಲವ ಬಯಸಾಲೂ
ಬೇಕಾದ ಪಲವ ಬಯಸಾಲು ಶಂಖರಾ। ಜೋಕೆಯಿಂದಿತ್ತು ಸಲಹೂವಾ ||೧೩||
ಭಕ್ತರ ಕತೆಯಿದು.... ಮಾಹಾತ್ಮೆಯಿದು। ಶಿವಭಕ್ತರು ಮೆರದ ಪಾವಾಡಾ।
ಶಿವಭಕ್ತರು ಮರದ ಪಾವಾಡವ ಕೇಳಿದರೆ। ಭಕ್ತಿಯಾವುದು ಪರವು ದೊರ
ಕುವುದು ||೧೪||
ಅಕ್ಷರಕತೆಯಿದು....ರು ಕಿವಿಗೊಟ್ಟು। ಸಾಧ್ಯವ ಕೇಳಿ ಫಲಉಂಟೂ।
ಸಾಧ್ಯವ ಕೇಳಿ ಫಲಉಂಟೂ ಕ್ಯೆಲಾಸದ। ಶಿವಭಕ್ತರ ಪಾದಕೆ ಶರಣಾರ್ತಿ ||೧೫||

ಅಂತು ಸಂಧಿ ೩ ಕ್ಕಂ ಪದ ೪೬೪ ಕ್ಕಂ ಮಂಗಳ ಮಹಾಶ್ರೀ ಶ್ರೀ

**ವಿಷಯ :** ಶಿವಶರಣ ಗುಂಡುಬ್ರಹ್ಮಯ್ಯನ ಚರಿತ್ರೆ.

**ವಿಶೇಷ :** ಗರಿಗಳ ಅಂಚು ಮುರಿದಿದೆ. ಸ್ಫುಟಾಕ್ಷರ. ಇದರೊಡನೆ ಪಾರ್ವತಿ ಕೊರವಂಜಿ ಮಹಿಮ್ನಸ್ತೋತ್ರ (ಸಂ), ಸದಾಶಿವ ಅಷ್ಟಕಂ(ಸಂ). ಶಂಭುಲಿಂಗ ಸ್ತೋತ್ರ ಮಂಗಳ(ತೆಲುಗು), ಬಿಲ್ವನಾಥೇಶ್ವರ ಚೂರ್ಣಿಕೆ(ತೆ) ಈ ಕೃತಿಗಳಿವೆ.

—ಎಸ್ ಎನ್ ಕೆ

## 662

## ಗುಂಡುಬ್ರಹ್ಮಯಗಳ ಸುವ್ವಿ

| ಕೆ. ೧೭೭೭ | ? | ತ್ರಿಪದಿ |
|---|---|---|
| ೯.೩" × ೧.೫" | | ? |
| ೧-೭೫ ಪತ್ರ | ೬ ಪಂಕ್ತಿ | ೨೮ ಅಕ್ಷರ |

ಆದಿ : ಶುಭಮಸ್ತು। ಗುಂಡ ಬ್ರಂಹ್ಮಯ್ಯನವರ ಸುವ್ವಿ। ಶ್ರೀ ಗಣಾಧಿಪತಯೇಂ ನ್ನಮಃ। xxx ಗುಂಡ ಬ್ರಂಹ್ಮೈಯ್ಯನವರ ಸುವ್ವಿ ಬರೆಯುವದಕ್ಕೆ॥ ಮಾಂಗಲ್ಯಮಸ್ತೂ॥ ಜಯನೂ।
ಶ್ರೀಮನ್ಮಹಾದೇವಾ। ಸೋಮನ ಸೂಡಿದ ಭಾವಾ
ಕಾಮಿತಫಲವೀವಾ। ಪಶುಪತಿಯೆ ಸಲಹೆಂದು
ಆ ಮಹಾಶಿವನಾ ಬಲಾಗೊಂಬೇ ॥೧॥
ಶ್ರೀಪತಿ ಪಾವಂನ್ನ। ಶ್ರೀಪತಿ ನಯನಾರ್ಚಿತನೆ।
ಶ್ರೀ ಪುಣ್ಯನಧಿಯಾ ಧರೀಶಿದಾ। ಪರಮೇಶ್ವರನೇ।
ಶ್ರೀ ಪಾದಕ್ಕೆ ಶರಣೂಶರಣೆಂಬೇ xxx ॥೫॥

ಅಂತ್ಯ : ಶೂಲಕ್ಕೆ ನಡೆದವರ ಲೀಲೆಯಾ ಕಥೆಯಿದೂ
ಸೂಲಗಾಳಿಲ್ಲಾ ಗೆಲುವಾದೊ। ಶರಣಾರೂ
ಕೈಲಾಸಕ್ಕೆ ಹೋದಾ ಕಥೇ ಯಿದೂ ॥೧೬೫॥
ಅಂತು ಸಂಧಿ ೩ ಕ್ಕಂ॥ ಪದನೂ ೫೭೬ ಕ್ಕಂ॥ ಜಯ ಮಂಗಳ ಮಹಾ ಶ್ರೀ ಶ್ರೀ॥ xxx ಪರೀದಾವಿ ನಾಮ ಸಂವತ್ಸರದ ಅಧಿಕ ಭಾದ್ರಪದ ಬ ೧ಳ ಸ್ಥಿರವಾದ ಪದ್ಮಮಿತ್ರ ಉದೆಯವಾದ ಘಳಿಗೆ ೨೧ ರಲ್ಲು ಅಭಿಜಿಂನ್ನ ಮುಹೂರ್ತ್ತದಲ್ಲಿ॥ ಗುಂಡಬ್ರಂಹ್ಮೈಯ್ಯನವರ ಕತೆ ಸಂಗೀತ ಸಂಪೂರ್ನ್ನ ಜಯಮಂಗೆಳ ಮಹಾ ಶ್ರೀ ಶ್ರೀ। ಬರದಾತನೂ॥ ಬಂಡಹಳ್ಳಿ ಉಪಾದ್ಯರು ನಂದ್ಯಪ್ಪೆಯನವರ ಪ್ರಥಮ ಪುತ್ರನಾದಂತ್ತಾ ನಂಜಪ್ಪೈಯ್ಯನು। ಶ್ರೀ ಮಾದೇಶ್ವರ ಸ್ವಾಮಿಾಯವರ ಬೆಟ್ಟದಲ್ಲು ಯಿರುವ। ಕುಂಬ್ಯಾರ ತಿಂಮ ರಾಯಶೆಟ್ಟ ಕುಮಾರಾನಾದಂತ್ತಾ। ರಾಮಶೆಟ್ಟಿಗೆ xxx ಬರದು ಕೊಟ್ಟ ಪ್ರತಿ ಜಯಮಂಗೆಳ ಮಹಾ। ಶ್ರೀ ಶ್ರೀ.

ವಿಷಯ : ಗುಂಡಬ್ರಹ್ಮಯ್ಯನ ಚರಿತ್ರೆ.

ವಿಶೇಷ : ಪ್ರತಿ ಚೆನ್ನಾಗಿಯೂ ಸಮಗ್ರವಾಗಿಯೂ ಇದೆ. ಸುಂದರಾಕ್ಷರ. ಕೊನೆಯಲ್ಲಿ ಮಂಗಳದ ಒಂದು ಪತ್ರ ಬೇರೆ ಇದೆ.

— ಎಂಪಿಎಂ

663

ಕೆ.ಎ. ೩೪೬/೩ **ಗುಂಡುಬ್ರಹ್ಮಯ್ಯಗಳ ಸುವ್ವಿ** ತ್ರಿಪದಿ
೧೩" × ೮" ? ?
೧-೮ ಪತ್ರ, ೧೯ ಪಂಕ್ತಿ ೧೮ ಅಕ್ಷರ

ಆದಿ : ಗುಂಡುಬ್ರಂಹ್ಮೆಯನ ಸುವ್ವಿ ಬರೆಯುವದಕ್ಕೆ ಶುಭಮಸ್ತು

ಶ್ರೀ ಪರುಷ ಪಾವಂನ್ನಾ ಪತಿಯನಾನರ್ಚಿಸುವೆ
ಶ್ರೀ ಪುಣ್ಯನದಿಯಾ ಧರಿಸಿದಾ ಸುವ್ವಿ।ಪರಮೇಶ್ವರನ
ಶ್ರೀಪಾದಕ್ಕೆ ನಾನು ಶರಣೆಂಬೇ ಸುವ್ವೀ ॥೧॥
ಶ್ರೀಮಂನ್ಮಹದೇವ ಸೊಮುವ ಸೂಡಿದ ಅಭವ
ಕಾವುತ ಪಶುಪತಿಯೇ ಸುವ್ವಿ ಸಲಹೆಂದು
ಆ ಮಹಾಸಿವನಾ ಬಲಗೊಂಬೇ ಸುವ್ವಿ ॥೨॥

**ಅಂತ್ಯ :** ಯಲ್ಲ ಶಕುನಂಗಳ ಬಲ್ಲವನಾದರೆ
ಪರದೇಸಿ ಬಂದರೆ ವುಣಲಿಸರೆ। ಸು। ಧರೆಯೊಳಗೆ
ಪಾತಕವು ಯಿದು ಯನುತಿದ್ದಾ। ಸುವ್ವಿ ॥೯೭॥

**ವಿಷಯ :** ಶಿವಶರಣ ಗುಂಡುಬ್ರಹ್ಮಯ್ಯನ ಚರಿತ್ರೆ.

**ವಿಶೇಷ :** ಅಸಮಗ್ರ. ಇದಕ್ಕೆ ಮುಂದೆ ಶುದ್ಧ ಪತ್ರಗಳಿವೆ. ಇದರೊಡನೆ ವೈದುನ ರಾಮಯ್ಯನ ಸುವ್ವಿ, ವರನಂದೀ ಕಲ್ಯಾಣ ಎಂಬ ಗ್ರಂಥಗಳಿವೆ.

—ಬಿಎಸ್ಎಸ್

## 664

ಕೆ. ೭೦೯ **ಗುಂಡುಬ್ರಹ್ಮಯ್ಯನ ಚರಿತ್ರೆ** ತ್ರಿಪದಿ
೧೦.೫" × ೧.೫" ? ?
೪೫ ಪತ್ರ ೮ ಪಂಕ್ತಿ ೫೪ ಅಕ್ಷರ

**ಆದಿ :** ಶ್ರೀ ಗುರುಭ್ಯೋ ನಮಃ। ಶೋಭನಮಸ್ತು। ಗುಂಡುಬ್ರಂಹ್ಮೈಯನವರ ಚರಿತೆಯ ಬರೆವುದಕ್ಕೆ ಶುಭಮಸ್ತು।

ಪದ॥ ಸಿರಿಯುಳ್ಳ ಶಿವರಾಯ ಧರೆಗೆ ಕಳುವರೆ ಬಂದು।
ಶರಣರೊಂದಾಗಿ ಮೊರೆದಸೂ॥
ಶರಣರೊಂದಾಗಿ ಮೆರೆದಸಂ ಗುರುರಾಯ ಶ್ರೀಗಿರಿವರದ ಪುಣ್ಯಕಥೆಗಳನೂ ॥೧॥

**ಅಂತ್ಯ :** ಸತ್ಯರ ಕಥೆಗಳನರ್ತಿಯಿಂದ ಕೇಳಿದರೆ।
ಮುಕ್ತಿ ಫಲಪದವಿ ದೊರಕುವದೂ॥
ಮುಕ್ತಿ ಫಲಪದವಿ ದೊರಕುವದು ಲೋಕದ ಶಿವಭಕ್ತರೆಲ್ಲರಿಗೆ ಶರಣಾರ್ತಿ ॥೧೫೭॥

ಅಂತು ಸಂಧಿ ೩ ಕ್ಕಂ ಪದನು ೫೬೫ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

**ವಿಷಯ :** ಗುಂಡುಬ್ರಹ್ಮಯ್ಯನ ಚರಿತ್ರೆ.

**ವಿಶೇಷ:** ಗ್ರಂಥದ ಕೊನೆಯಲ್ಲಿ ಕೆಲವು ಪತ್ರಗಳು ಅಸ್ತವ್ಯಸ್ತ. ಕೆಲವು ಪತ್ರ ಶಿಥಿಲ. ಗ್ರಂಥ ಕೊನೆಗೊಳ್ಳುವ ಎರಡು ಪತ್ರಗಳಿವೆ.

—ಎಸ್‌ಬಿ

## 665

ಕೆ. ೧೦೯೫/೬ **ಗುಮ್ಮಟಯ್ಯಗಳ ಶತಕ (ಅರ್ಧೇಂದುಮೌಳಿ ಶತಕ)** ವೃತ್ತ

೮.೬" × ೨" ಗುಮ್ಮಟಾರ್ಯ ಸು. ೧೫೦೦

೧೫೨-೧೬೫ ಪತ್ರ ೯ ಪಂಕ್ತಿ ೨೬ ಅಕ್ಷರ

**ಆದಿ:** ಶ್ರೀ ಗುರು ಬಸವಲಿಂಗಾಯ ನಮಃ|| ಗುಮ್ಮಟಯ್ಯಗಳ ಶತಕ||
ಶ್ರೀಮತ್ಸರ್ವೇಶ ಲೋಕತ್ರಯ ಜಗನ್ನಾಥ ಚಿದ್ರೂಪನಿತ್ಯ
ವ್ಯೋಮಕಾರತ್ವದೆ ಯೋಂನತೆಯನುದಿನಂ ಬಂಣಿಸುತಂ ತಮೆದಶಾ
ತಾಮಾರ ಕೋಟಿ ಕಲ್ಪಂಗಳುಳಮರ ಫಣೀಂದ್ರರ್ಕಳೆಂಬನರಂನ್ಯ
ಶ್ಯಾಮಾನ್ಯರ್ಮರ್ತ್ಯರೆಂಬಂಣಿ ಪರತಿ ಮುದದಿಂನಂ ಸಿಂಧುನರ್ಧೇಂದು
ಮೌಳೀ ||೧||

**ಅಂತ್ಯ:** ಇವನೊಲ್ದೋದುತ್ತಿರಲ್ಕೇಳ್ದ ಹತಂವಿಷಮುಂ ವ್ಯಾಘ್ರಸಿಂಹಾದೀಗಳ ರೌ
ದ್ರವನುಗ್ರವ್ಯನರಂ ಕ್ರೂರತೆಯನಲಿರ್ಜಡ ಜಾಡ್ಯಮುಂ ವೈರಿಗಳ ವೈ
ರವನುರ್ವಿಪಾಲರಂ ನ್ಯಾಯಮುನುಳಿವರದೀಶಾನ ನಿನ್ನಾಜ್ಞೆದುರ್ಬ್ಬೋ
ದವನ ದುರುಬ್ಬೋದರ್ಕಶಲ್ಯಮುನುಳಿಯೆ ಶದರಕ್ಕೇಳ್ವುದತ್ಯಂತ ಶುದ್ಧಾ
||೧೦೬||
ಸುರುಪ್ರಂ ಸೋಮನಾಥಂ ಪ್ರಭುಗಿರೆ ಶಪದಕ್ಷೇ ವಿತಂ ಚಿತ್ತಭಕ್ತಿ
ಶ್ರೀರಾಮುಂ ಗುಂಮ್ಮಟಾರ್ಯಂ ವಿರಚಿತಮೆನಿಪರ್ಧೇಂದುಮೌಳಿಸ್ತವಾಖ್ಯಂ
ಶೌರಂ ಶೈಮುಗಯೋಕ್ತರಿ ಸಮುದಮನಿಯತಾರ್ಥ ಪ್ರದಂ ಭಕ್ತಿಯಿಂದೊ
ಲ್ದಾರಾನುಂ ನಿಚ್ಚ ನಿಚ್ಚಂ ಪಠಿಯಿಸಿದವರ್ಗಕ್ಕುಂ ವಿಶಿಷ್ಟಾರ್ಥಸೌಖ್ಯಂ
||೧೦೮||
ಅರ್ದ್ಧೇಂದು ಮೌಳಿಯ ಶತಕ ಸಮಾಪ್ತ ಮಂಗಳ ಮಹಾಶ್ರೀ||

**ವಿಷಯ:** ಅರ್ಧೇಂದುಮೌಳಿಯ ಸ್ತುತಿ.

**ವಿಶೇಷ:** ಇದೇ ಕಟ್ಟಿನಲ್ಲಿ ಬಸವ ಸ್ತೋತ್ರದ ತ್ರಿವಿಧಿ ಮೊದಲಾದ ೧೯ ಕೃತಿಗಳಿವೆ. ಕೃತಿಯ ಆದಿಯಲ್ಲಿ ಗುಮ್ಮಟಯ್ಯಗಳ ಶತಕ ಎಂದಿದೆ. ಅಂತ್ಯದಲ್ಲಿ ಮತ್ತು ವೃತ್ತಗಳ ಕೊನೆಯಲ್ಲಿ ಅರ್ಧೇಂದು ಮೌಳೀ ಎಂದಿದೆ. ಶಕಟರೇಫವಿದೆ.

—ವೈಸಿಬಿ

666

ಕೆ. ೧೭೫೦/೨೨ **ಗುಮ್ಮಟಯ್ಯಗಳ ಶತಕ (ಅರ್ಧೇಂದುಮೌಳಿ ಶತಕ)** ವೃತ್ತ
೧೦.೨" × ೧.೯" ಗುಮ್ಮಟಾರ್ಯ ಸು. ೧೫೦೦
೧೧೧-೧೨೧ ಪತ್ರ ೧೦ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಗುಂಮಟ ಶತಕ||
ಮಹಾಶ್ರಗ್ಧರ ವೃತ್ತಂಗಳು||
ಶ್ರೀಮತ್ಸರ್ವೇಶ ಲೋಕತ್ರಯ ಜನಕ ಜಗಂನಾಥ ಚಿದ್ರೂಪ ನಿತ್ಯ
ವ್ಯೋಮಾಕಾರ ತ್ವದಿಯೋನತಿಯನನುದಿನಂ ಬಂಣಿಸುತಂತಮೆಯ್ದ
ಲಾಮಾಜಲ್ಕೋಟಿ ಕಲ್ಪಂಗಳೊಳಮರ ಫಣೀಂದ್ರರ್ಕಳೆಂಬಂನರನ್ಯ
ಸಾಮಾನ್ಯರ್ಮರ್ತ್ಯರೇ ಬಂಣಿಪರತಿ ಮುದದಿಂ ನಿಂಮನರ್ದ್ಧೇಂದು ಮೌಳಿ
||೧||

**ಅಂತ್ಯ :** ಸೌರಾಷ್ಟ್ರಂ ಸೋಮನಾಥಂ ಪ್ರಭುಗಿರಿಶ ಪದಾಕ್ಷೇಪದಿಂ ಚಿತ್ತಭಕ್ತಿ
ಶ್ರೀರಾಮಂ ಗುಂಮುಟಾರ್ಯ ವಿರಚಿತಮೆನಿಪರ್ದೇಂದು ಮೌಳಿಸ್ತವಾಖ್ಯಂ
ಶೌರಂ ಶೈವಾಗಮೋಕ್ತಂ ಶಮ ದಮ ನಿಯತಾರ್ತ ಪದಂ ಭಕ್ತಿಯಿಂದೊ
ಲಾರಾನುಂ ನಿಚ್ಚನಿಚ್ಚಂ ಪಠಿಯಿಸಿದವರ್ಗಕ್ಕುಂ ವಿಶಿಷ್ಟಾರ್ಥಸೌಖ್ಯಂ
||೧೦೮||

ಕಂದ|| ಯಿಾ ಶತಕವ ಪೇಳಿದವರ್ಗ್ಗಂ
ಶಶ್ವಾತನಂ ಗುಂಮಟಾರ್ಯ ಶಿವನೊಲಿದಾಗಂ
ಲೇಸಾಗಿಯೆ ವೋದಿ ಪಠಿಯಿಸಿ
ಯಿಾಶನೊಳಗೆ ಬೆರದು ಮುಕ್ತಿಪಡೆವದು ಸಜನರು||
ಅರ್ಧೇಂದುಮೌಳಿಯು ಶತಕ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ವೀರಶೈವತತ್ತ್ವಗಳನ್ನೊಳಗೊಂಡಿರುವ ಸ್ತುತಿ.

**ವಿಶೇಷ :** ಸಮಗ್ರವಾಗಿದೆ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಬಸವ ಸ್ತೋತ್ರದ ತ್ರಿವಿಧಿ, ಮಿಶ್ರಸ್ತೋತ್ರದ ತ್ರಿವಿಧಿ, ಶಂಕರದೇವರ ಕಂದ ಇವೇ ಮೊದಲಾದ ೨೮ ಕೃತಿಗಳಿವೆ.

—ವೈಸಿಬಿ

667

ಕೆ.ಬಿ. ೬೬೬/೩ **ಗುರುಕರುಣಾಮೃತ** ಭೋಗಷಟ್ಪದಿ
೬" × ೪" ? ?
೮-೧೭ ಪತ್ರ ೮ ಪಂಕ್ತಿ ೧೮ ಅಕ್ಷರ

**ಆದಿ :** ಗುರುಕರುಣಾಮೃತ ಬರೆಯುವದಕ್ಕೆ ಪ್ರಾರಂಭ
ಗುರುವೆ ಯನಗೆ ಮೋಕ್ಷಮಾರ್ಗ
ದಿರವುದೊರೆವ ಪರಿಯಾ ಪೇಳಿ
ಅರಿಯಬಾರದೆನಗೆ ಅದರ ತೆರನಾ ಕರುಣಿಸೂ ||ಪ||

ಗುರುವೆ ಜಯತು ಯಂನ ಕಲ್ಪ
ತರುವೆ ಜಯತು ಯಂನಾ ಭಾಗ್ಯ
ದಿರವೆ ಜಯತು ಜಯತು ಯಂನೊಳರುಹಿನಾ
ತರುವೆ ಜಯತು ಯಂನಾ ಪರಮ
ತರುವೆ ಜಯತು ಯಂನಾ ಮನದ
ಮರವೆಯಂನು ಗೊರಡಗಟ್ಟಿ ದೇವರಕ್ಷಿಸೂ ||೧||

**ಅಂತ್ಯ :** ಶರಣು ಶರಣು ಪಾಪನಾಶ
ಶರಣು ಶರಣು ಚಿತ್ರಕಾಶ
ಶರಣು ಶರಣು ಭಕ್ತಗೋತ್ರ ಮುಂನ್ಮನಾಂಬುಜಾರ್ಕ ಸಂತತ
ಶರಣು ಶರಣು ಘನಚರಿತ್ರ
ಶರಣು ಶರಣು ಷಡುಸ್ಥಲಾರ್ಯ ಚಂನಬಸದೇವ ದೇಶಿಕಾ ||೩೩||
ಯಿತಿ ಗುರುಕರುಣಾಮೃತ ಸಂಪೂರ್ಣ.

**ವಿಷಯ :** ಬೋಧಾತ್ಮಕ ಹಾಗೂ ನೀತಿ ಪದ್ಯಗಳು.

**ವಿಶೇಷ :** ಸಮಗ್ರ. ತೆಳುವು ಕಾಗದ. ಪತ್ರದ ಎರಡು ಕಡೆಗಳಲ್ಲಿ ಬರಹವಿದೆ. ಗ್ರಂಥದ ಅಂತ್ಯದಲ್ಲಿ "ಮಲ್ಲಿಕಾರ್ಜುನಾರಾಧ್ಯನ ಪುಸ್ತಕಉ" ಎಂದಿದೆ. ಇದೇ ಪುಸ್ತಕದಲ್ಲಿ ಗಿರಿಜಾಸ್ತೋತ್ರ, ಸುದ್ಗುರು, ಚೀಲಾಳ ಸ್ತೋತ್ರ ಹಾಗೂ ಹಾಡು, ಲಾವಣಿ ಎಂಬ ಕೃತಿಗಳಿವೆ.

—ಕೆಆರ್ಎಸ್

## 668

ಕೆ. ೧೪೬೩ | **ಗುರುಕರುಣಾಮೃತ** | ಭೋಗಪಟ್ಪದಿ
೭.೨" × ೧.೭" | ? | ?
೬-೧೯ ಪತ್ರ | ೬ ಪಂಕ್ತಿ | ೨೬ ಅಕ್ಷರ

**ಆದಿ :** ಶ್ರೀಮಾನ್ ಮಹಪಾಲಲೋಚನ ಪ್ರಸಂನ್ನಯ ನಮಃ ಶ್ರೀರಸ್ತು|| ಗುರು ಕರುಣಾಂಮೃುತ್ತ ಬರೆಯುವದಕೆ ನಿರ್ವಿಘ್ನಮಸ್ತು ಶುಭಮಸ್ತು|| ರಾಗ ಭೋಗ ಷಟ್ಪತ್ತಿ||

ಗುರುವೆ ಯನಗೆ ಮೋಕ್ಷ ಮಾರ್ಗ್ಗ
ದಿರವು ದೊರೆವ ಪರಿಯು ಪೇಳಿ
ಅರಿಯು ಬಾರದೆನಗೇ ಅದರಾ ತೆರನಾ ಕರುಣೀಸೂ
ಗುರುವೆ ಜಯತು ಯಂನ ಕಲ್ಪ
ತರುವೆ ಜಯತು ಯಂನ್ನಾ ಭಾಗ್ಯ
ದಿರವೆ ಜಯತೂ ಜಯತೂ ಜಯತೂ ಯಂನೊಳರುಹೀಸಾ
ಕರುವೆ ಜಯತೂ ಯಂನ್ನಾ ಪರಮಾ
ಚರವೆ ಜಯತೂ ಯಂನ್ನಾ ಮನದಾ
ಮರವೆ ಯಂನ್ನು ಹೊರಡು ಗುಟ್ಟಿ ದೇವ ರಕ್ಷಿಸೂ ||೧||

**ಅಂತ್ಯ:** ಶರಣು ಶರಣು ಪಾಪಾನಾಶಾ
ಶರಣು ಶರಣು ಚಿತ್ಪ್ರಕಾಶಾ
ಶರಣು ಶರಣು ಭಕ್ತಿ ಘತ್ರಾ ಮನ್ಮಾನಾ ಭುಜಾರ್ಕ್ಕ ಸಂತಾತಾ
ಶರಣು ಶರಣು ಘನ ಚಾರಿತ್ರಾ
ಶರಣು ಶರಣು ಭಕ್ತಿ ಪಾತ್ರಾ
ಶರಣು ಶರಣು ಷಡುಸ್ಥಾಲಾರ್ಯಾ ಚೆಂನಬಸವಾರಾಜ ದೇಶಿಕಾ ||೩೩||
ಗುರುಕರುಣಾಂಮೃತ ಸಂಪುರ್ನ ಮಂಗಳ ಮಾಹಃ ಶ್ರೀ.

**ವಿಷಯ:** ವೇದಾಂತ.

**ವಿಶೇಷ:** ಸಮಗ್ರ. ದಪ್ಪಕ್ಷರ.

—ಕೆಆರ್ಎಸ್

## 669

| ಕೆ. ಎ. ೫೧೭/೨ | **ಗುರುದತ್ತ ಚರಿತೆ** | ಸಾಂಗತ್ಯ |
|---|---|---|
| ೧೦.೫" × ೯" | ದೇವರಸ | ಸು. ೧೬೫೦ |
| ೨೫-೯೫ ಪುಟ | ೨೦ ಪಂಕ್ತಿ | ೨೬ ಅಕ್ಷರ |

**ಆದಿ:** ಶ್ರೀ ವೀರನಾಥಾಯ ನಮಃ ಶುಭಮಸ್ತು
ಶ್ರೀ ಸುರಪತಿ ವಿನಮಿತ ಪದಬಿಸಜರೌ
ಶೇಶತರಣಿನಿಭ ಕಿರಣ
ಭಾಸುರಾಮಲಗುಣ ಗಣಯುತ ನಾದಿಜಿ
ನೇಶ ಪಾಲಿಸೊ ಮುಕ್ತಿ ಪದವ
ಅಲಘು ಭಕುತಿ ಭರದಿಂದಿರಗುವೆನಾ
ನಲವರ್ಕ್ಕಿಯಂತೆ ಕೈವಲ್ಯ

ಲಲನೆಯನೆಬ್ಬಿಸಿದಜಿತಜಿನಪನ ಸ
ಲ್ಲಲಿತಾಂಘ್ರಿ ಸರಸಿಜಗಳಿಗೆ

**ಅಂತ್ಯ :** ಇಂಬಿನಿಂದಿದರೋದಿದವರಿದರರ್ಥವ
ನುಂ ಬಣ್ಣಿಸಿ ಪೇಳ್ವವರು
ಸಂಭ್ರಮದಿಂ ಕೇಳ್ವರು ಬಾಳಲಿ ಶಶಿ
ಕುಂಭಿನಿಯುಳ್ಳನ್ನೆವರ
ಇದು ಸಾರಸುಖವ ಸಂತತವೀವ ಕೈವಲ್ಯಾ
ಸುದತಿಗೆರೆಯು ತಾನಾದಾ
ಸದಮಲ ಪುಣ್ಯಪುರುಷನ ಚಾರಿತ್ರವಿಂ
ತಿದನುಭವ್ಯರು ಪಾಲಿಪುದು
ಶ್ರೀಮುಖ ಸಂವತ್ಸರದ ಕಾರ್ತಿಕ ಶುದ್ಧ ೧ ಲ್ಲು ಉಂಮ್ಮತ್ತೂರ್ ಹೊಸಬ
ಸತಿಯ ವರ್ಧಮಾನ ಸ್ವಾಮಿಯವರ ಬಸತಿಯಲ್ಲಿ ವರ್ಧಮಾನ ಶಿಖಾವಳಿಗೆ
ಜೋಯಿಸರ ಸೂರಯ್ಯನು ಬರದ ತ್ರಿಪುರದಹನ ಸಾಂಗತ್ಯ ಗುರುದತ್ತ
ಚರಿತೆ ಸಮಾಪ್ತಃ

**ವಿಷಯ :** ಗುರುದತ್ತನ ಚರಿತ್ರೆ.

**ವಿಶೇಷ :** ಪ್ರತಿ ಉತ್ತಮವಾಗಿದೆ ೯೧ ರಿಂದ ಮುಂದಿನ ಎರಡು ಪತ್ರಗಳಲ್ಲಿ ಕೆಲವು
ವರ್ಣನಾತ್ಮಕ ಪದ್ಯಗಳಿವೆ.

—ಹಕರಾ

## 670

| ಕೆ. ೧೧೨೬/೨ | **ಗುರುನಂಜುಂಡನ ಪದಗಳು** | ಹಾಡುಗಳು |
|---|---|---|
| ೭.೨″ × ೧.೮″ | ನಂಜುಂಡ | ? |
| ೧-೨೨ ಪತ್ರ | ೧೦ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀಗುರುವೆ ಗತಿ॥ ಪಲ್ಲ
ಅಂಗೈಕಿ ಪರಬ್ರಂಹ್ಮವ ಗೆಲಿದರು ಶಿವ
ಲಿಂಗೈಕ್ಯಕ್ಯರು ನೋಡೆಮ್ಮವರಣ್ಣ॥
ಪದ॥ ಕಾಲನ ಗೆಲಿದಾದು ಲೀಲೆಯಿಂದಾಡುವ
ಶೂಲಧರನ ಭಕ್ತರೆಮ್ಮವರು
ಹಾಳುಮಾಡಿ ಹುಲಿಗೆರೆಯಲ್ಲಿ ಜೈನರ
ಗೋಳುಗುಟ್ಟಿಸಿದವರೆಮ್ಮವರಣ್ಣ ॥೧॥

**ಅಂತ್ಯ :** ಯಿಂತು ಸುಖದುಃಖಗಳಿರೆ ಸೋತು ಮನ
ಭ್ರಾಂತುಗೊಂಡಿರಲಿ ಬೇಡಾ ಮರುಳೆ

ಸಂತೋಷದಿಂದರ್ಚಿಸೂ ಮನ
ಸಾಂತಕ ಗುರು ನಂಜುಂಡನ ಪದವಾ ಮರುಳೆ ||೩||

**ವಿಷಯ :** ವೈರಾಗ್ಯ ಪ್ರತಿಪಾದನೆ.

**ವಿಶೇಷ :** ಇದೇ ಕಟ್ಟಿನಲ್ಲಿ ಶಿವಕವಚ, ಹಾಡುಗಳು, ಘನಲಿಂಗಿದೇವರ ವಚನಗಳಿವೆ.

—ಜಿಜಿಎಂ

## 671

ಕೆ.ಎ. ೩೭೯ | **ಗುರುಪಂಚವಿಂಶತಿ** | ಷಟ್ಪದಿ

೧೨.೩" × ೧೦" | ? | ?

೧-೭ ಪತ್ರ | ೨೪ ಪಂಕ್ತಿ | ೨೨ ಅಕ್ಷರ

**ಆದಿ :** ಗುರು ಪಂಚವಿಂಶತಿಯ ಬರೆಯುವುದಕ್ಕೆ ಶುಭಮಸ್ತು|| ಉದಯರಾಗ||
ಶ್ರೀಮದನ ದಹಿತ ಭಸಿತಂ ಭೂಷಭವಹರನೆ
ಸ್ವಾಮಿಜನ ಭಕ್ತವತ್ಸಲ ಭಾಳನೇತ್ರಾನು
ಕೋಮಲೆಗೆರೆವ್ಯೆಯ್ಯಾ ನಿತ್ತ ಗಂಗಾ(ಧ)ರನಂ ಸ್ವಾಮಿರ್ಸತ್ತ್ರಯರ್ಾ ಪ್ರೇಮಿಾ
ರೋಮ ಕೂಪದೊಕ್ಕೆಳ ಸೋಮಭುವನವ ತಾಳ್ವ
ಯೋಮ ಕತ್ತಿತನಗಣಿತ ಮಹಿಮನಂ ಜಗವಂದ್ಯೋ
ಸೋಮಾರ್ಕ ಜೂಟಪಂಚಾನನಂ ಪರಶಿವಂ ಪಾವನಂ ಚರಿತಪಾಹಿ ||೧||
ಮಹಿಮ ನಂಮ ಬಹಣನೂ ಸಿವಕವಿಯು ಹರಿದೇವ
ಸವಿನುಡಿಯ ಕಾಳಿದಾಸನು ಕೆರೆಯ ಪದ್ಮರಸ
ಕವಿರಾಘವಾಂಕನುಭಟಕೇಸಿರಾಜನಂ ಪಾಲ್ಕುರಿಕೆ ಸೋಮೇಶನಂ
ಸಿವಲೀಲೆ ಚಾಮರಸ ವಿದು ಹಲಾಯುಧಂ
ಭೂಮಂನದೊಳ್ಕಳೆಯರಾಜರ ಪಾದಪಂಕಜನ
ತವೆ ಹರುಷದಿಂ ನೆನೆದು ಸುಖಿಯಾಗಿ ಬಾಳ್ವುದೀ ಗುರುಪಂಶವಿಂಶತಿಯಲ್ಲಿ ||೬||

**ಅಂತ್ಯ :** ದೇವ ಜಯತು ತ್ರಿಜಗದಾಕಾರನೆ
ದೇವ ಜಯ ಜಯತು ತ್ರಿಪುರನೀ ಮೂಲನೆ
ದೇವ ಜಯ ಜಯತು ತ್ರಿಯಾಗ್ನಿ ನೇತ್ರನೆ
ದೇವ ಜಯ ಜಯತು ನರರಕ್ಷಕನೆ
ದೇವ ಜಯ ಜಯತು ದಾನವರ ಮಡುಹಿದಯ್ಯಾನೆ
ದೇವ ಜಯ ಜಯತು ಧಾತಾಬ್ಜ ಸಿರವರಿದನೆ
ದೇವ ಜಯ ಜಯತು ಭಕ್ತಹೃದಯವಾಸನೆ
ದೇವ ಮದ್ಗುರುವೆ ಶರಣು ಶರಣಾರ್ಥಿ ಶ್ರೀ ||೨೫||

**ವಿಷಯ :** ತತ್ವಬೋಧೆ.

**ವಿಶೇಷ :** ಮದರಾಸು ಪ್ರಾಚ್ಯಕೋಶಾಗಾರದಲ್ಲಿ 1958 ರಲ್ಲಿ ಶ್ರೀ ಕೆ. ಶ್ರೀನಿವಾಸಾಚಾರ್ಯರಿಂದ ಪ್ರತಿಮಾಡಲಾಗಿದೆ.

—ಬಿಎಸ್ಎಸ್

## 672

| ಕೆ.ಎ. ೪೨೩/೮ | **ಗುರುಪಂಚವಿಂಶತಿ** | ಹಾಡು |
|---|---|---|
| ೮.೪" × ೧೨.೮" | ? | ? |
| ೩೨-೪೦ ಪುಟ | ೨೬ ಪಂಕ್ತಿ | ೧೭ ಅಕ್ಷರ |

**ಆದಿ :** ಗುರು ಪಂಚವಿಂಶತಿ ಬರೆವುದಕ್ಕೆ ಮಂಗಳಾ ಉದಯರಾಗ
ಶ್ರೀ ಮದನದವಿತ ಭಸಿತಂ ಭೂಷಣ ಭಸಹರವೆ
ಸ್ವಾಮಿ ಜನಭಕ್ತಿ ವತ್ಸಲ ಭಾಳನೇತ್ರನಂ
ಕೋಮಲಗೆರವ್ಯೈಯ್ಯನೀಶ ಗಂಗಾರನಂ
ಸ್ವಾಮಿರ್ಸತ್ತ್ರಯರ್ಾ ಪ್ರೇಮೀರೋಮ ಕೂಪದೊಳಕ್ಕೇಳು
ಸೋಮ ಭುವನವ ತಾಳ್ದಯೋಮ ಕತ್ತ್ರಿತ ಗಣಿತ ಮಹಿಮನಂ
ಸೋಮಾರ್ಕಜೂಟ ಪಂಚಾನನಂ ಪರಶಿವಂ ಪಾವನ ಚರಿತನಾಹಿ ||೧||

**ಅಂತ್ಯ :** ದೇವ ಜಯತು ತ್ರಿಜಗಧಾರನೆ
ದೇವ ಜಯ ಜಯತು ತ್ರಿಪುರ ನಿರ್ಮೂಲನೆ
ದೇವ ಜಯ ಜಯತು ತ್ರಯಾಗ್ನಿನೇತ್ರನೇ
ದೇವ ಜಯ ಜಯತು ನರರಕ್ಷಕನೆ
ದೇವ ಜಯ ಜಯತು ದಾನವ ಮಡಹಿದ್ವೈಯ್ಯನೆ
ದೇವ ಜಯ ಜಯತು ಧಾತಾಬ್ಜ ಸಿರವರಿದನೆ
ದೇವ ಜಯ ಜಯತು ಭಕ್ತ ಹೃದಯವಾಸನೆ
ದೇವ ಮದ್ಗುರುವೆ ಶರಣು ಶರಣಾರ್ಥಿ ||೨೫||

**ವಿಷಯ :** ಶಿವಲೀಲೆಗಳ ವರ್ಣನೆ.

**ವಿಶೇಷ :** ಇದೇ ಪುಸ್ತಕದಲ್ಲಿ ಹರಗಣಮಾಲೆ, ಗಣಸಹಸ್ರನಾಮ, ಮಲ್ಲಿಕಾಮಾಲೆ ಇತ್ಯಾದಿ ೧೯ ಕೃತಿಗಳಿವೆ.

—ವೈಸಿಬಿ

## 673

ಕೆ.ಎ. ೫೬೮/೭ **ಗುರುಪಂಚವಿಂಶತಿ** ಹಾಡು
೧೨" × ೯.೮" ? ?
೫೧-೫೬ ಪುಟ ೨೪ ಪಂಕ್ತಿ ೧೯ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ। ಶುಭಮಸ್ತು। ಗುರುಪಂಚವಿಂಶತಿಯು ಬರೆವುದಕೆ ಶುಭಮಸ್ತು। ಉದಯರಾಗ
ಶ್ರೀ ಮದನ ದಹಿತ ಭಸಿತಂ ಭೂಷಭವ ಹರನೆ
ಸ್ವಾಮಿಜನ ಭಕ್ತವತ್ಸಲ ಭಾಳನೇತ್ರಾನಂ
ಕೋಮಲೆಗೆರವ್ವೈಯ್ಯನಿತ್ತ ಗಂಗಾರನಂ
ಸ್ವಾಮಿ.... ರೋಮ ಕೂಪದೊಳಕ್ಕಿಳ
ಸೋಮಭವನವ ತಾಳ್ದ
ಯೋಮ ಕತಿತನಗಣಿತ ಮಹಿಮನೆ ಜಗವಂದ್ಯ
ಸೋಮಾರ್ಕಕೋಟಿ ಪಂಚಾನನಂ ಪರಶಿವಂ ಪಾವನ ಚರಿತಪಾಹಿ ||೧||

**ಅಂತ್ಯ :** ದೇವ ಜಯತು ತ್ರಿಜಗದಾಕಾರನೆ
ದೇವ ಜಯತು ತ್ರಿಪುರ ನಿರ್ಮೂಲನೆ
ದೇವ ಜಯ ಜಯತು ತ್ರಿಯಗ್ನಿನೇತ್ರನೆ
ದೇವ ಜಯ ಜಯತು ನರರಕ್ಷಕನೆ
ದೇವ ಜಯ ಜಯತು ದಾಸವರ ಮಡುಪಾದ್ಯೆಯ್ಯನೆ
ದೇವ ಜಯ ಜಯತು ದಾತಾಬ್ಜ ಸಿರವರಿದನೆ
ದೇವ ಜಯ ಜಯತು ಭಕ್ತ ಹೃದಯವಾಸನೆ
ದೇವ ಮದ್ಗುರುವೆ ಶರಣು ಶರಣಾರ್ಥಿ ||೨೫||

**ವಿಷಯ :** ಗುರುವಿನ ಸ್ತೋತ್ರ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಶಿವಶರಣಾಷ್ಟಕ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

## 674

ಕೆ.ಎ. ೩೫೧ **ಗುರುಬೋಧಾಮೃತ** ಸಾಂಗತ್ಯ
೧೩" × ೮.೩" ಚರಮೂರ್ತಿಬಸವ ೧೯೧೬
೧-೧೩೦ ಪತ್ರ ೨೦ ಪಂಕ್ತಿ ೧೨ ಅಕ್ಷರ

**ಆದಿ :** ಗುರುಬೋಧಾಮೃತ XXX ಶ್ರೀ ಶಾಲಿವಾಹನ ಶಕ ೧.೮೩೮ ನೆಯ ನಳನಾಮ ಸಂವತ್ಸರದ ಮಾಘ ಬಹುಳ ೧೦ ಶುಕ್ರವಾರ ಮಧ್ಯಾಹ್ನ

೧೧-೧೧।। ಘಂಟೆ ಸಮಯದಲ್ಲು।।.... ಗುರುಬೋಧಾಮೃತವೆಂಬ ಪುಸ್ತಕಸಂ ಬರೆಯುವುದಕ್ಕೆ ಶುಭಮಸ್ತು। ಸಿದ್ಧಿರಸ್ತು। ಶ್ರೀರಸ್ತು।।
ರಾಗ।। ಸಾಂಗತ್ಯ ತಮ್ಮಿಚ್ಛಿ।।
ಶ್ರೀ ಗುರುವರ ಪ್ರಸಾದೇಶ ಪಾವನಮೂರ್ತಿ
ಶ್ರೀಗುರು ನಿತ್ಯ ನಿರ್ಗುಣನೇ
ಶ್ರೀಗುರು ಯಮಿ ಹೃತ್ಕಮಲ ದಿವಾಕರ
ಶ್ರೀಗುರು ಸಲಹು ಮೂಜಗವ ।।೧।।

**ಅಂತ್ಯ :** ಗುರು ಚನ್ನಬಸವನ ಕರಕಮಲೋದ್ಭವಂ
ಚರಮೂರ್ತಿ ಬಸವನಿಂ ಕೃತಿಯು
ಸ್ಥಿರಮಾಯ್ತು ಸಜ್ಜನರೋದಿ ಮೆರಸುವುದು
ಗುರುಕೃಪೆಯಿಂ ಭೂತಳದೊಳು ।।೯೩।।
ಗುರು ಪ್ರಸಾದೇಶ್ವರಂ ತೆರಳಿದನೆಂಬಲ್ಲಿಗೆ ಹನ್ನೊಂದು ಸಂಧಿಯಿಂ ೧೨೧೩ ಪದ್ಯಂಗಳಿಂ ಗುರುಬೋಧಾಮೃತವೆಂಬ ಕನ್ನಡಗ್ರಂಥ ಪರಿಸಮಾಪ್ತಿಯಾದುದು ಶ್ರೀ XXX ಶ್ರೀ ಶಾಲಿವಾಹನ ಶಕ ೧೮೩೯ ನೇ ಪಿಂಗಳ ನಾಮ ಸಂ।।ರದ ಚೈತ್ರ ಶುದ್ಧ ೮ ಶುಕ್ರವಾರ ಮಧ್ಯಾಹ್ನ ೧-೧।। ಘಂಟೆ ಸಮಯದಲ್ಲಿ ಗ್ರಂಥ ಸಮಾಪ್ತಿಯಾದುದು.

**ವಿಷಯ :** ವೀರಶೈವ ಸಿದ್ಧಾಂತೋಪದೇಶ.

**ವಿಶೇಷ :** ಶ್ರೀ. ಎ. ಎಂ. ಚಂದ್ರಶೇಖರಯ್ಯನವರು ಡೋ. ನಂ. 2844, 10 ನೇ ಕ್ರಾಸ್ ರೋಡ್, ವಾಣಿವಿಲಾಸ ಮೊಹಲ್ಲಾ ಇವರಿಂದ ಬಂದ ಕಾಗದದ ಹಸ್ತಪ್ರತಿಯಿಂದ 18-7-55 ರಲ್ಲಿ ಕಾಪಿ ಮಾಡಿಸಿರುತ್ತಾರೆ.

—ಬಿಎಸ್ಎಸ್

## 675

| ಕೆ. ೧೪೮೮/೨ | **ಗುರುಬೋಧಾಮೃತ** | ತ್ರಿಪದಿ |
|---|---|---|
| ೮.೯" × ೧ ೮" | ವಿರತ ಮಹಲಿಂಗದೇವ | ಸು. ೧೫೦೦ |
| ೧-೫೫ ಪತ್ರ | ೯ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀಗುರುವೆ ಗತಿ।। ಗುರುಬೋಧಾಮೃತನ ಬರವುದಕ್ಕೆ ಶುಭಮಸ್ತು।।
ಕಂದ।। ಗುರುಬೋಧಾಮೃತವಿದು ಸ
ದ್ಗುರು ಕಾರುಣ್ಯದೊಳು ತ್ರಿವಿದಿವರ್ನಕದಿಂದಂ
ವಿರಚಿಸಿದನೀ ಕೃತಿಯು ಪ
ಟ್ಪರಮಜ್ಞಾನಿಗಳು ಕೇಳಿ ಶಿವಸುಖದಿರವಂ ।।೧।।

**ಅಂತ್ಯ :** ಗುರುವೆ ಗುರುವೆ ಕರುಣಾಕರ ದುರಿತ
ಹರನೆ ನಿಮ್ಮಯ ಪದವಂ
ಸ್ಮರಿಸಲೆಡ ಬಲದೊಳಿರ್ಪ ನರರೆಲ್ಲರು ಕೇಳ್ದು ಮುಕ್ತರಾದರು ನೋಡಾ ||೧೫೬||

ಅಂತು ಸ್ಥಲ ೫ ಕಂ ಪದನು ಗ್ರಂಥ ವಚನ ವೃತ್ತ ಕಂದ ಸಹಾ ೧೦೨೧ ಕಂ ಗುರುಬೋಧಾಂಮ್ರುತ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಕೆಲವು ಹಾಡುಗಳೂ ಇವೆ.

—ಜಿಜಿಎಂ

## 676

ಕೆ. ಎ. ೩೬೬ | **ಗುರುಬೋಧಾಮೃತ** | ತ್ರಿಪದಿ

೧೩.೪" × ೮.೪" | ವಿರತ ಮಹಲಿಂಗದೇವ | ಸು. ೧೫೦೦

೧-೧೨೩ ಪುಟ | ೨೬ ಪಂಕ್ತಿ | ೧೭ ಅಕ್ಷರ

**ಆದಿ :** ಶ್ರೀಗುರು ಸಿದ್ಧಲಿಂಗಾಯ ನಮಃ ಗುರುಬೋಧಾಮೃತ||
ಕಂದ|| ಗುರುಬೋಧಾಮೃತವಿದು ಸ
ದ್ಗುರು ಕಾರುಣ್ಯದೊಳು ತ್ರಿವಿಧ ವರ್ಣಕದಿಂದಂ
ವಿರಚಿಸಿದ ಕೃತಿಯು ಸಿಶ್ಚಟ
ಪರಮಜ್ಞಾನಿಗಳು ಕೇಳಿ ಶಿವಸುಖದಿ ಮನಂ ||೧||
ಅಜಂವುಳ್ಳಂಗಾನಂದವು
ನಿಜತ ತೋರುವದಿದು ವಿಚಿತ್ರದೊಳ್ಕೇಳ್ಮತ್ತಾ
ಬಜಂಯ ವಾಗ್ಭ್ರಮೆಯೊಳಿಹ ನರ
ಗುರಿಗಳಿಗಿದು ಶಕ್ಯವಲ್ಲವಿದು ಪರಮಾರ್ಥಂ ||೨||

**ಅಂತ್ಯ :** ಭಜಕರಾನಂದದೊಳಗಿಹ
ನಿಜಗುರುಬೋಧಾಮೃತವನು........
...........................ದೊಯಿದು
ದೇಸಿವೊಲಿಗೆಟ್ಟು ಮತ್ತೆ ಸಲಹುವ ತೆಜಗಿಂ।
ನುಡಿಗುರುವಿನ ಕೃಪೆ...........
ನುಡಿಯು...। ನಾಡಮಾತಲ್ಲ ನಡೆನುಡಿ।
ಯಾಡುವ ಚೈತನ್ಯವೆಲ್ಲ ಗುರುವಿನ್ನಲ್ಲದೆ।
ಮೂಡ...........................
....ಪದತಳಕೆ ಪೊಡಮಡುತಿರು ||೧೫೫||

ಅಂತು ಸ್ಥಲ ೫ಕ್ಕಂ ಗ್ರಂಥ ೮೫ಕ್ಕಂ ವೃತ್ತ ೨೧ಕ್ಕಂ ಕಂದ ೩೫ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಅಲ್ಲಲ್ಲಿ ಅಕ್ಷರಗಳು ವಾಕ್ಯಗಳು ಲುಪ್ತವಾಗಿರುವುದರಿಂದ ಪೂರ್ಣಗ್ರಂಥ ವಿದ್ದರೂ ಅಸಮಗ್ರ ಪ್ರತಿಯಾಗಿದೆ.

—ಬಿಎಸ್ಎಸ್

## 677

ಕೆ. ಎ. ೫೨೮ **ಗುರುಬೋಧಾಮೃತ** ತ್ರಿಪದಿ

೯.೧" × ೧೦.೬" ವಿರತ ಮಹಲಿಂಗದೇವ ಸು. ೧೫೦೦

೧-೧೦೨ ಪುಟ ೨೦ ಪಂಕ್ತಿ ೨೦ ಅಕ್ಷರ

**ಆದಿ :** ಗುರುಬೋಧಾಮೃತ||

ಕಂದ|| ಗುರುಬೋಧಾಮೃತವಿದು ಸ
ದ್ಗು....ಣ್ಯದೊಳ ತ್ರಿವಿದ ವನ್ಯಕದೆದಂ
ವಿರಚಿಸಿ ಕೃತಿಯ ನಿಶ್ಚಟ
ಪರಮ ಜ್ಞಾನಿಕು....ಕೆ ಶಿವ.... ಖ.... ಹರನಂ ||೧||

**ಅಂತ್ಯ :** ಬಗೆರಹಿತ ಬ್ರಹ್ಮವನು.... ಜ....
ಗುವ ತೆಬಿ....... ಭಜಕರನಂತದೊ
ಳಗಿಹ ನಿಜಗುರುಬೋಧಾಮೃತವನು
....ದೊಯಿದ ....ಸಿ ಮೊಲೆಗೊಟ್ಟುತೆ ಸಲಹುಹ... ರಗಿ|
ನೋಡಿ ಗುರುವಿನ ತೃಪ್ತಿ....
..............................ನುಡಿಯ
........ತಮು ....... ನಡೆನುಡಿ
ಯಾಡುವ ಚೈತನ್ಯವೆಲ್ಲ ಗುರುವಿನಿಂದಲ್ಲದೆ
ಮೂ........ಪದ ತಳಕ್ಕೆ ಪೊಡಮಡುತಿಹರೂ ||೧೫೫||

ಅಂತು ಸ್ಥಲ ೫ಕ್ಕೆ ಗ್ರಂಥ ೮೧ ವೃತ್ತ ೭೧ ಕಂದ ಮೂವತ್ತೈದು ಮಂಗಳ ಮಹಾಶ್ರೀ

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಪ್ರತಿ ಬಹಳ ಭಾಗದಲ್ಲಿ ಲುಪ್ತವಾಗಿದೆ. 7-9-1979 ರಲ್ಲಿ ನಾರಾಯಣ ಮಧ್ಯಸ್ಥರಿಂದ ಪ್ರತಿ ಮಾಡಿಸಲಾಗಿದೆ.

—ವೈಸಿಬಿ

678

ಕೆ. ೭೭೩/೯ **ಗುರುಬೋಧಾಮೃತ ರಗಳೆ** ರಗಳೆ
೬.೬" × ೧.೮" ? ?
೭೪-೮೭ ಪತ್ರ ೮ ಪಂಕ್ತಿ ೨೪ ಅಕ್ಷರ

**ಆದಿ :** ಶ್ರೀಗುರುಬಸವಲಿಂಗಾಯ ನಮಃ। ಗುರುಭೋದಾಂಮ್ರುತ ರಗಳೆ॥
ವೃತ್ತ॥ ಶ್ರೀಗುರುಪಾದನಾತ್ಮ ಪರಮೇಶನೊ ಶಿಷ್ಯಭವಾಬ್ಧಿ ವಹಿತ್ರನೆ
ಶ್ರೀಗುರು ನಿತ್ಯಭಕ್ತರ ಘನವಾರ್ದ್ಧಿಯ ಪೆರುವ ವಹ್ನಿರೂಪನೆ
ಶ್ರೀಗುರುಮಾನವರ್ಗಳ ಸುತಂನೊಲು ಮಾಡಿದ ನಿತ್ಯಮುಕ್ತನೆ
ಶ್ರೀಗುರು ಪಾಲಿಸೆಂನನೊಲವಿಂ ಕರುಣಾಕರ ಸಿದ್ಧಲಿಂಗನೆ ॥೧॥
ಶ್ರೀಗುರು ನಿತ್ಯನಿರ್ಮಲಗುರುವೆ ಶ್ರೀಗುರುವೆ
ಶ್ರೀಗುರುವೆ ವೇದಾಗಮುಕ್ಕಾತೀತನು ಗುರುವೆ ॥೧॥
ಶ್ರೀಮದಶಿವಾನಂದಶಿವನೆ ನಿಂಮಯ ಸುತನ
ಪ್ರೇಮದಿಂದಲಿ ನೋಡಿ ಸಲಹಯ್ಯ ಶ್ರೀಗುರುವೆ ॥೨॥

**ಅಂತ್ಯ :** ಜಯಜಯತು ಸಿದ್ದಲಿಂಗ ಶ್ರೀಗುರುವೆ
ಜಯತು ತೋಂಟದ ಗುರುವೆ॥ ಜಯಜಯತು
ಸಿದ್ದಲಿಂಗೇಶ್ವರಗೆ ಜಯಜಯತು॥ ॥೧೫೫॥
ಜಯಜಯನಮಸ್ತೆ ನಮಸ್ತೆ ನಮಃ
ಕಂದ॥ ಶ್ರೀಗುರುಮದಗುರುಶಿಷ್ಯನಿದಂ
ಪ್ರೇಮದೊಳಂ ದೀಕ್ಷೆಯಿತ್ತು ದೀಕ್ಷೆಯಕ್ರಮಗಳ
ಪ್ರೇಮದೊಳು ಪೇಳ್ದಂ ಶಿಷ್ಯದೆ
ಕಾಮಿತ ವರವಿದ ಸಿದ್ದಲಿಂಗೇಶ್ವರನು ॥೧॥
ಶ್ರೀಗುರುಸ್ತೋತ್ರನಾಮವ
ಬೇಗದಿ ಬರದೋದಿಕೇಳೆ ಗುರುಮುಖದಿಂದಂ
ಬೇಗ ಅರ್ತಗಳ ಕೇಳಲು
ಶ್ರೀಗುರುಕೃಪೆಯಿಂದ ಭೋಗಮೋಕ್ಷಗಳಕ್ಕುಂ
ಗುರುಭೋದಾಮ್ರುತ ರಗಳೆಯ
ಬರದೋದಿಯೆ ಪಠಿಸಿ ಅರ್ತ್ಥವನು ತಾಂ ಕೇಳ್ವಡೆ
ಮರಣಭಯವಳಿದು ಮುಕ್ತಿಯ
ನೆರೆ ಪಡೆವಂ ಸಿದ್ದಲಿಂಗದೇವರ ಕೃಪೆಯುಂ
ಗುರುಭೋದಾಮ್ರುತದ ರಗಳೆ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ :** ಗುರುಬೋಧೆ.

**ವಿಶೇಷ :** ಕೃತಿ ಸಮಗ್ರ. ಇದರೊಡನೆ ಗುರುರಗಳೆ, ಷಡಕ್ಷರಿಯ ರಗಳೆ, ಶರಣು ಬಸವ ರಗಳೆ, ವೀರಶೈವ ರಗಳೆ, ಭೀಮಕವೀಶ್ವರ ರಗಳೆ, ಸದ್ಗುರು ರಗಳೆ, ಬಸವೇಶ್ವರ ಪವಾಡದ ರಗಳೆ, ಮನೋವಿಕಾರ ರಗಳೆ, ಬಸವರಾಜ ರಗಳೆ, ಲಿಂಗಾರ್ಚನೆ ರಗಳೆ, ಭಕ್ತಿಬಿನ್ನಹದ ರಗಳೆ, ಮಂಗಳಾಷ್ಟಕ, ಶತಗಣ ನಾಮಸ್ತೋತ್ರ, ಅಷ್ಟಾವರಣದ ಮಂಗಳಾಷ್ಟಕ, ಇಪ್ಪತ್ಮೂರು ಮಂಗಳಾಷ್ಟಕಗಳು, ದೇವೀಸ್ತೋತ್ರ ಇತ್ಯಾದಿಗಳಿವೆ.

—ಎಸ್ ಎನ್ ಕೆ

## 679

ಕೆ. ೧೭೮೮/೪ **ಗುರುಬೋಧೆ** ಹಾಡು

೧೪.೫" × ೧.೨" ? ?

೬-೧೩ ಪತ್ರ ೬ ಪಂಕ್ತಿ ೪೮ ಅಕ್ಷರ

**ಆದಿ :** ಶ್ರೀ ಶುಭಮಸ್ತು॥ ಶ್ರೀಗುರುಬೋದೆಯನೆ ಬರೆಯುದಕ್ಕೆ ನಿರ್ವಿಗ್ನಾಮಸ್ತು
ತಡಿಗಾಣದ ಭವಸಾಗರಮಡುವಿನ ಮಧ್ಯದಲಿ ಮುಳುಗುತಯೇಳುತ
ನಡುಗಿ
ಕಡುಬಳಲಿಯೆ ನೊಂದು ಶಿಷ್ಯನು ದೃಢದಿಂ ಗುರುವರನ ಪ್ರಶ್ನೆಯ ಕೇಳಿದ
ಮುದದಿಂ ।ಪಲ್ಲವಿರಾಗ। ಶಂಖರಾಭರಣ। ಅಷ್ಟತಾಳ
ಲಾಲಿಸು ಶ್ರೀಗುರುರಾಯನೆ ಯನ್ನ ಬಾಳುವೆಯನು ಯಂತು ಪೇಳುವೆ
ಹೀನವೃತ್ತಿಯಲಿ ನಾ ನಡದಿದ್ದೆನು ದೃಷ್ಟಮಾನವರುಗಳ ನಂಬಿದೆನು
ಏನೊಂದನರಿಯದೆಯಿದ್ದೆನು ಭವಕಾನನದೊಳು ಮುಳುಗಿದೆನು ॥೧॥

**ಅಂತ್ಯ :** ಗುರುಶಿಷ್ಯರ ಬೋಧಾಕ್ರಮವನು ಅರಿವುದು ಮನದಲಿ ಸಜ್ಜನರು
ತಿರುಪತಿವಾಸನಾ ಚರಣಕಮಲವನ್ನು ಸ್ಮರಿಸಲು ಕೈವಲ್ಯಸಿದ್ಧಿಪುದು ।೩।
ನಿತ್ಯನೆಶುದ್ಧನೆ ಬುದ್ಧನೆ ಸತ್ಯನೆಸಂ ವಿಶ್ವರೂಪಸರ್ವಾತ್ಮಕನೆ
ಪ್ರತ್ಯಗ್ರಹರೂಪನೆ ಪರತರವಸ್ತುವೆ ಜಯವೆಂಕಟೇಶ ಪರಾಕು॥
ವೆಂಕಟಾಚಲಸ್ಮರಣೆ ಗೋವಿಂದ ಗೋವಿಂದಾ
ಶ್ರೀಗುರುಶಿಷ್ಯಬೋದನೆ ಸಂಪೂರ್ನಂ ಮಂಗಳ ಮಹಾಶ್ರೀ ಶ್ರೀ.
ವಿಜಯಸಂವತ್ಸರದ ಶ್ರಾವಣಶುದ್ಧ ೭ ಸೋಮವಾರಂನಾಡು ಗುರುಬೋದ
ಸಂಪೂರ್ನ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೇದಾಂತ ವಿಚಾರ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ನಿರಾಳ ಗುರುಸ್ತೋತ್ರ ಮುಂತಾದ ೯೮ ಕೃತಿಗಳಿವೆ. ಇವುಗಳಲ್ಲಿ ೧೧ ತೆಲುಗು ಕೃತಿಗಳು.

—ಜಿಜಿಎಂ

680

ಕೆ.ಬಿ. ೬೯೨ ಗುರುಬೋಧೆ ಭಾಮಿನೀಷಟ್ಪದಿ,ಟೀಕು

೮.೫" × ೬.೭" ? ?

೧-೭೮ ಪತ್ರ ೧೬ ಪಂಕ್ತಿ ೨೪ ಅಕ್ಷರ

**ಆದಿ :** ಗುರುವೆ ಪೇಳೆನಗೀ ಪಿಂಡಾಡಿರು
ಪರುವ ತೋರಿಸು ದಿವ್ಯತಂತ್ರದಿ
ಮರಿವೆ ಹರಿಯಲು ಮಾರ್ಗಮಾರ್ಗದಿ ಮನವನಿಶ್ಚೈಸು
ಪರವ ತಂದಿಹದೊಳಗೆ ತೋರಿಸು
ಹೊರಗು ವಳಗನು ಯೇಕ ಮಾಡಿಸು
ನಿರುತ ನಿಜಗುರು ಗುಹೇಶ್ವರಲಿಂಗ್ ನೀನೆ ನೀನಾಗು ||೧||

ಟೀಕು|| ಹೇ ಗುರುರಾಯನೇ, ಪಾಮರನಾದ ನನಗೆ ಈಶ ನಿರ್ಮಿತ ಬ್ರಹ್ಮಾಂಡದಂತೆ ಯೇ ಈ ಪಿಂಡಾಂಡವೆಂಬುದು ಬಗೆಯನ್ನು ತಿಳಿಯುವ ಅರುವ್ರುಯೆಂದರೆ ಅದು ಯಾವುದು, ಅದನ್ನು ತಿಳಿಯುವ ತಂತ್ರಗಳಲ್ಲಿ ದಿವ್ಯವಾದ ತಂತ್ರ ವ್ಯಾವದೆಂಬುದನ್ನು ಪೇಳು ಮತ್ತು ಅದನ್ನರಿಯುವ ವಿಷಯದಲ್ಲಿ ವಿಘ್ನ ವನ್ನುಂಟುಮಾಡುವ, ಮರಿವೆ, ಆಲಸ್ಯ, ನಿದ್ರೆಗಳೆಂಬ ಅಜ್ಞಾನ ಕತ್ತಲೆ ಯನ್ನು ಬೆಳಗಿಸುವ ಸುಜ್ಞಾನಮಯ ಸೂರ್ಯನುದಯ ಕಾಲದ ಪ್ರಾಪ್ತಿ ಯನ್ನುಂಟುಮಾಡುವ ಸತ್ಕ್ರಿಯಾಚರಣೆಯು ಪರಮಾರ್ಥ ಸಾರಾನ್ವಯ ದಿಗ್ದರ್ಶನಾನಂದ ಪರವಾಕ್ಯ ಪ್ರಮಾಣ ಪರಿಪೂರ್ಣವೇದಾಂತ
ಈ ಪತ್ನಮಯದೊಳಗಂತೂ ಪ್ರಭು ಪರಾತ್ಪರ ಸನ್ನಿಧಾನ ಸಾಕ್ಷಾತ್ಕಾರ ಪ್ರಸನ್ನಾಂತಃಕರಣ ನಿನ್ನಿಂದಲಾಗುವದೇ ಸಹಜವೆಂದೂಹಿದ ಬಸವಂಗೆ ಪ್ರಭುದೇವರು ಹೇಳಿದ್ದು ||೨||

**ಅಂತ್ಯ :** ಕಲಿಯುಗದಲ್ಲಿ ಬಸವನಾದನೆಂದು ಶಾಸ್ತ್ರ ಗುರು ಸ್ವಾನುಭವಗಳ ಪ್ರತೀತಿ ಯಿಂದ ಶಿದ್ಧವಾದ ಶ್ರೀಹರಿಹರ ..... ತರ್ಗತ ಪರಮಗುರು ಕೃಪಾನುಗ್ರಹ ವೆಂದು ತಿಳಿದಿರುವೆನಲ್ಲದೆ ಗುರು ......ಗರ್ವದಿಂದ ಹೇಳಿದ್ದಿದಲ್ಲವೆಂದು ಹಂಸಕ್ಷೀರನ್ಯಾಯ ನಿರ್ಣಯವಾದ........ಳಿಸಿಸುವ ಸಜ್ಜನ ರೂಹಿಸ ಬೇಕಾಗಿ ಸವಿನಯದ ಪ್ರಾರ್ಥನೆ.

**ವಿಷಯ :** ಪ್ರಭುದೇವರು ಅನುಭವಮಂಟಪದ ಶೂನ್ಯಸಿಂಹಾಸನಾರೋಹಣದಿಂದ ಬಸವನಿಗೆ ತಿಳಿಸಿದ ಬೋಧಾಮೃತ, ವೀರಶೈವ ಸಿದ್ಧಾಂತಗಳು.

**ವಿಶೇಷ :** ಗ್ರಂಥದಲ್ಲಿರುವ ೧೭೫ ಪದ್ಯಗಳಿಗೂ ಸಟೀಕು ಇದೆ. ಬರಹವು ಚೆನ್ನಾಗಿದೆ. ಪತ್ರದ ಎರಡು ಕಡೆಯಲ್ಲಿಯೂ ಬರೆದಿದೆ. ಗ್ರಂಥದ ಕೊನೆಯ ಪತ್ರಗಳಿಗೆ ಹುಳುಹೊಡೆದು ಸಣ್ಣ ಸಣ್ಣ ರಂಧ್ರಗಳಾಗಿವೆ.

—ಕೆಆರ್‌ಎಸ್

## 681

ಕೆ. ೧೧೫೭/೧ — **ಗುರುಭಕ್ತಾಂಡಾರಿ ಚರಿತ್ರೆ** — ವಾರ್ಧಕಷಟ್ಪದಿ

೧೪.೩" × ೧.೮" — ಪೆಮ್ಮಿಸೆಟ್ಟಿ — ಸು. ೧೬೫೦

೧-೪೮ ಪತ್ರ — ೯ ಪಂಕ್ತಿ — ೫೫ ಅಕ್ಷರ

**ಆದಿ:** ಶ್ರೀಗುರುಬಸವಲಿಂಗಾಯ ನಮಃ ಗುರುಭಕ್ತಾಂಡಾರ ಕಾವ್ಯವ ಬರವುದಕ್ಕೆ
ಶುಭಮಸ್ತು ಶೋಭನಮಸ್ತು ||ಪದ||
ಪರಮ ಶ್ರೀಗುರುರಾಯ ಮರುಳು ಸಿದ್ಧೇಶ್ವರನ
ಕರಕಮಲವಾರ್ಧಿ ಪರಿಪೂರ್ನ ಚಂದ್ರಮನೆನಿಪ
ವರಪ್ರಾಸಭೂಷಣನ ಜಿಂಪ್ವೆಯೊಳು ಶಿವನಿರ್ದು ಪೇಳಿಸಿದ ಸತ್ಕೃತಿ
ಯಿದು ||ಪ||
ವಾರ್ದಕಷಟ್ಪದಿ|| ಶ್ರೀಮದಮೃತಾಂಶುಲೇಖಾಂಕಿತ ಜಟಾಭಾರ
ಭೂಮೀಶ ಭಕ್ತಕುಲತಿಲಕ ಕನ್ಯಾರತ್ನ
ಕೋಮಲಿತ ಮುಖಕಮಲ ಬಾಲಭಾಸ್ಕರ ಕಿರಣದೊಳಗೆನ್ನ ಹೃತ್ಕಮಲಮಂ
ಪ್ರೇಮದಿಂದರಳಿಸುವ ಘನಮಹಿಮ ಸುರಗಣ
ಸ್ತೋಮ ಮಣಿಮಕುಟಮಂಡಿತ ನಖಮಯೂಕಪದ
ತಾಮರಸ ಯುಗಳ ಪರಮಾರಾಧ್ಯಮರುಳು ಸಿದ್ದೇಶ ಸಲಹೀಕೃತಿಯನು ೧

**ಅಂತ್ಯ:** ಈ ಮೂರು ಸಂಧಿಯನು ಕೇಳಿದರೆ ಪೇಳಿದರೆ
ಸಾಮಗಾನದೊಳೋದಿ ಬರದೊಳರ್ತ್ಥಿಸಿದೊಡೆ
ಶ್ರೀಮಹಾದೇವನೊಲಿವನು ತಪ್ಪದಿದು ಸತ್ಯವೆಂದರಿದು ಪಾಲ್ಕುರಿಕೆಯಂ
ಸೋಮೇಶ್ವರನು ಪೇಳ್ದ ಕೃತಿಯ ಕನ್ನಡಿಸೆಂದು
ಪ್ರೇಮದಿಂದೊಲಿದು ಬಸವಣ್ಣ ಮತಿಯಂ ಕೊಟ್ಟು
ಭೂಮಿಯೊಳು ಪ್ರಾಸಭೂಷಣನು ಈ ಕೃತಿಯ ಶರಣರಾಲಿಸಿಪಾಲಿಸಿ ೭೭
ಅಂತು ಸಂಧಿ ೩ಕಂ ಪದನೂ|| ಮಂಗಳ ಮಹಾಶ್ರೀಶ್ರೀ.

**ವಿಷಯ:** ಗುರುಭಕ್ತಾಂಡಾರಿಯ ಕಥೆ.

**ವಿಶೇಷ:** ಸಮಗ್ರ. ಪ್ರತಿ ಚೆನ್ನಾಗಿದೆ. ಶುದ್ಧವಾಗಿದೆ. ಇದರ ಜೊತೆಗೆ ಬಾಲ ಚಂದ್ರಶೇಖರ ಅಷ್ಟಕ, ಕಪೋತ ಚರಿತೆ ಮೊದಲಾದ ೧೩ ಕೃತಿಗಳಿವೆ.

—ಜಿಜಿಎಂ

## 682

ಕೆ. ೧೧೭೩/೧ — **ಗುರುಭಕ್ತಾಂಡಾರಿ ಚರಿತ್ರೆ** — ವಾರ್ಧಕಷಟ್ಪದಿ

೬.೯" × ೧.೫" — ಪೆಮ್ಮಿಸೆಟ್ಟಿ — ಸು. ೧೬೫೦

೧-೮೭ ಪತ್ರ — ೭ ಪಂಕ್ತಿ — ೨೦ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ॥ ಶ್ರೀ ಗುರುಭಕ್ತಾಂಡಾರಿಯ ಚಾರಿತ್ರವ ಬರವುದಕ್ಕೆ ಶುಭಮಸ್ತು। ನಿರ್ವಿಘ್ನಮಸ್ತು॥ ಐಶ್ವರ್ಯಮಸ್ತು॥
ಪರನು ಶ್ರೀಗುರುರಾಯ ಮರುಳುಸಿದ್ಧೇಶ್ವರನ
ಕರಕಮಲವಾರ್ಧಿ ಪರಿಪೂರ್ಣಚಂದ್ರಮನೆನಿಪ
ವರ ಪ್ರಾಸಭೂಷಣನ ಜಿಹ್ವೆಯೊಳಗಿರ್ದು ಪೇಳಿಸಿದ ಸತ್ಕೃತಿಯಿದು

ಪದ॥ ಶ್ರೀಮದಮೃತಾಂಶು ಲೇಖಾಂಕಿತ ಜಟಾಭಾರ
ಭೂಮಿಹೃತ್ಕಮಲ ಕೀಲಕ ರಾಜಕನ್ಯಾಸತ್ನ
ಕೋಮಲಿತ ಮುಖಕಮಲ ಬಾಲಭಾಸ್ಕರ ಕಿರಣದೊಳಗೆನ್ನ ಹೃತ್ಕಮಲವಂ
ಪ್ರೇಮದಿಂದರಳಿಸುವ ಘನಮಹಿಮಮಣಿಮಕುಟ
ಮಂಡಿತನಖ ಮೂಖಪದ ತಾಮರಹಯುಗಳ
ಪರಮಾರಾಧ್ಯ ಮರುಳು ಸಿದ್ಧೇಶ ಸಲಹೋ ಕೃತಿಯನು ॥ ॥

**ಅಂತ್ಯ :** ಈ ಮೂರು ಸಂಧಿಯನು ಪೇಳಿದರೆ ಕೇಳಿದರೆ
ಸಾಮಗಾನದೊಳೋದಿ ಬರದು ಅರ್ಥೈಸಿದರೆ
ಶ್ರೀಮಹಾದೇವನೊಲಿವನು ತಪ್ಪದಿದು ಸತ್ಯವೆಂದರಿದು ಪಾಲ್ಕುರಿಕೆಯ
ಸೋಮೇಶ್ವರನು ಪೇಳ್ದ ಕೃತಿಯ ಕನ್ನಡಿಸೆಂದು
ಪ್ರೇಮದಿಂದೊಲಿದು ಬಸವಣ್ಣ ಮತಿಯಂ ಕೊಡಲು
ಭೂಮಿಯೊಳು ಪ್ರಾಸಭೂಷಣ ಪೇಳ್ದ ಕೃತಿಯನಿದ ಶರಣರಾಲಿಸಿಪಾಲಿಸಿ ॥೭೩॥

ಅಂತು ಸಂಧಿ ೩ಕಂ ಪದ ೩ ನೂರಕ್ಕುಂ ಮಂಗಳ ಮಹಾಶ್ರೀ
ವಿಶ್ವಾವಸು ಸಂವತ್ಸರದ ಶ್ರಾವಣ ಶು ೧೫ ಮಿಗೆ ಯಿಾ ಕಾವ್ಯಕ್ಕೆ ಆಚಂದ್ರಾರ್ಕಮಸ್ತು

**ವಿಷಯ :** ಗುರುಭಕ್ತಾಂಡಾರಿಯ ಕಥೆ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಕೈವಲ್ಯಪದ್ಧತಿ ಎಂಬ ಮತ್ತೊಂದು ಕೃತಿ ಇದೆ.
—ವೈಸಿಜಿ

## 683

| ಕೆ. ೧೧೯೧ | **ಗುರುಭಕ್ತಾಂಡಾರಿ ಚರಿತ್ರೆ** | ವಾರ್ಧಕಷಟ್ಪದಿ |
|---|---|---|
| ೧೦.೧″ × ೧.೮″ | ಪೆನ್ಮೆಸಿಟ್ಟೆ | ಸಂ. ೧೬೫೦ |
| ೧-೬೯ ಪತ್ರ | ೧೦ ಪಂಕ್ತಿ | ೩೦ ಅಕ್ಷರ |

**ಆದಿ :** ಶ್ರೀಗುರುಬಸವಲಿಂಗಾಯ ನಮಃ॥ ಗುರುಭಕ್ತಯ್ಯಗಳ ಕಾವ್ಯವ ಬರವುದಕ್ಕೆ ಶುಭಮಸ್ತು॥

ಪದ|| ಪರಮ ಶ್ರೀಗುರುರಾಯ ಮರುಳ ಸಿದ್ಧೇಶ್ವರನ
ಕರಕಮಲವಾರ್ಧಿ ಪರಿಪೂರ್ಣ ಚಂದ್ರಮನೆನಿಪ
ವರ ಪ್ರಾಸಭೂಷಣನ ಜಿಂಹ್ವೆಯೊಳು ಶಿವನಿರ್ದು ಪೇಳಿಸಿದ ಸತ್ಕೃತಿಯಿದೂ||

ವಾರ್ಧಕಷಟ್ಪದಿ|| ಶ್ರೀಮದಮೃತಾಂಶು ಲೇಖಾಂಕಿತ ಜಟಾಭಾರ
ಭೂಮಿ ಭೃತ್ಕುಲತಿಲಕ ರಾಜಕಂನ್ಯಾರತ್ನ
ಕೋಮಲಿತ ಮುಖಕಮಲ ಬಾಲಭಾಸ್ಕರ ಕಿರಣದೊಳಗೆಂನ ಹೃತ್ಕಮಲಂ
ಪ್ರೇಮದಿಂದರಳಿಸುವ ಘನಮಹಿಮ ಸುರಗಣ
ಸ್ತೋಮ ಮಣಿಮಕುಟ ಮಂಡಿತ ನಖಮಯೂಖ ಪದ
ತಾಮರಸಯುಗಳ ಪರಮಾರಧ್ಯ ಮರುಳಸಿದ್ಧೇಶ ಸಲಹೀ ಕೃತಿಯನೂ ೧

**ಅಂತ್ಯ :** ಗದ್ಯ|| ಶ್ರೀಮತ್ಪಂಚಾಕ್ಷರೀ ಪಂಚಮುಖ ಪಂಚಾಚಾರ ಪರಿಪೂರ್ನ ಪರಮ ಗ್ನಾನ ಪರಂಜ್ಯೋತಿ ಪರಮಪ್ರಕಾಶ ಪರಮಕಳೆಯಾ ಪ್ರಣಮೋಂಕಾರ ಪ್ರಾಣಿಲಿಂಗ ಪ್ರತಿಷ್ಟಪಾಲಕ ಪ್ರಸಿದ್ಧಾವತಾರ ಪರಮ ಯೋಗೀಶ್ವರ ಪರಮಗುರು ಮರುಳುಸಿದ್ದೇಶ್ವರನ ಕಾರುಣ್ಯ ಪ್ರಸಾಧಿ ಕವಿ ಬೊಂಮಿ ಸೆಟ್ಟಿಯರು ಶಿವಶರಣರ ಶ್ರೀಪಾದ ರೇಣುವಂ ಧರಿಸಿದ ಬಲದಿಂದ ಪ್ರಾಸ ಭೂಷಣನೆಂಬ ಪೆಸರ್ವೆತ್ತು ಪೇಳಿದ ಶ್ರೀ ಗುರುಭಕ್ತಿಯಾಂಡಾರಿಯ ಚರಿತೆ ಸಂಪೂರ್ನ ಸುಂಗಳ ಮಹಾಶ್ರೀ.
ಅಂತು ಸಂಧಿ ೩ಕ್ಕಂ ಪದನು ೩೦೧ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಗುರುಭಕ್ತಾಂಡಾರಿಯ ಕಥೆ.

**ವಿಶೇಷ :** ಸಮಗ್ರವಾಗಿದೆ. ಇದೇ ಕಟ್ಟಿನಲ್ಲಿ ಅಷ್ಟವಿಧಾರ್ಚನೆಯ ಬಗ್ಗೆ ಎರಡು ಪತ್ರವಿದೆ.

—ವೈಸಿಬಿ

## 684

ಕೆ. ೧೩೫೪/೧ **ಗುರುಭಕ್ತಾಂಡಾರಿ ಚರಿತ್ರೆ** ವಾರ್ಧಕಷಟ್ಪದಿ
೯.೧" × ೧.೭" ಪೆಮ್ಮಿಸೆಟ್ಟಿ ಸು. ೧೬೫೦
೧-೪೩ ಪತ್ರ ೮ ಪಂಕ್ತಿ ೫೦ ಅಕ್ಷರ

**ಆದಿ :** ಗುರುಭಕ್ತಾಂಡ್ಯಾರ ಚರಿತ್ರವ ಬರಿವುದಕ್ಕೆ ಶುಭಮಸ್ತು|| ವಾರ್ಧಿಕಷಟ್ಪದಿ
ಶ್ರೀ ರಾಗಾ........
ಪರಮ ಶ್ರೀಗುರುರಾಯ ಮರುಳಸಿದ್ಧೇಶ್ವರ
ಕರಕಮಲ ವಾರ್ದಿಪರಿಪೂರ್ನ ಚಂದ್ರನೆನಿಪ
ವರ ಪ್ರಾಸಭೂಷಣನ ಜಿಹ್ವೆಯೊಳು ಶಿವನಿದ್ದು ಪೇಳಿದ ಸತ್ಕೃತಿಯಿದೂ
|ಪಲ್ಲ|

ಶ್ರೀಮದಂಮ್ರುತ್ತಾ ಶೂಲ್ಲೆಶಂಕಿತ ಜಟಾಭಾರ
ಭೂಮಿಸತ್ಕುಲತಿಲಕ ರಾಜಕಂನ್ಯಾರತ್ನ
ಕೋಮಲ್ಲಿತ ಮುಖಕಮಲ ಬಾಲಭಾಸ್ಕರ ಕಿರಣದೊಳಗೆಂನ ಹೃತ್ಕಮಲವಂ
ಪ್ರೇಮದಿಂದಲಸುವ ಘನ ಮಹಿಮ ಸುರಗಣ
ಸ್ತೋಮಮಣಿ ಮಕುಟ ಮಂಡಿತ ನಕಮಯೂಖ ಪದ
ತಾಮರಸಯುಗಳ ಪರಮಾರಾದ್ಯೆ ಮರುಳಸಿದ್ದೇಶ ಸಲಹಿ ಕೃತಿಯನೂ ೧

**ಅಂತ್ಯ :** ..........................ಕೇಳಿದರೆ
ಸಾಮಗಾನದೊಳೋದಿ ಭರದು ಆರ್ಥೈಸಿದರೆ
ಶ್ರೀ ಮಹಾದೇವ..........................................
ಸೋಮೇಶ್ವರನು ಪೇಳ್ದ ಕ್ರುತಿಯು ಕಂನಡಿಸೆಂದು
ಪ್ರೇಮದಿಂದೊಲಿದು ಬಸವಂಣ ಮಂತಿಯಂ .......
.................................... ಯ ಶರಣರಾಲಿಸಿ ಪಾಲಿಸಿ ೭೭

ಗದ್ಯ।। ಶ್ರೀಮತ್ಪಂಚಾಕ್ಷರಿಯ ಪಂಚಮುಖದ ಪಂಚಾಚಾರ ಪರಿಪೂರ್ನ....ಕಾಶ ಪರಮಕೆಳೆಯ ಪ್ರಾಣವೋಂಕಾರ ಪ್ರಾಣಲಿಂಗ ಪ್ರತಿಷ್ಠಾ ಪಾಲಕ ಪ್ರಸಿದ್ಧಾವತಾರ ಪರಮಯೋಗೀಶ್ವರ ಪರ.......ವನ ಕಾರುಂಣ್ಯಪ್ರಸದಿ ಶಿವಕವಿ ಪೆಮಿಸೆಟ್ಟಿಯರು ಶಿವಶರಣರ ಶ್ರೀಪಾದ ರೇಣುವಂ ಧರಿಸಿದ ಬಲದಿಂದಾ ಪ್ರಾಸ ಭೂ.......ರು ಭಕ್ತಾರ ಚರಿತೆ ಸಂಪೂರ್ನಂ ಮಂಗಳ ಆಂತು ಸಂಧಿ ೩೮ಂ ಪದನು ೩೦೦೮ಂ ಮಂಗಳ ಮಹಾಶ್ರೀ.

**ವಿಷಯ :** ಗುರುಭಕ್ತಾಂಡಾರಿಯ ಕಥೆ.

**ವಿಶೇಷ :** ಸಮಗ್ರವಾಗಿದ್ದರೂ ೩೯ ರಿಂದ ಮುಂದಿನ ಪತ್ರಗಳು ಅರ್ಧಭಾಗದಷ್ಟು ಮುರಿದು ಲುಪ್ತವಾಗಿವೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಚಾಳಾಂಕಿ ಶತಕ, ಶಿವಸ್ತುತಿಯ ಕೆಲವು ಪತ್ರಗಳಿವೆ.

—ಕೆಆರ್ ಎಸ್

## 685

ಕೆ.ಬಿ. ೫೪೦/೩ **ಗುರುಭಕ್ತಾಂಡಾರಿ ಚರಿತ್ರೆ (ಪ್ರೌಢಾವತಿ ಕಥೆ)** ಷಟ್ಪದಿ
೯"×೭" ಪೆಮ್ಮಿಸೆಟ್ಟಿ ಸು. ೧೬೫೦
೭೫-೧೦೯ ಪತ್ರ ೧೬ ಪಂಕ್ತಿ ೨೫ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ। ಶ್ರೀಗುರುವೇ ಗತಿ। ಶ್ರೀ ಶಾರದಾಂಬಾಯೇ ನಮಃ। ಶ್ರೀ ಬಸವಾಯ ನಮಃ। ಪರಮಗುರುಭ್ಯೋನಮಃ। ಶ್ರೀ ಗುರುಭ್ಯೋನಮಃ।

ಸಾಧಾರಣ ಸಂವತ್ಸರದ ಮಾಘ ಬ ೧ಲ್ಲು ಸೋಮವಾರದಲ್ಲು ಬಳೆಸಾಲೆ ಸಂಜುಂಡಪ್ಪನ ಕೊಮಾರ ಶಿದ್ದನಂಜಪ್ಪನ ವಹಿಗೆ ಪ್ರಹುಡಾವತಿ ಕಥೆ ಬರಿಯುಂಪದಕ್ಕೆ ಶುಭಮಸ್ತು||

ಸೂಚನೆ|| ಪರಮಶ್ರೀಗುರುರಾಯ ಮರುಳುಶಿದ್ದೇಶ್ವರನ
ಕರಕಮಲವಾರ್ಧಿ ಪರಿಪೂರ್ನಚೆಂದ್ರಮನೆನಿಪ
ಪರ ಪ್ರಾಸಭೂಷಣನ ಜಿಂಹ್ವೆಯೊಳ್ ಶಿವನಿರ್ದು ಪೇಳಿಶಿದ ಸತ್ಕೃತಿಯಿದು

||ಪದನೂ|| ಶ್ರೀ ಮದಮೃತಾಂಶುಲೇಖಾಂಕಿತ ಜಟಾಭಾರ
ಭೂಮಿಭೃತ್ಕುಲ ತಿಲಕ ರಾಜ್ಯ ಕಂನ್ಯಾರತ್ನ
ಕೋಮಲ ಲವಿತಮುಖ ಕಮಲ ಬಾಲ ಭಾಸ್ಕರ ತೆರುಣದೊಳಗೆಂನ್ನ ಹೃತ್ಕಮಲವಂ
ಪ್ರೇಮದಿಂದರಳಿಸುವ ಘನಮಹಿಮ ಸುರಗಣ
ಸ್ತೋಮ ಮಣಿಮುಕುಟ ಮಂಡಿತ ಕನಕ ಮಯೂಖಪದ
ತಾಮರಸ ಯುಗಳ ಪರಮಾರಾಧ್ಯ ಮರುಳುಶಿದ್ಧೇಶ ಸಲಹೀ ಕೃತಿಯನೂ

X X X ||೧||

ಅನುಪಮ ವಿಚಿತ್ರಕವಿ ಪಾಲ್ಕುರಿಕೆಸೋಮೇಶ್ವ
ರನ ಭಾಷೆಯೊಳು ದ್ವಿಪದಿಯಂ ಪೇಳ್ದ ಚಿ
ಧ್ಯಾನ ಮಹಿಮ ಗುರುಭಕ್ತಯಂಡಾರ ಚರಿತೆಯಂ ಆರಾಧ್ಯಚರಿತೆಯೊಳಗೆ
ಮನವಲಿದು ತೆಗದು ಕಂನ್ನಡಿಸೆಂದು ಬಸವಂಣ
ನೆನಹಿನೊಳ್ ಬಂದು ಭಕಿತವನಿಟ್ಟು ಮತಿಗೊಟ್ಟು
ವಿನಯದಿಂ ಪ್ರಾಸಭೂಷಣ ಪೇಳ್ದನೀ ಕೃತಿಯ ಶರಣರಾಲಿಶಿ ಪಾಲಿಶೀ ||೧೬||

ಅಂತ್ಯ : ನರಜಲ್ಮದಲ್ಲಿ ಹುಟ್ಟಿ ಕ್ರಿಮಿಕೀಟಂಗಳಿಗೆ
ಯತಿಯಾದ ಪಾತಕತೆಯ್ಯಿದಿಂಗವ ಕೊಟ್ಟು
ಗುರುರಾಯನೊಲಿದು ಸಲಹುತಿರಲು.... ಬಂದು ಕೈವಿಡಿಕ....
ಸರಿಗದ್ದುಗೆಯನಿತ್ತು ಪಾಲಿಸಿದ ಹೆಂಮೆಯಲಿ
ಯರಸ ನಿಂಮ್ಮನ ಅರಿಯದೊಂದೊಂದ ನಾನಿದನು
ಪರಿಹರಿಸಬೇಕಿಂನ್ನು ಹಡಪದೊಳಗವಿತ್ತು ಹಾದ... ದ್ದಕ್ಕಿಸಂತ್ರೆ ||೫೮||

**ವಿಷಯ** : ಪ್ರೌಢಾವತಿಯ ಕಥೆ.

**ವಿಶೇಷ** : ಅಸಮಗ್ರ ಕೃತಿ. ಅತ್ಯಂತ ಶಿಥಿಲ. ಪ್ರತಿ ಪತ್ರಗಳ ಎರಡು ಪಾರ್ಶ್ವಗಳಲ್ಲೂ ಬರವಣಿಗೆ ಇದೆ. ಮೂರನೆಯ ಸಂಧಿಯಲ್ಲಿ ೫೪ ನೆಯ ಪದ್ಯ ಪೂರ್ತಿ ಗ್ರಂಥವಿದೆ. ಹುಳುತಿಂದು ಕಾಗದದಲ್ಲಿ ರಂಧ್ರಗಳಾಗಿವೆ. ಮುಂದೆ ೧೧೦

ರಿಂದ ೧೧೨ ವರೆಗೆ ಶುದ್ಧ ಪತ್ರಗಳು. ಈ ಕಟ್ಟಿನಲ್ಲಿ ಭೇತಾಳ ಪಂಚವಿಂಶತಿ ಕಥೆ, ನಳಚರಿತ್ರೆ, ಮಾರ್ಕಂಡೇಯ ಚರಿತ್ರೆ, ಶಬರ ನಾಟಕ, ಲವಕುಶರ ಕಥೆ, ಪಂಚವಟೀ ರಾಮಾಯಣ ಎನ್ನುವ ಕೃತಿಗಳಿವೆ.

—ಎಸ್ ಎಸ್ ಕೆ

## 686

ಕೆ.ಬಿ. ೬೯೯/೨೪ | **ಗುರುಮಹಾತ್ಮೆ** | ತ್ರಿಪದಿ
೬" × ೮.೫" | ಸರ್ವಜ್ಞ | ೧೬ನೇ ಶತಮಾನ
೨೭-೨೯ ಪತ್ರ | ೩೧ ಪಂಕ್ತಿ | ೨೨ ಅಕ್ಷರ

**ಆದಿ :** ಶ್ರೀಗುರು ಬಸವಲಿಂಗಾಯ ನಮಃ|| ಗುರುಮಹಾತ್ಮೆ|| ಸರ್ವಗ್ನ||
ಗುರುಪಾದಕ್ಕೆರಗಿದರೆ ಶಿರ ಶಿಖಾಮಣಿಯಕ್ಕು
ಪರಿಣವಕ್ಕು ಪದವಕ್ಕು| ಕೈಲಸ
ನೆರಮನೆಯಕ್ಕು ಸರ್ವಗ್ನ ||೧||

**ಅಂತ್ಯ :** ಹಸ್ತಿನಿಗೆ ನಾಲ್ವೆರಳು ಚಿತ್ತಿನಿಗೆ ಮೂವೆರಳು
ಮತ್ತೆ ಸಂಕಿನಿಗೆ ಯಿಬ್ಬೆರಳು| ಪದ್ಮಿನಿಗೆ
ವೊಬ್ಬೆರಳು ಕುಚಲು ಸರ್ವಗ್ನ ||೫೧||

**ವಿಷಯ :** ಗುರುಮಹಿಮೆ ಮತ್ತು ಲೋಕವಾರ್ತೆ.

**ವಿಶೇಷ :** ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರವಣಿಗೆ. ಮೋಡಿ ಅಕ್ಷರ. ಇದರೊಂದಿಗೆ ಪುಷ್ಪದ ಅಷ್ಟಕ ಮುಂತಾದ ಕೃತಿಗಳಿವೆ.

—ಎಂಪಿಎಂ

## 687

ಕೆ.ಬಿ. ೫೧೦/೪ | **ಗುರುಮುರಿಗೇಂದ್ರ ಷಟ್ಪದಿ** | ವಾರ್ಧಕಷಟ್ಪದಿ
೮.೨" × ೬.೬" | ? | ೧೮ನೆಯ ಶತಮಾನ
೪-೬ ಪತ್ರ | ೧೮ ಪಂಕ್ತಿ | ೧೪ ಅಕ್ಷರ

**ಆದಿ :** ರಸರುದ್ರ ಆದಿತ್ಯ ವಶಗೂಡಿದೋತ್ಸರದ
ಪೆಸರಾಂತನಗ್ರಜನ ಮಾತೆಗತಿ ಸ್ನೇಹಿತನ
ಎಸೆವ ಕುವರನ ತಂಗಿವರನ ತಿಂಬನು ತಲೆಯೊಳ್ಬಿಸುಗೆ ಯಿಲ್ಲದೆ ಪೊತ್ತ ಳಾ
ಬಸುರಿನಲಿ ಬಂದವಳ ಸಸಿನದಿಂ ಆಳ್ದವಗೆ
ಮುಸಗಿ ಖತಿ ತಾಳ್ದವನ ಅಪ್ಪನಯ್ಯನ ಮಾವ್ನ
ಕುಶಲಸುತೆಯೊಳಿದನ ಕೊಟ್ಟವ ರಕ್ಷಿಪನೆ ವಸುಧೆ ಗುರುಮುರಿಗೇಂದ್ರನೇ ||೧||

ಟೀಕು॥ ರಸ ಎಂದರೆ ೬. ರುದ್ರ ೧೧. ಆದಿತ್ಯ ೧೨. ಅಂತು ೨೯ನೆ ವರುಷ ಮನ್ಮಥ ಇವನ ಅಣ್ಣ ಬ್ರಹ್ಮ. ಮಾತೆ–ಕಮಲ. ಸ್ನೇಹಿತ–ಸೂರ್ಯ. ಕುವರ–ಸುಗ್ರೀವ. ತಂಗಿ–ಅಂಜನಾದೇವಿ. ವರ–ವಾಯು. ತಿಂಬುವನು–ಸರ್ಪ. ಪೊತ್ತದು–ಭೂಮಿ. ಮಗಳು–ಜಾನಕಿ. ಆಳಿದನ–ರಾಮದೇವರು. ಖತಿಯ ತಾಳ್ದವ–ರಾವಣ ಅಪ್ಪ ಪೌಲಸ್ತ್ಯ. ಇವನ ತಂದೆ–ಕಶ್ಯಪ. ಇವನ ಮಾವ –ದಕ್ಷಬ್ರಹ್ಮ. ಸುತೆ–ಪಾರ್ವತಿ. ಆಳಿದವ–ಈಶ್ವರ. ಈ ಲಿಂಗವನ್ನು ಕೊಟ್ಟಂಥಾ ಗುರು ಸ್ವಾಮಿಯವರನ್ನು ರಕ್ಷಿಸುವಂಥಾ ವಸುಧೆ ಗುರು ಮುರಿಗೇಂದ್ರ ಸಲಹೆಂದನೂ ॥೧॥

**ಅಂತ್ಯ :** ವರಪುತ್ರ–ಕಶ್ಯಪ. ಇವನ ಮಗ–ಪೌಲಸ್ತ್ಯ. ಇವನ ಮಗ–ರಾವಣೇಶ್ವರ. ವೈರಿ–ರಾಮದೇವರು. ಭಂಟ–ಹನುಮಂತ. ಪಡದವ–ವಾಯು. ವಧು–ಅಂಜನಾದೇವಿ. ಅಣ್ಣ–ವಾಲಿ. ಪೆತ್ತವ–ದೇವೇಂದ್ರ. ಇವಗೆ ಭೋಗವನ್ನು ಕೊಟ್ಟವ ಈಶ್ವರ. ಈ ಲಿಂಗವನ್ನು ಕರಕೆ ಕೊಟ್ಟಂಥಾ ಗುರುಸ್ವಾಮಿಯವರ ರಕ್ಷಿಸುವಂಥಾ ಜಗದ್ಗುರು ಮುರಿಗೇಂದ್ರ ತ್ರಾಹಿ ತ್ರಾಹಿ ತ್ರಾಹೀ ಶ್ರೀ ॥೩॥

**ವಿಷಯ :** ಮುರಿಗೇಂದ್ರಸ್ವಾಮಿಯವರ ಸ್ತುತಿ.

**ವಿಶೇಷ :** ಮೇಲಿನ ವಸ್ತುವಿಗೆ ಸಂಬಂಧಿಸಿದಂತೆ ಕೇವಲ ಮೂರು ಪದ್ಯಗಳೂ, ಅವಕ್ಕೆ ಟೀಕು ಸಹ ಇವೆ. ಇದೇ ಪುಸ್ತಕದಲ್ಲಿ ಕಲ್ಲೆ ಲಿಂಗೇಶ್ವರನ ಚಾರಿತ್ರ, ವಂಶಾವಳೀ ಟೀಕು, ಮಣ್ಣೇಶ್ವರ ನಾಂದ್ಯಗಳೆಂಬ ಇತರ ಮೂರು ಕೃತಿಗಳಿವೆ. ಗ್ರಂಥವು ಉತ್ತಮ ಸ್ಥಿತಿಯಲ್ಲಿದೆ ಸಿರಿಗೆರೆಯ ಶ್ರೀ ರುದ್ರಪ್ಪಯ್ಯನವರಿಂದ ತರಿಸಿಕೊಂಡ ಓಲೆ ಗ್ರಂಥದ ಮರುಪ್ರತಿಯಾದ ಈ ಪುಸ್ತಕವನ್ನು ಶ್ರೀ ಎಂ. ಎಸ್. ಬಸವರಾಜಯ್ಯನವರು ಪ್ರತಿಮಾಡಿದ್ದಾರೆ.

—ಕೆಆರ್ಎಸ್

688

| ಕೆ. ೭೭೩/೧ | **ಗುರು ರಗಳೆ** | ರಗಳೆ |
|---|---|---|
| ೬.೬″ × ೧.೮″ | ತ್ರಿಭುವನತಾತ | ಸು. ೧೨೬೦ |
| ೧-೩ ಪತ್ರ | ೭ ಪಂಕ್ತಿ | ೨೨ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ।
ಯಿರುಳು ಹಗಲೆಂಬುದನಜಿಯದೆ
ಗುರುಚರಣವ ಭಜಿಸು ಮನವೆ ಸಂಚಲ ವಿಲದಿ
ಪರತನೂರ್ತೆ ಗತಿಯನಿಹುದ ಹರನಿ ಗುರುಮೂರ್ತಿ
ಶರಣು ಗುರು। ವಿಸ್ವಶ॥

ರಗಳೆ॥ ಸ್ವಸ್ತಿಶ್ರೀ ನಿಜಪರಮ ಪ್ರತ್ಯಕ್ಷ ಗುರುಶರಣು ॥೧॥
ಭಕ್ತಿ ಭಯುದಯುದವೃತವಿತ್ತ ಶ್ರೀಗುರುಶರಣು ॥೨॥
ನೆತ್ತಿಗಾಂಘ್ರಿಯನಿತ್ತು ಸಲಹೆಂನ ಶರಣು ॥೩॥
ಮುಕ್ತಿಭಾವದ ರೂಪ ತಾಳ್ದು ಸಲಹೆಂದ ಗುರುಶರಣು ॥೪॥

ಅಂತ್ಯ: ಹಾರೈಸಿ ಚಾಪದನ ಚಿತ್ತೈಸಿ ಗುರುಶರಣು ॥೫೯॥
ಮಾರಾರಿಯೆನಿಪ ಗುರುವಿಶ್ವೇಶಾ ಗುರುಶರಣು ॥೬೦॥

ಕಂದ॥ ಆದಿಯನಾದಿಗಳೆಂಬಿವ
ಬೇದಿಸಿದರದಿ ತಂದು ಯೋಗಶಿರ ಸಾಧ್ಯದೊಳಿಸಿ
ಬೋದಿಸಿ ಗುರು ಸುಜ್ಞಾನದ
ಹಾದಿಯು ತೋಱಿಸಿದನೆಂಮಯ ಗುರು ವಿಶ್ವೇಶಾ ॥೬೧॥
ಗುರುರಗಳೆ ಸಮಾಪ್ತ ಮಂಗಳ ಮಹಾಶ್ರೀ.

**ವಿಷಯ:** ಗುರುಸ್ತುತಿ.

**ವಿಶೇಷ:** ಗ್ರಂಥ ಸಮಗ್ರ. ಇದರೊಡನೆ ಷಡಕ್ಷರಿಯ ರಗಳೆ, ಶರಣು ಬಸವ ರಗಳೆ, ವೀರಶೈವ ರಗಳೆ, ಬಸವೇಶ್ವರ ಪವಾಡದ ರಗಳೆ, ಸದ್ಗುರು ರಗಳೆ, ಮನೋವಿಕಾರ ರಗಳೆ, ಗುರುಬೋಧಾಮೃತ ರಗಳೆ, ಬಸವರಾಜ ರಗಳೆ, ಲಿಂಗಾರ್ಚನೆ ರಗಳೆ, ಭಕ್ತಿ ಬಿನ್ನಹದ ರಗಳೆ, ಮಂಗಳಾಷ್ಟಕ(ಗಣನಾಮಸ್ತೋತ್ರ), ಅಷ್ಟಾವರಣದ ಮಂಗಳಾಷ್ಟಕ, ಇಪ್ಪತ್ತೊಮ್ಮರು ಮಂಗಳಾಷ್ಟಕಗಳು, ದೇವೀಸ್ತೋತ್ರ ಇತ್ಯಾದಿಗಳಿವೆ.

—ಎಸ್ ಎನ್ ಕೆ

## 689

| ಕೆ. ೧೧೩೮/೧ | **ಗುರು ರಗಳೆ** | ರಗಳೆ |
|---|---|---|
| ೬.೮" × ೨" | ತ್ರಿಭುವನತಾತ | ಸು. ೧೭೯೦ |
| ೧ನೆಯ ಪತ್ರ | ೧೪ ಪಂಕ್ತಿ | ೫೦ ಅಕ್ಷರ |

ಆದಿ: ..................................
..................................
..........ದೊಲಿದು ಬಗೆಪುದು
ಹರನೆ ಗುರುಮೂರ್ತಿ ಸಲಹು ಶರಣು ಗುರುವಿಶ್ವೇಶಾ ॥೧॥

ರಗಳೆ॥ ಸ್ವಸ್ತಿ ಶ್ರೀ ನಿಜಪರಮ ಪ್ರತ್ಯಕ್ಷ ಗುರುಶರಣು
ಭಕ್ತಿ ಭಯುದಯುದಮೃತವಿತ್ತ ಶ್ರೀಗುರುಶರಣು ॥೨॥

**ಅಂತ್ಯ** : ಕಂದ|| ಆದಿಯನಾದಿಗಳೆಂಬಿವ
ಭೇದಿಸಿ ತಂದು ಯೋಗಶಿವ ಸಾಧ್ಯದೊಳಗಿರಿಸಿ
ಬೋಧಿಸಿ ಗುರು ಸುಜ್ಞಾನದ
ಹಾದಿಯ ತೋರಿಸಿದನೆಂಮಯ ಗುರುವಿಶ್ವೇಶಾ ||೬೧||
ಗುರು ರಗಳೆ ಸಮಾಪ್ತ ಮಂಗಳ ಮಹಾಶ್ರೀ ಶ್ರೀ

**ವಿಷಯ** : ಗುರುಸ್ತುತಿ.

**ವಿಶೇಷ** : ಇದೇ ಕಟ್ಟಿನಲ್ಲಿ ಷಡಕ್ಷರಿಯ ರಗಳೆ, ಶರಣಬಸವ ರಗಳೆ ಇತ್ಯಾದಿ ೬೯ ಕೃತಿಗಳಿವೆ.

—ಜಿಜಿಎಂ

690

**ಗುರು ರಗಳೆ**

ಕೆ. ೧೧೮೮/೧ ರಗಳೆ
೫.೪" × ೧.೬" ತ್ರಿಭಾಷಸತಾಕ ಸು. ೧೨೯೦
೧-೫ ಪತ್ರ ೭ ಪಂಕ್ತಿ ೨೨ ಅಕ್ಷರ

**ಆದಿ** : ಗುರುರಗಳೆ ಕಂದ||
ಯಿರುಳು ಹರವೆಂಬುದನರಿಯದೆ
ಗುರು ಚರಣವ ಬಜಿಸು ಮನವ ಸಂಚಲವಿಲ್ಲದೆ
ಪರಮಾರ್ಥ ಗತಿಯನೀವುದು
ಹರನೆ ಗುರುಮೂರ್ತಿ ಸಲಹು ಶರಣು ಗುರುವಿಶ್ವೇಶ||
ರಗಳೆ|| ಸ್ವಸ್ತಿ ಶ್ರೀ ನಿಜಪರಮ ಪ್ರೆತ್ಯಕ್ಷ ಗುರುಶರಣು ||೧||
ಭಕ್ತಿ ಭಯುದಯದಾಪುಣ್ಯತಪವಿತ್ರ ಶ್ರೀಗುರುಶರಣು ||೨||

**ಅಂತ್ಯ** : ಸಾರಾಯ ಪರಮಾರ್ತ್ಥ ಪದವಿತ್ತ ಗುರುಶರಣು ||೫೯||
ಮರಾರಿಯೆನಿಪ ಗುರು ವಿಶ್ವೇಶ ಗುರುಶರಣು ||೬೦||
ಕಂದ|| ಆದಿಯನಾದಿಗಳೆಂಬಿವ
ಭೇದಿಸಿ ತಂದು ಯೋಗ ಸಾಧ್ಯದೊಳಗಿರಿಸಿ
ಬೋಧಿಸಿ ಗುರು ಸುಗ್ನಾನದ
ಹಾದಿಯ ತೋಱಿಸಿದನೆಂಮ್ಮ ಗುರುವಿಶ್ವೇಶಾ ||೬೧||
ಗುರುರಗಳೆ ಸಮಾಪ್ತ ಮಂಗಳ ಮಹಾಃ ಶ್ರೀ||

**ವಿಷಯ** : ಗುರುಸ್ತುತಿ.

**ವಿಶೇಷ** : ಸಮಗ್ರ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಷಡಕ್ಷರಿ ರಗಳೆ, ಶರಣಬಸವ ರಗಳೆ, ಮನೋವಿಕಾರ ನಿರಸನ ರಗಳೆ, ಭಕ್ತಿಬಿನ್ನಹ ರಗಳೆ, ವೀರೇಶ್ವರ

